# ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ

(ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ
ಸಂಶೋಧನಾ ಮಹಾಪ್ರಬಂಧ



ಸಂಶೋಧಕರು :
ಶಿದ್ಲಿಂಗಪ್ಪ ಎಸ್ ಹುರಕಡ್ಲಿ

ಮಾರ್ಗದರ್ಶಕರು :
ಡಾ. ಗಂಗಾಧರ ದೈವಜ್ಞ
ಸಹ ಪ್ರಾಧ್ಯಾಪಕರು








ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೨

# ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ

## (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ
ಸಂಶೋಧನಾ ಮಹಾಪ್ರಬಂಧ

ಸಂಶೋಧಕರು
**ಶಿದ್ಲಿಂಗಪ್ಪ ಎಸ್ ಹುರಕಡ್ಲಿ**

ಮಾರ್ಗದರ್ಶಕರು
**ಡಾ. ಗಂಗಾಧರ ದೈವಜ್ಞ**
ಸಹ ಪ್ರಾಧ್ಯಾಪಕರು



**ಸಮಾಜ ವಿಜ್ಞಾನಗಳ ನಿಕಾಯ**
**ಬುಡಕಟ್ಟು ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ-೫೮೩೨೭೬.

**೨೦೧೨**

# ದೃಢೀಕರಣ ಪತ್ರ

ಶ್ರೀ ಶಿದ್ಲಿಂಗಪ್ಪ ಎಸ್ ಹುರಕಡ್ಲಿ ಅವರು **"ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ"** (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

**(ಡಾ. ಗಂಗಾಧರ ದೈವಜ್ಞ)**

ಮಾರ್ಗದರ್ಶಕರು ಹಾಗೂ ಸಹ ಪ್ರಾಧ್ಯಾಪಕರು

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

# ಪ್ರಮಾಣ ಪತ್ರ

**"ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ"** (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಬುಡಕಟ್ಟು ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ಗಂಗಾಧರ ದೈವಜ್ಞ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರಾವುದೇ ಪದವಿಗಾಗಲಿ ಅಥವಾ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

**(ಶಿದ್ಲಿಂಗಪ್ಪ ಎಸ್ ಹುರಕಡ್ಲಿ)**
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಎ. ಮುರಿಗೆಪ್ಪ ಅವರಿಗೆ, ಇಂದಿನ ಪ್ರಭಾರಿ ಕುಲಪತಿಗಳಾದ ಮಾನ್ಯ ಡಾ. ಹಿ.ಚಿ. ಬೋರಲಿಂಗಯ್ಯ ಅವರಿಗೂ ಈಗಿನ ಕುಲಸಚಿವರಾದ ಪ್ರೊ, ಮಂಜುನಾಥ ಬೇವಿನಕಟ್ಟಿಯವರಿಗೂ ತುಂಬು ಹೃದಯದ ಕೃತಜ್ಞತೆಗಳು. ಆಡಳಿತ ವರ್ಗದ ಇತರ ಎಲ್ಲ ಹಿರಿಯರಿಗೆ, ಅಧ್ಯಯನಾಂಗದ ಹಿಂದಿನ ನಿರ್ದೇಶಕರಾದ ಪ್ರೊ, ಪಾಂಡುರಂಗ ಬಾಬು ಮತ್ತು ಇಂದಿನ ನಿರ್ದೇಶಕರಾದ ಡಾ. ಎಫ್.ಟಿ. ಹಳ್ಳಿಕೇರಿ ಅವರಿಗೆ, ಸಂಶೋಧನಾ ಅಧ್ಯಯನಕ್ಕೆ ಅವಕಾಶ ನೀಡಿದಂತಹ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನ ಕ್ರಮವನ್ನು ಬೋಧಿಸಿ, ಮಹಾಪ್ರಬಂಧದ ರಚನೆಯ ಪ್ರತಿ ಹಂತದಲ್ಲಿ ನನ್ನನ್ನು ಪ್ರೋತ್ಸಾಹಿಸಿ ತಪ್ಪಿದ್ದಲ್ಲಿ ಪ್ರೀತಿಯಿಂದ, ತಾಳ್ಮೆಯಿಂದ ತಿದ್ದಿ ನನ್ನ ಸಂಶೋಧನಾ ಮಹಾಪ್ರಬಂಧಕ್ಕೆ ಒಂದು ರೂಪ ಕೊಡಲು ಸೂಕ್ತ ಸಲಹೆ ಸೂಚನೆಗಳನ್ನು ಕೊಟ್ಟು ಮುನ್ನಡೆಸಿದ ನನ್ನ ಮಾರ್ಗದರ್ಶಕರಾದ ಡಾ. ಗಂಗಾಧರ ದೈವಜ್ಞ ಅವರಿಗೂ, ಆತ್ಮೀಯ ವಿಶ್ವಾಸದಿಂದ ನೋಡಿದ ಶ್ರೀಮತಿ ಸರೋಜಾ ದೈವಜ್ಞ ಅವರಿಗೂ, ಪುಟ್ಟಿ ಭಾಗೀರಥಿ ಹಾಗೂ ಕುಟುಂಬದವರೆಲ್ಲರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಅಧ್ಯಯನದ ಬಗ್ಗೆ ಸದಾ ವಿಚಾರಿಸುತ್ತಾ ಪ್ರೋತ್ಸಾಹ ನೀಡಿದ ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥರಾಗಿರುವ ಡಾ. ಎ.ಎಸ್. ಪ್ರಭಾಕರ್ ಅವರಿಗೂ, ಅಧ್ಯಾಪಕರುಗಳಾದ ಡಾ. ಕೆ.ಎಂ. ಮೇತ್ರಿ, ಡಾ. ಕೇಶವನ್ ಪ್ರಸಾದ್, ಡಾ. ಚಲುವರಾಜು ಅವರಿಗೂ ಧನ್ಯವಾದಗಳು. ಕನ್ನಡ ವಿಶ್ವವಿದ್ಯಾಲಯದ ಗ್ರಂಥಪಾಲಕರಿಗೂ ಹಾಗೂ ವಿಭಾಗದ ಸಿಬ್ಬಂದಿಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ನಮ್ಮ ಕುಟುಂಬದ ರಕ್ಷಾಕವಚವಾಗಿ ನಮಗೆಲ್ಲರಿಗೂ ಜ್ಯೋತಿಯಾಗಿ ಬೆಳಗುತ್ತಿರುವ ನಮ್ಮ ಶ್ರೇಯಸ್ಸಿಗೆ ಕಾರಣರಾಗಿರುವ ಅಜ್ಜನವರಾದ ದಿ. ಶಿದ್ಲಿಂಗಪ್ಪನವರು ಹುರಕಡ್ಲಿ ಅವರಿಗೆ ಈ ಕೃತಿಯನ್ನು ಅರ್ಪಿಸುತ್ತಾ, ಸದಾ ನನ್ನ ಶ್ರೇಯಸ್ಸನ್ನೇ ಬಯಸುತ್ತ ನನ್ನ ಓದಿಗೆ ಬೆನ್ನೆಲುಬಾಗಿ ನಿಂತು ನನ್ನ ಕನಸನ್ನು ನನಸು ಮಾಡುತ್ತಾ ಬಂದಿರುವ ಪೂಜ್ಯ ತಂದೆಯವರಾದ ಸಂಗಪ್ಪನವರು ಮತ್ತು ತಾಯಿ ಶ್ರೀಮತಿ ಶಾಂತಮ್ಮ, ನನ್ನ ಅಧ್ಯಯನಕ್ಕೆ ದಾರಿದೀಪವಾಗಿ ಸದಾ ಪ್ರೋತ್ಸಾಹಿಸುತ್ತಾ ಬರುತ್ತಿರುವ ಹಿರಿಯ ಸಹೋದರರ ಶಿವಕುಮಾರ ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಸಹೋದರರಾದ ಬಸವರಾಜ, ಗಂಗಾಧರ, ಆನಂದ ಹಾಗೂ ಸಹೋದರಿಯರಾದ ಶ್ರೀಮತಿ ಸಿದ್ದಮ್ಮ(ಮಧು), ಶ್ರೀಮತಿ ನೀಲಮ್ಮ(ಅನಿತಾ) ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೂ ಅತ್ತಿಗೆಯರಾದ ಶ್ರೀಮತಿ ಸುಜಾತಾ

ಹಾಗೂ ಸೊಸೆಯಂದಿರಾದ ಶ್ರೀಮತಿ ಸಂಗೀತಾ, ಶ್ರೀಮತಿ ಅನ್ನಪೂರ್ಣಾ, ಶ್ರೀಮತಿ ವಿದ್ಯಾ ಅವರಿಗೂ ವಿಶೇಷವಾದ ನಮನವನ್ನು ಸಲ್ಲಿಸುತ್ತೇನೆ. ನನ್ನ ಅಧ್ಯಯನಕ್ಕೆ ಸಹಕಾರ ಮತ್ತು ಪ್ರೋತ್ಸಾಹ ನೀಡಿದ ನನ್ನ ಬಾಳಸಂಗಾತಿಯಾದ ಶ್ರೀಮತಿ ಶಕುಂತಲಾ ಅವರನ್ನು, ಮಕ್ಕಳಾದ ಸಹನಾ, ಸೌಜನ್ಯ, ಅಧ್ಯಯನದ ಸಂದರ್ಭದಲ್ಲಿ ಒಂದು ರೀತಿ ಸಹಾಯ ಮಾಡುತ್ತಲೇ ಇದ್ದ ಮಗ ಶಶಾಂಕ (ವಿಶ್ವನಾಥ), ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ. ಮಾವನವರಾದ ಶ್ರೀ ಮಲ್ಲಪ್ಪನವರು ಈರಪ್ಪ ಪಟ್ಟಣಶೆಟ್ಟಿ ಅವರು ನೀಡುತ್ತಾ ಬಂದಿರುವ ಸಹಕಾರವನ್ನು ನೆನೆಯದೇ ಇರಲಾರೆ, ಅವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗೊಂದಲಿಗ ಸಮುದಾಯದ ಅನೇಕ ಹಿರಿಯರು, ಸಮುದಾಯದ ಸಂಘಟಕರು, ಯುವಕರು ನನ್ನೊಂದಿಗೆ ಸದಾ ಸ್ನೇಹ ಹಸ್ತ ಚಾಚಿ, ಸಹಕರಿಸಿ, ಕೇಳಿದ ಪ್ರಶ್ನೆಗೆ ಮುಜುಗರಕ್ಕೆ ಒಳಗಾಗದೇ ಬೇಕಾದ ಮಾಹಿತಿಯನ್ನು ನೀಡುತ್ತಾ, ಉಪಯುಕ್ತ ದಾಖಲೆಗಳನ್ನು ನೀಡಿ, ಇಂತಹದೊಂದು ಪ್ರಬಂಧ ರೂಪಗೊಳ್ಳಲು ನೆರವಾಗಿದ್ದಾರೆ. ಅಲ್ಲದೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಸಮುದಾಯದವರೆಲ್ಲರಿಗೂ ಪ್ರೀತಿಯಿಂದ ನೆನೆಸಿಕೊಳ್ಳುತ್ತೇನೆ.

ನನಗೆ ಅಧ್ಯಯನಕ್ಕೆ ಪ್ರೋತ್ಸಾಹಿಸಿದ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿಯ ಚೇರಮನ್‌ರು ಉಪಾಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಆಡಳಿತ ಮಂಡಳಿ ಸದಸ್ಯರಿಗೂ, ಶಿಕ್ಷಣ ಸಂಸ್ಥೆಯ ನಮ್ಮ ಪದವಿ ಕಾಲೇಜಿನ ಪ್ರಾಚಾರ್ಯರಾದ ಪ್ರೊ. ಎಸ್.ಎಸ್.ಪಟ್ಟಣಶೆಟ್ಟಿ, ಡಾ. ಪ್ರಭು ಗಂಜೀಹಾಳ, ಪ್ರೊ. ಜಿ.ಪಿ. ಚಕ್ರಸಾಲಿ, ಪ್ರೊ. ಬಿ.ಎ. ಬೆಳವಟಗಿ ಹಾಗೂ ಕಾಲೇಜಿನ ಎಲ್ಲಾ ಸಹೋದ್ಯೋಗಿ ಬಂಧುಗಳಿಗೂ, ಅಕ್ಷರಗಳನ್ನು ತಿದ್ದುಪಡಿ ಮಾಡಿಕೊಟ್ಟ ನಮ್ಮ ಸಂಸ್ಥೆಯ ಪದವಿಪೂರ್ವ ಮಹಾವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಶ್ರೀ ಎಂ.ಎಸ್. ಕರಡದ ಅವರಿಗೂ, ಅಕ್ಷರ ಸಂಯೋಜನೆ ಮಾಡಿದ ಎಂ.ಕೆ. ಗಾಡಗೋಳಿ, ಕುಮಾರಿ ಜ್ಯೋತಿ ಹಳೆಮನೆ ಇವರಿಗೂ ಹೃತ್ಪೂರ್ವಕ ಕೃತಜ್ಞತೆಗಳು. ಮಹಾಪ್ರಬಂಧವನ್ನು ಸುಂದರವಾಗಿ ಪುಟವಿನ್ಯಾಸ ಗೊಳಿಸಿದ ಶ್ರೀ ಶ್ರೀನಿವಾಸ ಕೆ. ಕಲಾಲ್., ಭಾವನಾ ಗ್ರಾಫಿಕ್ಸ್, ಕಮಲಾಪುರ ಇವರಿಗೆ ಸ್ನೇಹ ಪೂರ್ವಕ ಕೃತಜ್ಞತೆಗಳು.

**ಶಿದ್ಲಿಂಗಪ್ಪ ಎಸ್. ಹುರಕಡ್ಲಿ**

# ಪರಿವಿಡಿ

## ಪರಿಶಿಷ್ಟಗಳು

**ಕೋಷ್ಟಕಗಳು**



**ವೃತ್ತ ಚಿತ್ರ**



**ಲಂಬರೇಖಾ ಚಿತ್ರ**

ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೧ ಪೀಠಿಕೆ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನ ವಿಧಾನಗಳು

೧.೫ ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ

೧.೬ ಅಧ್ಯಯನದ ಮಹತ್ವ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪೀಠಿಕೆ

ಭೂಮಿಯ ಮೇಲೆ ಮಾನವ ತನ್ನ ಅಸ್ತಿತ್ವದಡಿಯಲ್ಲಿ ಹೇಗೊ ಅಲೆಮಾರಿತನದ ಬದುಕನ್ನು ಕಳೆಯುತ್ತಾ ಬಂದಂತೆಲ್ಲಾ ನಾಗರೀಕತೆಯ ಬೆಳವಣಿಗೆ ಅಡಿಯಲ್ಲಿ ಹಲವಾರು ಜನ ಸಮೂಹಗಳು ಸ್ಥಿರತೆಯ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾ ಬಂದಿದ್ದು, ಮುಂದುವರೆದಂತೆಲ್ಲಾ ಸ್ಥಿರತೆಯ ನೆಲೆಯಲ್ಲಿ ಸಾಮುದಾಯಿಕ ಜೀವನವನ್ನು ಕಂಡುಕೊಂಡಿರುವುದು ಒಂದೆಡೆ ಆದರೆ, ಇನೊಂದೆಡೆಗೆ ಅನೇಕ ಜನಸಮೂಹಗಳು ಅಂತಹ ಸ್ಥಿರತೆಯ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸದೆ ಅಥವಾ ಸಾಧ್ಯವಾಗದೆ, ಅಲೆಮಾರಿತನದ ಅಡಿಯಲ್ಲಿಯೇ ಬದುಕನ್ನು ಕಳೆಯುತ್ತಾ ಬಂದಿದ್ದಾರೆ.

ಮಾನವ ಮೂಲತಃ ಆಹಾರಕ್ಕಾಗಿ ಅಲೆದಾಡುವ ಪ್ರವೃತ್ತಿಯನ್ನು ಹೊಂದಿದ್ದಾನೆ. ಒಂದಡೆ ನೆಲೆ ನಿಂತು ನಿರ್ದಿಷ್ಟ ಸ್ಥಳದಲ್ಲಿ ಕೃಷಿಯ ಮತ್ತು ಪಶು ಸಂಗೋಪನೆಯ ಮೂಲಕ ಆಹಾರವನ್ನು ಮತ್ತು ಬದುಕನ್ನು ಕಂಡುಕೊಳ್ಳುವ ಮುಂಚೆ ರೂಢಿಯಲ್ಲಿದ್ದ ಸ್ಥಳಾಂತರ ಬೇಸಾಯ ಪದ್ಧತಿ ಕೂಡಾ ಮಾನವನ ಅಲೆಮಾರಿ ಗುಣವನ್ನೆ ಹೇಳುತ್ತದೆ. ಸಾಮಾಜಿಕ ಒತ್ತಡದ ಪರಿಣಾಮವಾಗಿ ಸಂಪತ್ತಿನ ಸಂಗ್ರಹಣೆಯ ಚಪಲದಿಂದಾಗಿ ಉಂಟಾದ ಭೂ ಒಡೆತನ ಪ್ರಜ್ಞೆ ಮಾನವನನ್ನು ಒಂದಡೆ ನೆಲೆ ನಿಲ್ಲುವಂತೆ ಮಾಡಿದರೆ, ಇವುಗಳ ಪರಿವೆಯೇ ಇಲ್ಲದ ಮೂಲ ಸ್ವಭಾವವನ್ನು ಇಂದಿಗೂ ಉಳಿಸಿಕೊಂಡ ಜನ ಸಮುದಾಯಗಳನ್ನು ಅಲ್ಲಲ್ಲಿ ಕಾಣಬಹುದಾಗಿದೆ.

ಭಾರತದಾದ್ಯಂತ ಕಂಡು ಬರುವ ಜನ ಸಮುದಾಯಗಳು ಜಗತ್ತಿನ ಇತರ ಸಮುದಾಯ ಗಳಿಗಿಂತಲೂ ಭಿನ್ನವಾದವುಗಳು ಮತ್ತು ವಿಶಿಷ್ಟ ಸಂಸ್ಕೃತಿ ಹಾಗೂ ಪರಂಪರೆಯುಳ್ಳವುಗಳಾಗಿವೆ.

ಜಾತಿ, ಮತ, ಧರ್ಮದ ಹಿನ್ನೆಲೆಯಲ್ಲಿ ಪ್ರತಿಯೊಂದು ಸಮುದಾಯ ತನ್ನದೇ ಆದ ಆಚಾರ-ವಿಚಾರ, ಪದ್ಧತಿ-ಪರಂಪರೆ, ರೀತಿ-ನೀತಿ, ಉಡುಗೆ-ತೊಡುಗೆ, ಭಾಷೆ, ಕಟ್ಟುಪಾಡುಗಳನ್ನು ಹೊಂದಿ ವಿಭಿನ್ನ ಮತ್ತು ವಿಶಿಷ್ಟವಾಗಿದ್ದುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಇಡೀ ಭಾರತೀಯ ಸಮಾಜ-ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾಗಿ ಕಂಡು ಬರುವ ವಿಭಿನ್ನ ಜನಸಮುದಾಯಗಳ ಕುರಿತಾದ ಅಧ್ಯಯನವು ಅವಶ್ಯಕವಾದುದು ಹಾಗೂ ಪ್ರಮುಖವಾದುದು. ಇಂತಹ ಸಮುದಾಯಗಳ ಕುರಿತು ಹಲವಾರು ಶಾಸ್ತ್ರಜ್ಞರು, ಸಂಶೋಧಕರು ಕಳೆದ ಶತಮಾನಗಳಿಂದಲೂ ಅಧ್ಯಯನ ಮಾಡುತ್ತಾ ಬಂದಿದ್ದಾರೆ. ಆದರೆ ಕೆಲವು ಸಮುದಾಯಗಳ ಸಂಸ್ಕೃತಿ, ಸ್ಥಿತಿಗತಿ ಹಾಗೂ ಸಾಮಾಜಿಕ ಸಂಚಲನೆ/ಪರಿವರ್ತನೆಯನ್ನು ದಾಖಲಿಸದೇ ನಿರ್ಲಕ್ಷಿತ ಸಮುದಾಯಗಳಾಗಿಯೇ ಉಳಿದಿವೆ. ಪರಿಣಾಮ ಸಾಮಾಜಿಕವಾಗಿ ದುರ್ಬಲವಾಗಿರುವ ಹಲವಾರು ಸಮುದಾಯಗಳು ತಮ್ಮ ಐಡಂಟಿಟಿಯ ಬಿಕ್ಕಟ್ಟಿನಲ್ಲಿ ಸಿಲುಕಿವೆ. ಅದರಲ್ಲೂ ಮುಖ್ಯವಾಗಿ ಪ್ರಾರಂಭದಿಂದಲೂ ಅಲೆಮಾರಿತನದ ಅಡಿಯಲ್ಲಿ ಬದುಕನ್ನು ಕಳೆಯುತ್ತಾ, ಪಾರಂಪರಿಕ ವೃತ್ತಿಯನ್ನು ಅನುಸರಿಸುತ್ತಾ, ಆರ್ಥಿಕ ಸ್ಥಿರತೆಯಿಲ್ಲದೆ ಮುಂದುವರೆದುಕೊಂಡು ಬಂದ ಹಲವಾರು ಸಮುದಾಯಗಳು, ಸ್ಥಿರತೆಯ ನೆಲೆಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತಿದ್ದರೂ, ಇನ್ನೂ ಅಲೆಮಾರಿಗಳಾಗಿ, ಅರೆಅಲೆಮಾರಿಗಳಾಗಿ ಬದುಕನ್ನು ಕಳೆಯುತ್ತಿರುವ ಸ್ಥಿತಿಯು ಕಂಡುಬರುತ್ತಿದೆ. ಅಂತಹ ಸಮುದಾಯಗಳಲ್ಲಿ ಗೊಂದಲಿಗ ಸಮುದಾಯವು ಒಂದಾಗಿದೆ.

ಗೊಂದಲಿಗ ಸಮುದಾಯದ ಇತಿಹಾಸ ಹಾಗೂ ಸಂಸ್ಕೃತಿ ಬೇರೆ ಸಮುದಾಯ ಗಳಿಗಿಂತಲೂ ಭಿನ್ನ ಹಾಗೂ ವಿಶಿಷ್ಟವೂ ಆಗಿದೆ. ಪ್ರಾರಂಭದಿಂದಲೂ ವೃತ್ತಿ ಕಲಾಜೀವಿಗಳಾದ, ಗೊಂದಲಿಗರು ಶಕ್ತಿದೇವತಾ ಆರಾಧಕರು. ಸಾಮಾನ್ಯವಾಗಿ ಗೊಂದಲ ಹಾಕುವವರು ಗೊಂದಲಿಗರು ಎಂದು ಕರೆಯಲಾಗುತ್ತದೆ. ದೇವತಾ ಆರಾಧನೆಯ ವಿಧಿ ವಿಧಾನಗಳನ್ನು ಕ್ರಮಬದ್ಧವಾಗಿ ನೆರವೇರಿಸಿಕೊಡುವ ಕಲಾವಿದರಿಗೆ 'ಗೊಂದಲಿಗರು' ಎಂದು ಕರೆಯುತ್ತಾರೆ. ಇವರು ನಡೆಸಿಕೊಡುವ ದೈವೀ ಆರಾಧನೆಯ ಕ್ರಮಕ್ಕೆ ಗೊಂದಲ ಹಾಕುವುದೆಂದು ಕರೆಯುತ್ತಾರೆ. ವೃತ್ತಿಗಾಯಕರಾದ ಗೊಂದಲಿಗರು ಇನ್ನೊಂದೆಡೆ ಬುಡಬುಡಿಕೆ ವೃತ್ತಿಯನ್ನು ಅನುಸರಿಸುತ್ತಾರೆ. ಶಕ್ತಿ ದೇವತೆಯ ಆರಾಧಕರಾದ ಗೊಂದಲಿಗರಿಗೆ ತುಳಜಾಪುರದ ಅಂಬಾಭವಾನಿಯೇ ಕುಲ ದೈವವಾದರೂ ಉಪಾಸನೆಗಾಗಿ ಇಂದು ಯಾವ ನಿರ್ದಿಷ್ಟ ಕ್ಷೇತ್ರಕ್ಕೂ ಸೀಮಿತರಾಗಿಲ್ಲ, ದುರ್ಗಮ್ಮ, ತುಳಜಮ್ಮ, ಯಲ್ಲಮ್ಮ, ಚಾಮುಂಡಮ್ಮ, ಮಾರಮ್ಮ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಗೊಂದಲ ಸಮಾರಂಭದಲ್ಲಿ ದೇವಿಯನ್ನು ಸ್ತುತಿಸುವ, ಹಾಡು ಮಿಶ್ರಿತ ದೈವೀ ಕಥೆಯನ್ನು ಸಂಭಾಷಣೆಯೊಂದಿಗೆ ಮೆಳೈಸಿ, ಹೇಳುವ ಕಥಾಶೈಲಿ ತುಂಬಾ ಮೋಹಕವಾಗಿರುತ್ತದೆ. ಗೊಂದಲವು ದೈವೀ ಕಥೆಗೆ ಬದ್ಧವಾದ ಆರಾಧನೆ. ಇದು ಒಂದು ಸಾಮೂಹಿಕ ವಿಧಿ ಕ್ರಿಯೆ. ಕುಲಧರ್ಮ ಪಾಲನೆಯ ಸಂಪ್ರದಾಯವನ್ನು ಹೊಂದಿರುವ ಅಂಬಾ ಭವಾನಿಯ ಭಕ್ತರಾದವರು ನವರಾತ್ರಿ, ದೀಪಾವಳಿ, ವಿವಾಹ ಮುಂಜಿವಿಗಳಲ್ಲಿ, ಶುಭ ಕಾಮನೆಯ ಸಂಕೇತವಾಗಿ ದುಷ್ಟ ನಿವಾರಣೆಯ ಅಭಿಲಾಷೆಯ ಕುರುಹಾಗಿ ಹರಕೆಯ ರೂಪದಲ್ಲಿ ತಮ್ಮ ತಮ್ಮ

ಮನೆಗಳಲ್ಲಿ ಭಕ್ತ ವೃಂದಗಳಿಂದ, ಗೊಂದಲಿಗರಿಂದ ಗೊಂದಲ ಪೂಜಾರಾಧನೆ ಮಾಡುವ ಧಾರ್ಮಿಕ ವ್ರತಾಚರಣೆಯನ್ನು ನೆರವೇರಿಸುತ್ತಾ ಬಂದಿದ್ದಾರೆ. ಬುಡಬುಡಿಕೆ ವೃತ್ತಿಯನ್ನು ಅನುಸರಿಸುವವರು ಚರ್ಮ ವಾದ್ಯಗಳಲ್ಲಿಯೇ ಅತೀ ಚಿಕ್ಕದಾದ ಕಿಡು ಬುಡಿಕೆಯನ್ನು(ಢಕ್ಕೆ) ಬಳಸಿ, ಪಣ ಕಟ್ಟಿ, ನಸುಕಿನ ವೇಳೆಯಲ್ಲಿ ಹಾಲಕ್ಕಿ ನುಡಿಯುವ ಶಕುನದ ಮೂಲಕ ಜನರ ಭವಿಷ್ಯವನ್ನು ಹೇಳುತ್ತಾರೆ. ಬುಡಬುಡಿಕೆ ವೃತ್ತಿಕೈಗೊಂಡವರು, ತಮ್ಮ ಮೂಲದ ಬಗ್ಗೆ ತಮ್ಮ ಆರಾಧ್ಯ ದೈವವನ್ನು ಬುಡಬುಡಕೆಯವರು ಪ್ರಾರ್ಥಿಸಿದಾಗ ಕರುಣೆ ತೋರಿದ ದೇವಿಯು ಶಿವನ ಢಕ್ಕೆಯನ್ನು ನೀಡಿ ಇದನ್ನು ಬಿಟ್ಟು ನಿನಗೆ ಯಾವ ದಾರಿಯಿಲ್ಲ ಇದರ ಮೂಲಕ ಉಪಜೀವನದ ಮಾರ್ಗವನ್ನು ಹುಡುಕು ನಿನಗೆ ಒಳ್ಳೆಯದಾಗುತ್ತದೆ ಅಂದಳಂತೆ. ಅಂದಿನಿಂದ ಇದನ್ನಾಧರಿಸಿ ಬುಡಬುಡಕಿಯರು ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ.

ಅಲೆಮಾರಿ ಜನಾಂಗದವರಾದ ಗೊಂದಲಿಗರ ಮೂಲ ನೆಲೆಯನ್ನು ಗುರುತಿಸುವಲ್ಲಿಯೇ ಅನೇಕ ಗೊಂದಲಗಳಿವೆ. ಗೊಂದಲಿಗರನ್ನು ಕೆಲವರು ಮಹಾರಾಷ್ಟದವರು, ಇನ್ನೂ ಕೆಲವರು ಕನ್ನಡ ನೆಲದವರೇ ಎಂಬ ವಿಭಿನ್ನ ಹೇಳಿಕೆಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಗೊಂದಲಿಗರ ಮೂಲದ ಬಗ್ಗೆ ಅನೇಕರು ಮಾಡಿದ ಅಧ್ಯಯನಗಳನ್ನು ಗಮನಿಸಿದಾಗ 'ಗೊಂದಲಿ' ಇದೊಂದು ಮರಾಠಿ ಭಿಕ್ಷುಕರು, ಸಂಗೀತಗಾರರ ಮತ್ತು ನೃತ್ಯಗಾರರ ವರ್ಗ. ಈ ವರ್ಗವು ಮರಾಠವಾಡ ಜಿಲ್ಲೆಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ಉಸ್ಮಾನಿಯಾ ಜಿಲ್ಲೆಗಳಲ್ಲಿ ಕಂಡು ಬರುವರು. ವೃತ್ತಿ ನರ್ತನ ಗೊಂದಲದಿಂದ ಅವರು ಗೊಂದಳಿ, ಗೊಂದಲಿಗ ಎಂಬ ಹೆಸರನ್ನು ಪಡೆದಿದ್ದಾರೆ. ಈ ಪದವು ಕೋಲಾಹಲ, ಗದ್ದಲವನ್ನು ಗೊಂದಲಿಗರು ನೃತ್ಯ ಮಾಡುವಾಗ ಎಬ್ಬಿಸುತ್ತಾರೋ ಆ ಮೂಲದಿಂದ ಬಂದಿರಬಹುದು. ಅವರು ಜಮದಗ್ನಿ ಋಷಿ ಮತ್ತು ಆತನ ಪತ್ನಿ ರೇಣುಕಾದೇವಿಯ ವಂಶಸ್ಥ/ಸಂತತಿ ಎಂಬುದು ಅವರ ಸಂಪ್ರದಾಯ ಹೇಳುತ್ತದೆ. ಹಾಗೆಯೇ ಕರ್ನಾಟಕದ ಪ್ರಾಚೀನ ಗ್ರಂಥಗಳಲ್ಲಿ ಗೊಂದಲ ನೃತ್ಯದ ಕುರಿತು ವಿವರಣೆಗಳು ಇರುವದರಿಂದ ಹಾಗೂ ಪ್ರಾರಂಭದಲ್ಲಿ "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡೇ ಕರ್ನಾಟಕ" ಎನ್ನುವ ಹಾಗೆ ಭೌಗೋಳಿಕವಾಗಿ ವಿಸ್ತರಣೆ ಹೊಂದಿದ್ದು ಈ ದೃಷ್ಟಿಯಲ್ಲಿ ಗೊಂದಲಿಗರು, ಕರ್ನಾಟಕದ ಮೂಲದವರು ಎಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ವೃತ್ತಿಗಾಯನದ ಮೂಲಕ ವಿಶಿಷ್ಟ ಸಂಸ್ಕೃತಿಯನ್ನು ಅನುಸರಿಸುತ್ತಾ ಬಂದಿರುವ ಗೊಂದಲಿಗರು ಭಿಕ್ಷಾಟನೆಯ ಮೂಲಕವೇ ತಮ್ಮ ಉಪಜೀವನದ ಮಾರ್ಗವನ್ನು ಕಂಡುಕೊಂಡಂತವರು. ಉತ್ಪಾದಕ ವರ್ಗದ ಮೇಲೆಯೇ ಅವಲಂಬಿತರಾಗಿರುವ ಗೊಂದಲಿಗರು ಒಂದು ರೀತಿ ಅನುತ್ಪಾದಕ ವರ್ಗದಲ್ಲಿ ಗುರುತಿಸಿಕೊಂಡವರು. ಈ ಹಿನ್ನೆಲೆಯಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದವರಾಗಿರುವ ಗೊಂದಲಿಗರು ಇತ್ತೀಚೆಗೆ ಸಮಾಜದಲ್ಲುಂಟಾದ ಪರಿವರ್ತನೆ ಯಿಂದಾಗಿ, ಈ ಸಮುದಾಯವು ಸಾಮಾಜಿಕ ಸಂಚಲನೆಯನ್ನು ಹೊಂದುತ್ತಿದ್ದು, ಇನ್ನೊಂದೆಡೆ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು ಬರುವಲ್ಲಿ ಹೆಣಗುತ್ತಿದೆ.

ಅಲೆಮಾರಿ-ಅರೆಅಲೆಮಾರಿ ಸಮುದಾಯಗಳ ಮೇಲೆ ಆಧುನಿಕತೆ ತನ್ನ ಪರಿಣಾಮಗಳನ್ನು ಬೀರುತ್ತಲೇ ಬಂದಿದೆ. ಇದರ ಅಧ್ಯಯನವೂ ಬಹಳ ಮುಖ್ಯವಾದುದು. ಪ್ರತಿಯೊಂದು ಜನಾಂಗ ಆಧುನಿಕ ವ್ಯವಸ್ಥೆಯನ್ನು ಒಂದು ರೀತಿ ಒಪ್ಪಿಕೊಂಡಿರುವದರಿಂದ ಅನೇಕ ಬದಲಾವಣೆಯನ್ನು ಗುರುತಿಸುತ್ತೇವೆ. ಹಾಗೆಯೇ ಗೊಂದಲಿಗರು ~~ಸಹ~~ ಆಧುನಿಕತೆ, ಕೈಗಾರೀಕರಣ, ಜಾಗತೀಕರಣದ ಈ ಸಂದರ್ಭದಲ್ಲಿ ಅವರೂ ಬದಲಾವಣೆಗೆ ಒಳಗಾಗುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಕಂಡು ಬರುತ್ತಿರುವ ಸ್ಥಿತ್ಯಂತರಗಳಲ್ಲಿ ಗೊಂದಲಿಗ ಸಮುದಾಯವು ಯಾವ ರೀತಿ ಸ್ಪಂದಿಸುತ್ತಿದೆ, ಅದು ಬದುಕನ್ನು ಹೇಗೆ ಮಾರ್ಪಡಿಸಿಕೊಳ್ಳುತ್ತಿದೆ, ಈ ಸಂದರ್ಭದಲ್ಲಿ ಅವರು ಎದುರಿಸುತ್ತಿರುವ ಸವಾಲುಗಳು-ಸಮಸ್ಯೆಗಳು ಯಾವವು ಎಂಬುದನ್ನು ಅಧ್ಯಯನ ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಅರೆಅಲೆಮಾರಿಗಳಾಗಿರುವ ಗೊಂದಲಿಗರು ತಮ್ಮದೇ ಆದ ಸಾಂಸ್ಕೃತಿಕ ಪರಂಪರೆಯಲ್ಲಿ ಜೀವನವನ್ನು ಕಳೆಯುತ್ತಿದ್ದಾರೆ. ಗೊಂದಲಿಗರು ವೃತ್ತಿ ಕಲಾಜೀವಿಗಳಾಗಿದ್ದು, ಧಾರ್ಮಿಕ ವೃತ್ತಿಗಾಯಕರು, ಲೌಕಿಕ ವೃತ್ತಿಯವರು, ಸಾಮಾನ್ಯ ವೃತ್ತಿಯವರು, ಕಥೋಪಜೀವಿಗಳೆಂದು ಗುರುತಿಸುತ್ತಾ ಬಂದಿರುವ ಇವರು, ಸಮಾಜದ ಉತ್ಪಾದಕ ವರ್ಗದ ಮೇಲೆಯೇ ಅವಲಂಬಿಸುತ್ತಾ, ಭಿಕ್ಷಾಟನೆಯ ಮೂಲಕ ಜೀವನ ನಿರ್ವಹಣೆ ಮಾಡಿಕೊಂಡು ಬಂದವರು. ಗೊಂದಲಿಗರು ತಮ್ಮ ಪಾರಂಪರಿಕ ವೃತ್ತಿ ನಿರ್ವಹಣೆಯಿಂದ, ಬದುಕಿನ ನಿರ್ವಹಣೆ ಸಾಧ್ಯವಾಗಿರದೆ, ಸಂಕಷ್ಟವನ್ನು ಅನುಭವಿಸುತ್ತಿರುವದರಿಂದ, ಅನಿವಾರ್ಯವಾಗಿ ಬೇರೆ-ಬೇರೆ ವೃತ್ತಿಗಳಲ್ಲಿ ತೊಡಗಿಕೊಳ್ಳುತ್ತಾ, ಆಧುನಿಕತೆಯ ಬದಲಾವಣೆಯ ಪ್ರಸ್ತುತ ಸನ್ನಿವೇಶದಲ್ಲಿ, ತಮ್ಮ ಬದುಕಿನಲ್ಲಿಯೂ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಆಧುನಿಕತೆಯ ಪ್ರಭಾವದಿಂದಾಗಿ ಕಂಡುಬರುತ್ತಿರುವ ಸಮುದಾಯದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತ್ಯಂತರಗಳ ಜೊತೆಗೆ ಹಲವಾರು ಸಮಸ್ಯೆಗಳನ್ನು-ಸವಾಲುಗಳನ್ನು ಎದುರಿಸುತ್ತಿದ್ದಾರೆ. ಈ ಅಂಶಗಳನ್ನು ಗಮನದಲ್ಲಿಟ್ಟು ಕೊಂಡು 'ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ'ಯನ್ನು ಕೈಗೊಂಡ ಪ್ರಸ್ತುತ ಅಧ್ಯಯನವು ಈ ಉದ್ದೇಶಗಳನ್ನು ಹೊಂದಿದೆ.

**ಉದ್ದೇಶಗಳು**

೧. ಆಧುನಿಕ ಸಂದರ್ಭದಲ್ಲಿ ಅಲೆಮಾರಿ, ಅರೆ-ಅಲೆಮಾರಿಗಳಾದ ಗೊಂದಲಿಗರು ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಹೇಗೆ ಮುಖಾ-ಮುಖಿಯಾಗುತ್ತಿದ್ದಾರೆ ಎಂಬದನ್ನು ಕುರಿತು ಈ ಅಧ್ಯಯನ ಕೈಗೊಳ್ಳಲಾಗಿದೆ.

೨. ಗೊಂದಲಿಗರ ಸಾಂಪ್ರದಾಯಿಕ ಪರಂಪರಾನುಗತ ಆಚರಣೆಗಳು, ಜೀವನಶೈಲಿಗಳು, ಆಧುನಿಕ ಕಾಲದಲ್ಲಿ ಹೇಗೆ ಮುಖಾ-ಮುಖಿಯಾಗುತ್ತಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

೩. ಆಧುನಿಕತೆಗೆ ಮುಖಾ-ಮುಖಿಯಾಗುತ್ತಿರುವ ಸಂದರ್ಭದಲ್ಲಿ ಗೊಂದಲಿಗರು ಅನುಭವಿಸುತ್ತಿರುವ ಸಮಸ್ಯೆಗಳೇನು? ಎಂಬುದನ್ನು ಗಮನಿಸಲಾಗಿದೆ.

೪. ಗೊಂದಲಿಗರು ಪಾರಂಪರಿಕ ಹಾಗೂ ಆಧುನಿಕತೆಯಲ್ಲಿ, ಅವರು ಅನುಸರಿಸುತ್ತಿರುವ ವೃತ್ತಿಗಳ ಕುರಿತು. ಕೈಗಾರೀಕರಣ, ಆಧುನೀಕರಣ, ಖಾಸಗೀಕರಣ, ವೈಜ್ಞಾನೀಕರಣ ಮತ್ತು ಜಾಗತೀಕರಣದ ಪ್ರಕ್ರಿಯೆಗಳಿಂದ ಗೊಂದಲಿಗರು ಮುಖ್ಯವಾಹಿನಿಯತ್ತ ಸಾಗುತ್ತಿದ್ದಾರೆಯೇ? ಎಂಬುದನ್ನು ವಿವರಿಸಲಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಕರ್ನಾಟಕದುದ್ದಕ್ಕೂ ವ್ಯಾಪಿಸಿಕೊಂಡಿರುವ ಹೆಚ್ಚಾಗಿ ಉತ್ತರ ಕರ್ನಾಟಕದ ಬೆಳಗಾಂವ, ಧಾರವಾಡ, ಬಿಜಾಪೂರ, ಬಾಗಲಕೋಟ, ಬಳ್ಳಾರಿ,ಕೊಪ್ಪಳ, ರಾಯಚೂರ, ಗುಲಬರ್ಗಾ, ಗದಗ ಅಲ್ಲದೇ ಮೈಸೂರ, ಮಂಡ್ಯ, ಚಿತ್ರದುರ್ಗ, ಶಿವಮೊಗ್ಗ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯೂ ಪಸರಿಸಿ ಕೊಂಡಿರುವ, ಅರೆ-ಅಲೆಮಾರಿ ಜನಾಂಗವೆಂದೇ ಗುರುತಿಸಲ್ಪಟ್ಟ ಗೊಂದಲಿಗರ ಕುರಿತಾದ ಪ್ರಸ್ತುತ ಅಧ್ಯಯನವನ್ನು ಉತ್ತರ ಕರ್ನಾಟಕವನ್ನು ಕೇಂದ್ರಿಕರಿಸಿಕೊಂಡು ಜಿಲ್ಲಾ ವ್ಯಾಪ್ತಿಯೊಳಗೆ, ಗೊಂದಲಿಗರಲ್ಲಿ ಆಗಿರುವ ಹಾಗೂ ಆಗುತ್ತಿರುವ ಬದಲಾವಣೆ ಮತ್ತು ಸ್ಪಂದನೆಯ ಕುರಿತು ಸಮಗ್ರವಾಗಿ ಅವಲೋಕಿಸುವ ಹಿನ್ನೆಲೆಯಲ್ಲಿ ಕುಟುಂಬಗಳ ಕ್ಷೇತ್ರಕಾರ್ಯವನ್ನು ಕೈಗೊಂಡು ಅಧ್ಯಯನವನ್ನು ಮಾಡಲಾಗಿದೆ.

## ೧.೪ ಅಧ್ಯಯನದ ವಿಧಾನಗಳು

ಗೊಂದಲಿಗರ ಕುರಿತಾಗಿ ಬಂದ ಲೇಖನಗಳು, ಅಧ್ಯಯನಗಳು, ಸಾಮುದಾಯಿಕ, ಸಾಹಿತ್ಯಿಕ ಹಿನ್ನೆಲೆಯಲ್ಲಿವೆ. ಆಧುನಿಕತೆಯ ಪ್ರಭಾವದಿಂದ ಗೊಂದಲಿಗರಲ್ಲಿ ಬದಲಾವಣೆಯನ್ನು ಕಾಣುತ್ತಿದ್ದು, ಈ ಬದಲಾವಣೆಗೆ ಅವರು ಯಾವರೀತಿ ಸ್ಪಂದಿಸುತ್ತಿದ್ದಾರೆ ಹಾಗೂ ಈ ಸಂದರ್ಭದಲ್ಲಿ ಅವರಿಗೆ ಎದುರಾಗುತ್ತಿರುವ ಸಮಸ್ಯೆಗಳನ್ನು ಉತ್ತರ ಕರ್ನಾಟಕದಲ್ಲಿಯ ಜಿಲ್ಲೆಯ ವ್ಯಾಪ್ತಿಗೊಳಪಡಿಸಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನಕ್ಕೆ ಕೆಳಗಿನ ವಿಧಾನಗಳನ್ನು ಅನುಸರಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

೧. ಇಲ್ಲಿಯವರೆಗೆ ನಡೆದ ಅಧ್ಯಯನಗಳ ಆಕರಗಳು
೨. ಚಾರಿತ್ರಿಕ ವಿಧಾನ
೩. ಪ್ರಶ್ನಾವಳಿ ವಿಧಾನ
೪. ಸಂದರ್ಶನ ವಿಧಾನ
೫. ಮಾದರಿಗಳ ಆಯ್ಕೆ
೬. ಸಹಭಾಗಿತ್ವ ವಿಧಾನ
೭. ಗುಂಪುಚರ್ಚೆ
೮. ಸಂಖ್ಯಾಶಾಸ್ತ್ರೀಯ ವಿಧಾನ
೯. ಅವಲೋಕನ ವಿಧಾನ

೧. ಇಲ್ಲಿಯವರೆಗೆ ನಡೆದ ಅಧ್ಯಯನಗಳ ಆಕರಗಳು

ಗೊಂದಲಿಗರನ್ನು ಕುರಿತು ಸ್ವದೇಶಿ ಹಾಗೂ ವಿದೇಶಿ ಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು, ಜಾನಪದ ವಿದ್ವಾಂಸರು ಕೆಲ ಅಧ್ಯಯನಗಳನ್ನು ಕೈಕೊಂಡಿದ್ದಾರೆ. ಅವರು ಗೊಂದಲ ಹಾಕುವಿಕೆ, ದೈವೀ ಆರಾಧನೆ, ಕಥೆಗಳ ನಿರೂಪಣೆ, ಪಾತ್ರೆ ವ್ಯಾಪಾರ, ಕೌದಿ ಹೊಲೆಯುವ ವೃತ್ತಿ, ಬುಡಬುಡಿಕೆ, ಗಿಳಿಗಳ ಮೂಲಕ ಭವಿಷ್ಯ ಹೇಳುವ ವೃತ್ತಿ ಹಾಗೂ ಅವರ ಬದುಕಿನ ಸ್ಥಿತಿಗತಿಗಳನ್ನು ಹೇಳಿದ್ದಾರೆ. ಅವುಗಳನ್ನೆಲ್ಲಾ ಈ ಅಧ್ಯಯನಯದಲ್ಲಿ ಗಮನಿಸಲಾಗಿದೆ.

೨. ಚಾರಿತ್ರಿಕ ವಿಧಾನ

ಗೊಂದಲಿಗರ ಸಮುದಾಯದಲ್ಲಿಯೂ ಚರಿತ್ರೆ, ಪುರಾಣಗಳು ಕಂಡುಬರುತ್ತವೆ. ಈ ಸಮುದಾಯ ವನ್ನು ಕುರಿತು ನಡೆದ ಅಧ್ಯಯನಗಳಲ್ಲಿ ಗೊಂದಲಿಗರ ಚರಿತ್ರೆ, ಪೌರಾಣಿಕ ಹಿನ್ನೆಲೆ ಇವು ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ಕಂಡುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ.

೩. ಪ್ರಶ್ನಾವಳಿ ವಿಧಾನ

ಈ ಅಧ್ಯಯನಕ್ಕೆ ವಿಸ್ತೃತವಾದ ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಆ ಪ್ರಶ್ನಾವಳಿಯನ್ನು ಕ್ಷೇತ್ರ ಕಾರ್ಯದಲ್ಲಿ ಬಳಸಿಕೊಳ್ಳಲಾಗಿದೆ. ಸಮರ್ಥ ಮಾಹಿತಿದಾರರಿಂದ ಮಾಹಿತಿಯನ್ನು ಪಡೆದು ಕೊಳ್ಳಲಾಗಿದೆ. ಉತ್ತರ ಕರ್ನಾಟಕದಲ್ಲಿ ವಾಸಿಸುತ್ತಿರುವ ಗೊಂದಲಿಗರ ಅನೇಕ(House hold survey) ಕುಟುಂಬಗಳ ಮಾಹಿತಿ ಪಡೆಯಲಾಗಿದೆ. ವೈಜ್ಞಾನಿಕ ಅಧ್ಯಯನಕ್ಕಾಗಿ ಆಡಿಯೋ, ವಿಡಿಯೋ ಹಾಗೂ ಛಾಯಾಚಿತ್ರಗಳನ್ನು ತೆಗೆಯಲಾಗಿದೆ. ಒಂದು ಕ್ರಮಬದ್ಧವಾದ ಅಧ್ಯಯನ ಶಿಸ್ತಿಗೆ ಒಳಪಟ್ಟು ಸಂಗ್ರಹಿಸಿದ ಮಾಹಿತಿಯನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

೪. ಸಂದರ್ಶನ ವಿಧಾನ

ಉತ್ತರ ಕರ್ನಾಟಕದಲ್ಲಿರುವ ಗೊಂದಲಿಗರಲ್ಲಿ ಕೆಲವರನ್ನು ಆಯ್ಕೆ ಮಾಡಿಕೊಂಡು ಅವರೊಂದಿಗೆ ಮುಕ್ತವಾಗಿ ಚರ್ಚಿಸಿ, ಮಾಹಿತಿಗಳನ್ನು ಸಂಗ್ರಹಿಸಿಲಾಗಿದೆ. ಗೊಂದಲಿಗರ ಸಮುದಾಯದ ಯುವಕರನ್ನು ಪ್ರತ್ಯೇಕವಾಗಿ ಕೂಡಿಸಿಕೊಂಡು ಆಧುನಿಕತೆಯ ಪರಿಸರದಲ್ಲಿ ಗೊಂದಲ ಹಾಕುವ, ಪಾತ್ರೆ ಮಾರುವ, ಕೌದಿಹೊಲೆಯುವ, ಬುಡಬುಡಿಕೆ, ಗಿಳಿಶಾಸ್ತ್ರ ಮತ್ತು ಹಸ್ತಸಾಮುದ್ರಿಕೆಯ ಮೂಲಕ ಶಕುನ ಹೇಳುವ ವೃತ್ತಿಗಳ ಅಳಿವು ಉಳಿವಿನ ಬಗ್ಗೆ ಚರ್ಚಿಸಲಾಗಿದೆ. ಗೊಂದಲಿಗರ ಸಮುದಾಯದಲ್ಲಿನ ಹಿರಿಯರು, ಮಧ್ಯಮ ವಯಸ್ಕರು, ಯುವಕರು, ಕೌದಿ ಹೊಲೆಯುವ ಅಜ್ಜಿಯರು ಹಾಗೂ ಯುವತಿಯರು ಹೇಳಿದ ಹೇಳಿಕೆಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ.

೫. ಮಾದರಿಗಳ ಆಯ್ಕೆ

ಗೊಂದಲಿಗರಲ್ಲಿಯ ಕೆಲ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಉದಾಹರಣೆಗೆ ನಗರ ಪ್ರದೇಶಗಳಲ್ಲಿ ಪಾತ್ರೆ ವ್ಯಾಪಾರ ಮಾಡುವವರು, ಗಿಳಿಶಾಸ್ತ್ರ ಹೇಳುವವರು, ಗೊಂದಲ ಹಾಕುವ ವೃತ್ತಿಯಲ್ಲಿ ತೊಡಗಿಕೊಂಡವರಿಗೂ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಈ

ವೃತ್ತಿಗಳನ್ನು ನಿರ್ವಹಿಸುವವರಿಗೂ, ಅಲೆಮಾರಿ ಹಾಗೂ ಅರೆಅಲೆಮಾರಿಗಳ ಹಂತದಲ್ಲಿರುವವರಿಗೂ ಅನೇಕ ವ್ಯತ್ಯಾಸಗಳಿವೆ. ಇವರೆಲ್ಲರ ಸಮಸ್ಯೆಗಳು ಬೇರೆ-ಬೇರೆಯಾಗಿವೆ. ಹೀಗಾಗಿ ನಗರ, ಗ್ರಾಮೀಣ ಹಾಗು ಅಲೆಮಾರಿ-ಅರೆಅಲೆಮಾರಿಗಳಾಗಿರುವ ಗೊಂದಲಿಗರ ಕೆಲ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಅವರ ಆಚಾರ-ವಿಚಾರ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಚಾರಗಳಲ್ಲಿ ಭಿನ್ನತೆ ಇರುವುದನ್ನು ಗುರುತಿಸಲಾಗಿದೆ. ಈ ಕಾರಣಗಳಿಂದ ಕೆಲ ನಿರ್ದಿಷ್ಟ ಪಡಿಸಿದ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು, ಮಾಹಿತಿಯನ್ನು ಸಂಗ್ರಹಿಸಿ, ಅದನ್ನು ಈ ಅಧ್ಯಯನದಲ್ಲಿ ಬಳಸಲಾಗಿದೆ.

**೬. ಸಹಭಾಗಿತ್ವ ವಿಧಾನ**

ಗೊಂದಲಿಗರ ಸಮುದಾಯದ ಕೆಲ ಆಚರಣೆ, ಸಂಸ್ಕಾರಗಳಲ್ಲಿ ಹಾಗೂ ಗೊಂದಲ ಹಾಕುವ ಸಂದರ್ಭಗಳನ್ನು ಖುದ್ದಾಗಿ ಭಾಗವಹಿಸಿ ನೋಡಿ ವಿಶ್ಲೇಷಣೆ ಮಾಡಬೇಕಾಗುತ್ತದೆ ಮತ್ತು ಅವುಗಳನ್ನು ಅರ್ಥೈಸಿಕೊಳ್ಳಬೇಕಾದರೆ ನಾವು ಅವುಗಳಲ್ಲಿ ಭಾಗವಹಿಸಬೇಕಾಗುತ್ತದೆ. ಈ ಕಾರಣಗಳಿಂದ ನಾವು ಅವರ ಜೊತೆಗೆ ಕೆಲ ದಿನಗಳನ್ನು ಕಳೆಯಬೇಕು. ಅಂದರೆ ಮಾತ್ರ ಸಮುದಾಯದ ಸೂಕ್ಷ್ಮತೆಗಳನ್ನು ಅರಿಯಲು ಸಾಧ್ಯವಾಗುತ್ತದೆ. ಈ ವಿಧಾನದ ಮೂಲಕ ಮಾಹಿತಿ ಸಂಗ್ರಹಿಸಿ, ಆ ಮಾಹಿತಿಯನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**೭. ಗುಂಪು ಚರ್ಚೆ**

ಗೊಂದಲಿಗರೂ ಸಹ ಅಲೆಮಾರಿ ಬುಡಕಟ್ಟು ಸಮುದಾಯಕ್ಕೆ ಸೇರಿದವರು. ಆದರೆ ಕರ್ನಾಟಕ ಸರ್ಕಾರ ಅವರನ್ನು ಹಿಂದುಳಿದ ವರ್ಗ-೧ರಲ್ಲಿ ಸೇರಿಸಿದೆ. ಅವರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸ ಬೇಕೆಂಬುದು ಸಮುದಾಯದವರೆಲ್ಲರ ಒತ್ತಾಯವಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಗೊಂದಲಿಗರ ಹಿರಿಯರು, ಯುವಕರು ಎಲ್ಲರೂ ಸೇರಿ ಗುಂಪು ಚರ್ಚೆಯ ಮೂಲಕ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ, ಅಧ್ಯಯನದಲ್ಲಿ ನೀಡಲಾಗಿದೆ.

**೮. ಸಂಖ್ಯಾಶಾಸ್ತ್ರೀಯ ವಿಧಾನ**

'ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ' ಈ ಅಧ್ಯಯನಕ್ಕಾಗಿ ಉತ್ತರ ಕರ್ನಾಟಕದಲ್ಲಿ ವಾಸಿಸುವ ಗೊಂದಲಿಗರ ಕುಟುಂಬಗಳನ್ನು ನಿಗದಿ ಪಡಿಸಿದ ಒಂದು ಪ್ರಶ್ನಾವಳಿಯ ಮೂಲಕ ಕುಟುಂಬಗಳ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅದನ್ನು ಈ ಅಧ್ಯಯನದಲ್ಲಿ ಅಂಕಿಸಂಖ್ಯೆಗಳ ಮೂಲಕ ನೀಡಲಾಗಿದೆ.

**೯. ಅವಲೋಕನ ವಿಧಾನ**

ಗೊಂದಲಿಗರ ಸಮುದಾಯದಲ್ಲಿ ನಡೆಯುವ ಮದುವೆ-ಮುಂಜಿವೆ, ಶವಸಂಸ್ಕಾರ, ಜಾತ್ರೆ ಉತ್ಸವಗಳಲ್ಲಿ ಭಾಗವಹಿಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ವಿಧಾನದ ಮೂಲಕ ಅವರ ಕೆಲ ಆಚರಣೆಗಳನ್ನು ಸೂಕ್ಷ್ಮವಾಗಿ ಗಮನಿಸುವದರ ಮೂಲಕ, ಮಾಹಿತಿಗಳನ್ನು ಸಂಗ್ರಹಿಸಿ,

ಸಂಗ್ರಹಿಸಿದ ಮಾಹಿತಿಗಳನ್ನು ಮಾಹಿತಿದಾರರ ಮುಂದೆ ಚರ್ಚಿಸಿ ನಂತರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

## ೧.೫ ಇಲ್ಲಿಯವರೆಗೆ ನಡೆದ ಅಧ್ಯಯನದ ಸಮೀಕ್ಷೆ

ಪುಸ್ತಕಗಳು ನಮ್ಮ ಜ್ಞಾನಾಭಿವೃದ್ಧಿಯ ಅಮೂಲ್ಯ ಸಂಪತ್ತುಗಳು. ವಿದ್ವಾಂಸರು, ದಾರ್ಶನಿಕರು, ಶಾಸ್ತ್ರಜ್ಞರು, ಅನೇಕರು ಬರೆದಂತಹ ಗ್ರಂಥಗಳು, ಮಾಹಿತಿಯ ಕಣಜಗಳು. ವಿವಿಧ ವಿಷಯಗಳಿಗೆ ಸಂಬಂಧಪಟ್ಟಂತೆ ಇರುವ ಗ್ರಂಥಗಳು ಆಯಾ ವಿಷಯಗಳ ಮಾಹಿತಿ, ವಿವರಣೆಯನ್ನು ತಿಳಿಸಿ ಕೊಡುತ್ತವೆ. ಸಂಶೋಧನಾ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವಿಷಯಕ್ಕೆ ಸಂಬಂಧಪಟ್ಟ ಗ್ರಂಥಗಳು ವಿಷಯದ ವಿಶ್ಲೇಷಣೆಗೆ ಹಿನ್ನೆಲೆಯ ಮಾಹಿತಿಯನ್ನು ಒದಗಿಸುವಲ್ಲಿ ಅತ್ಯುಪಯುಕ್ತವಾಗಿವೆ. 'ಗೊಂದಲಿಗರು ಮತ್ತು ಆಧುನಿಕ ಮುಖಾಮುಖಿ' ಎನ್ನುವ ಸಂಶೋಧನಾ ಅಧ್ಯಯನಕ್ಕೆ ಪೂರಕವಾಗಿ ಅನೇಕ ಗ್ರಂಥಗಳು ಹಾಗೂ ಲೇಖನಗಳು ರಚಿತವಾಗಿವೆ. ಇಲ್ಲಿಯವರೆಗೆ ಗೊಂದಲಿಗ ಸಮುದಾಯದ ಕುರಿತು ಕೆಳಕಂಡ ಶಾಸ್ತ್ರಜ್ಞರು, ಸಮಾಜವಿಜ್ಞಾನಿಗಳು, ಮಾನವ ಶಾಸ್ತ್ರಜ್ಞರು ಅಧ್ಯಯನ ಕೈಗೊಂಡು, ಗ್ರಂಥಗಳನ್ನು ಬರೆದಿದ್ದನ್ನು ಗಮನಿಸಬಹುದಾಗಿದೆ.

* ಸೈಯದ್ ಸಿರಾಜ್ ಉಲ್ ಹಸನ್ ಅವರು– "The Castes and Tribes of H.E.H The Nizam's Dominion"ಎಂಬ ಗ್ರಂಥದಲ್ಲಿ– "**Gondhali**- a class of Marathi beggars, musicians and dancers, to be found in all the districts of the Marathawada, but especially in the District of Usmanabad. They take their name from their professional dance, gondhal, the word being probably derived from tumultuous row which the Gondhalis raise while performing the dance. Their traditions say that they were descended from the sage **Jamdagni** and his wife **Renuka.** According to another account, they are identical with the maitriyas of olden times, who were regarded as the progeny of a **Vaidehike** father and an **Ayogava** mother". ಎನ್ನುವ ಗೊಂದಲಿಗರ ಹಿನ್ನೆಲೆಯೊಂದಿಗೆ ಸಮುದಾಯದ ಒಳರಚನೆ, ವಿವಾಹ, ಜನನ, ಸಾವು/ಮರಣ, ವಿವಾಹದ ಕುರಿತು ವಿವರಿಸುವದರ ಜೊತೆಗೆ, ಅನುಸರಿಸುತ್ತಿರುವ ಧರ್ಮದ ಕುರಿತು ವಿವರಿಸಿದ್ದಾರೆ. ವೃತ್ತಿಯ ಕುರಿತ ವಿವರಣೆಯಲ್ಲಿ ಗೊಂದಲ ಪೂಜೆಯ, ಆಚರಣೆಯ ಬಗ್ಗೆ ಸಂಕ್ಷಿಪ್ತ ವಿವರಣೆಯನ್ನು ನೀಡಿದ್ದಾರೆ.

* ಎಡ್ಗರ್ ಥರಸ್ಟನ್ ಮತ್ತು ಕೆ. ರಂಗಾಚಾರಿ ಅವರು– "Castes and Tribes of Southern India" Vol-IIದಲ್ಲಿ ಗೊಂದಲಿಗರು ಭಿಕ್ಷಾರ್ಥಿಗಳಾಗಿದ್ದು ಬುಡಬುಡಕಿಗಳಂತೆ ಮರಾಠಾ ಮೂಲದವರಾಗಿದ್ದಾರೆ. ಅವರು ದುರ್ಗೆಯ ಆರಾಧಕರಾಗಿದ್ದು ಅವರ ಉದ್ಯೋಗ ಅವರ ಹೆಸರೇ ಹೇಳುವಂತೆ 'ಗೊಂದಳ' ಮಾಡುವದು, ಇದು ಒಂದು ಬಗೆಯ ಪಂಜಿನ ಬೆಳಕಿನ ನೃತ್ಯ. ಸಾಮಾನ್ಯವಾಗಿ

ಗೊಂದಳವು ಅಂಬಾಭವಾನಿಯ ಗೌರವಾರ್ಥ ನೆರವೇರಿಸಲ್ಪಡುತ್ತಿದ್ದು ವಿಶೇಷವಾಗಿ ದೇಶಸ್ಥ ಬ್ರಾಹ್ಮಣರ ಮನೆಗಳಲ್ಲಿ, ಮದುವೆಯ ನಂತರ ಅಥವಾ ಯಾವದೇ ಪ್ರತಿಜ್ಞೆ/ಹರಕೆಯ ನೆರವೇರಿಕೆಯ ಸಂದರ್ಭದಲ್ಲಿ ಮಾಡಲಾಗುತ್ತದೆ. ಎಂಬ ವಿವರಣೆಯನ್ನು ಕೊಟ್ಟಿದ್ದಾರೆ.

* ಆರ್.ಇ. ಎಂಥೋವೆನ್ ಅವರು– "The Tribes and Castes of Bombay" ಎಂಬ ಗ್ರಂಥದಲ್ಲಿ ಕೊಲಬಾ, ಸತಾರ, ಖಾನದೇಶ, ಕೊಲ್ಲಾಪುರ ಭಾಗಗಳಲ್ಲಿ, ಹೆಚ್ಚಿನ ಪ್ರಮಾಣದಲ್ಲಿ ಇರುವ ಗೊಂದಲಿಗರು ತುಳಜಾಪುರದ ಅಂಬಾಭವಾನಿಯ ಆರಾಧಕರಾಗಿದ್ದು, ಗೊಂದಳ ಅಥವಾ ಗೊಂದಲ ಎನ್ನುವ ವಿಶಿಷ್ಟ ಆರಾಧನಾ ವಿಧಾನವನ್ನು ಆಚರಿಸುತ್ತಾರೆ. ಗೊಂದಲಿಗರ ಗೊಂದಲ ಪೂಜೆ, ವಿವಾಹ ಹಾಗೂ ರೀತಿ-ನೀತಿಗಳನ್ನು ಕುರಿತು ವಿವರಿಸಿದ್ದಾರೆ.

* ಸುಭದ್ರ ಚೆನ್ನಾರವರ "Encyclopedia of Indian Tribes and Castes" ಎಂಬ ಸಂಪಾದಿತ ಗ್ರಂಥದಲ್ಲಿ ಸುದೀರ್ಘವಾಗಿ ವಿವರಿಸುತ್ತಾ, ಗೊಂದಲಿಗರು ಬಾಂಬೆ ಪ್ರೆಸಿಡೆನ್ಸಿಯಿಂದ ಬಂದ ಮರಾಠಾ ಮೂಲದವರು. ಕೊಲಬಾ, ಸತಾರ, ಖಾನದೇಶ, ಕೊಲ್ಲಾಪುರಗಳಲ್ಲಿ ಹೆಚ್ಚಾಗಿ ಕಂಡುಬರುವ ದೇವರ ಹರಕೆ ಮಕ್ಕಳಂತಿರುವ ಇವರು, ಧಾರ್ಮಿಕ ಭಿಕ್ಷುಕರ ವರ್ಗ. ಮೈಸೂರ ರಾಜ್ಯದ ಎಲ್ಲಾ ಭಾಗಗಳಲ್ಲಿ ಸಣ್ಣ ಪ್ರಮಾಣದಲ್ಲಿ ಕಂಡುಬರುತ್ತಾರೆ. ಅವರ ಮೂಲ ಮತ್ತು ಪರಂಪರೆಗೆ ಸಂಬಂಧ ಪಟ್ಟಂತೆ "ತಮ್ಮ ಮೂಲ ನಿವಾಸವಾದ ಮಾಹುರ ಮತ್ತು ತುಳಜಾಪುರದ ನಿಜಾಮರ ಗಡಿಯಿಂದ ದಕ್ಷಿಣಕ್ಕೆ ಬಂದ, ಋಷಿ ಜಮದಗ್ನಿ ಮತ್ತು ಆತನ ಪತ್ನಿ ರೇಣುಕೆಯರು ಜಾತಿಯ ಸ್ಥಾಪಕರೆಂದು ಪರಿಗಣಿಸಲಾಗಿದೆ. ಅವರು ತಮ್ಮನ್ನು ದೇವತೆ ಭವಾನಿಯ ಆರಾಧಕರೆಂದು ಕರೆದುಕೊಳ್ಳುತ್ತಾರೆ ಮತ್ತು ಭವಾನಿ ಕವಡೆಗಳೆಂದು ತಿಳಿದ ಹಳದಿ ಕವಡೆಗಳ ಮಾಲೆಯನ್ನು ಕೊರಳಸುತ್ತಾ ಧರಿಸುತ್ತಾರೆ. ದೇವಿಯ ಆರಾಧಕರಾಗಿರುವ ಇವರು, ಕೆಳ ವರ್ಗದ ಹಿಂದುಗಳಲ್ಲಿ ಬಹಳ ಪ್ರಭಾವ ಹಾಗೂ ಜನಪ್ರೀಯತೆಯನ್ನು ಹೊಂದಿರುತ್ತಾರೆ. ೭ನೇ ಶತಮಾನದ ಪ್ರಾರಂಭದಿಂದ ಅಂಬಾಭವಾನಿ ಆರಾಧನೆ ಡೆಕ್ಕನ್ನಿನ ಉದ್ದಗಲಕ್ಕೂ ವ್ಯಾಪಿಸಿತ್ತು. ದೇವಿಯ ಶ್ಲಾಘಣೆ ಪ್ರತಿ ಮರಾಠ ರಲ್ಲಿಯೂ ಪ್ರತಿಧ್ವನಿಸುತ್ತಿತ್ತು. ಗೊಂದಲಿಗರು ತಮ್ಮ ದೇವಿ ಹಾಡುಗಳಿಂದ ಹೆಚ್ಚು ಜನಪ್ರಿಯರಾಗಿದ್ದು ಇಂಥಹ ಸಂದರ್ಭದಲ್ಲಿ ಜನರು ಇವರನ್ನು ಹೆಚ್ಚು ಗೌರವದಿಂದ ಕಾಣುತ್ತಿದ್ದರು. ಮುಂದುವರೆದು ಗೊಂದಲ ನೃತ್ಯ ಮಾಡುವಾಗ ಗೊಂದಲಿಗರ ಮೈಯಲ್ಲಿ ಬಂದ ದೇವಿ, ಭೂತ-ಭವಿಷ್ಯದ, ಘಟನೆ ಗಳ ಬಗ್ಗೆ ಭವಿಷ್ಯ ನುಡಿಯುವಂತೆ ಮಾಡಿ ಪವಾಡ ಮೆರೆದಳು. ಮುಸಲ್ಮಾನ ಶೋಷಣೆಯಿಂದ ಜರ್ಜರಿತರಾಗಿದ್ದ ಆ ಅವಧಿಯಲ್ಲಿ ಜನಸಾಮಾನ್ಯರ ಭಾಷೆಯಲ್ಲಿ ಹಾಡುಗಳನ್ನು ಹೇಳುತ್ತಿದ್ದ ಗೊಂದಲಿಗರು, ಬಹು ಜನರ ಆಕರ್ಷಣೆಯ ಕೇಂದ್ರವಾಗಿದ್ದರಲ್ಲದೇ, ಜನರ ಮನಮುಟ್ಟಿ ಅಭಿಮಾನ ವನ್ನು ತಟ್ಟಿದ್ದವಲ್ಲದೇ ಅನಕ್ಷರಸ್ಥರಲ್ಲಿಯೂ ದೇಶಾಭಿಮಾನವನ್ನೆಬ್ಬಿಸಿ ದಂಗೆ ಏಳುವಂತೆ ಮಾಡಿತು ಎನ್ನುವ ವಿವರಣೆಯನ್ನು ಕೊಡುವದರ ಜೊತೆಗೆ, ಸಮುದಾಯದ ಒಳರಚನೆ, ಧರ್ಮ, ವೃತ್ತಿಗಳಲ್ಲಿಯ ಗೊಂದಲ ಪೂಜೆಯ ಕುರಿತು ವಿವರಣೆ, ಆಹಾರ ಪದ್ಧತಿಯ ಬಗ್ಗೆ ವಿವರಿಸಿರುವುದು ಕಂಡುಬರುತ್ತದೆ.

* ಕ್ಯಾತನಹಳ್ಳಿ ರಾಮಣ್ಣನವರು- "ಗೊಂದಲಿಗರು ಒಂದು ಅಧ್ಯಯನ", "ಗೊಂದಲಿಗರ ಕಥೆಗಳು", "ಶಿವಮೊಗ್ಗಾ ಗೊಂದಲಿಗರ ಕಥೆಗಳು" ಎಂಬ ಗ್ರಂಥಗಳು ಪ್ರಕಟಗೊಂಡಿದ್ದು, ಗೊಂದಲಿಗರ ಕುರಿತು ಹಾಗೂ ಅವರ ಪರಂಪರೆಯಲ್ಲಿ ಬೆಳೆದುಬಂದ ಸಾಹಿತ್ಯವನ್ನು ಕುರಿತು ವಿವರಿಸಿದ್ದಾರೆ.

* ಸಿಂಗಣ್ಣ ಸಣ್ಣಕ್ಕಿ ಅವರು- "ಗೊಂದಲಿಗರ ಸಂಸ್ಕೃತಿ" ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ, ಉಪಸಂಸ್ಕೃತಿ ಮಾಲೆಯಲ್ಲಿ ಹೊರಬಂದ ಗ್ರಂಥದಲ್ಲಿ ಗೊಂದಲಿಗರ ಮೂಲದ ಕುರಿತು ಚರ್ಚಿಸುವದರ ಜೊತೆಗೆ ಸಾಂಪ್ರದಾಯಿಕ ಜೀವನ ಶೈಲಿ ಸಂಸ್ಕೃತಿ ಹಾಗೂ ಅವರ ಸಾಹಿತ್ಯದ ಕುರಿತು ವಿವರಿಸಿದ್ದಾರೆ.

* ಮುದೇನೂರ ಸಂಗಣ್ಣನವರ- "ಗೊಂದಲಿಗರ ದೇವೆಂದ್ರಪ್ಪನ್ನವರ ಆಟಗಳು" ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಗೊಂಡ ಗ್ರಂಥದಲ್ಲಿ ದಿ. ಗೊಂದಲಿಗರ ದೇವೇಂದ್ರಪ್ಪ ನವರ ಐದು ಆಟಗಳ ಕುರಿತು ವಿವರಣೆ ನೀಡಿದ್ದು, ಪ್ರಾರಂಭಿಕವಾಗಿ ಗೊಂದಲಿಗರ ಹಿನ್ನೆಲೆ, ಗೊಂದಲ ಪೂಜೆಯ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡಿದ್ದಾರೆ.

* ಡಾ. ಹಿ.ಚಿ. ಬೋರಲಿಂಗಯ್ಯನವರ ಸಂಪಾದಕತ್ವದಲ್ಲಿ "ಕರ್ನಾಟಕ ಜನಪದ ಕಲೆಗಳ ಕೋಶ" ಎಂಬ ಗ್ರಂಥದಲ್ಲಿಯ 'ಗೊಂದಲಿಗರ ಮೇಳ' ಎನ್ನುವ ಲೇಖನದಲ್ಲಿ ಗೊಂದಲಿಗರ ಆಟದ ಬಗ್ಗೆ ವಿವರಿಸಿರುವದನ್ನು ಕಾಣುತ್ತೇವೆ.

* ಡಾ. ಎಚ್.ಜೆ. ಲಕ್ಕಪ್ಪಗೌಡರು ಸಂಪಾದಿಸಿರುವ "ಕರ್ನಾಟಕದ ಬುಡಕಟ್ಟುಗಳು" ಎಂಬ ಗ್ರಂಥದಲ್ಲಿ ಮಂಜುನಾಥ ಬೇವಿನಕಟ್ಟಿಯವರು 'ಬುಡಬುಡಕೆಯವರು' ಎಂಬ ಲೇಖನದಲ್ಲಿ ಬುಡಬುಡಕೆ ಯವರ ಆಚರಣೆ, ಹಾಡುವ ರೀತಿ, ಭವಿಷ್ಯ ನುಡಿಯುವ ಕ್ರಮ, ಬೆಡಗುಗಳು, ನ್ಯಾಯಪದ್ಧತಿ, ನಂಬಿಕೆ-ನಿಷೇಧಗಳು, ಸ್ತ್ರೀಯರ ಸ್ಥಾನಮಾನ ಹಾಗೂ ಅವರ ಸಾಹಿತ್ಯ ಕುರಿತು ವಿವರಿಸಿದ್ದಾರೆ.

* ಶಿವಾನಂದ ಪಾಚಂಗಿ ಅವರು ಕನ್ನಡ ಪುಸ್ತಕ ಪ್ರಾಧಿಕಾರದಿಂದ 'ಗೊಂದಳಿ' ಎಂಬ ಗ್ರಂಥವನ್ನು ಬರೆದಿದ್ದು ಗೊಂದಲಿಗರ ಮೂಲ, ಸಂಸ್ಕೃತಿ, ಆಚರಣೆಗಳ ಜೊತೆಗೆ ಅವರ ಸಾಹಿತ್ಯದ ಕುರಿತು ಹೆಚ್ಚು ಒತ್ತು ಕೊಟ್ಟಿದ್ದಾರೆ.

* ಗಂಗಾಧರ ದೈವಜ್ಞ ಅವರ ಹಂಪಿ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪ್ರಸಾರಾಂಗದಿಂದ ಹೊರಬಂದ 'ಗೊಂದಲಿಗರು' ಎಂಬ ಗ್ರಂಥದಲ್ಲಿ ಗೊಂದಲಿಗರ ಹಿನ್ನೆಲೆ, ಆಚರಣೆ ಹಾಗೂ ಅವರು ಅನುಸರಿಸುವ ವೃತ್ತಿಗಳು, ಆರ್ಥಿಕ ಸ್ಥಿತಿಗತಿಯ ಕುರಿತು ವಿವರಿಸಿದ್ದಾರೆ.

* ಸಮುದಾಯದಿಂದ ಹೊರಬರುತ್ತಿರುವ 'ಗುಪ್ತಚಾರ' ವಾರಪತ್ರಿಕೆ, ದಿನಪತ್ರಿಕೆಗಳಲ್ಲಿ ಬರುವ ಗೊಂದಲಿಗರ ಕುರಿತಾದ ಲೇಖನಗಳು, ವರ್ತಮಾನದ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕವಾಗಿದೆ.

ಗೊಂದಲಿಗರ ಕುರಿತಾಗಿ ಬಂದಿರುವ ಗ್ರಂಥಗಳು ಹಾಗೂ ಲೇಖನಗಳು, ಸಮುದಾಯದ ಹಿನ್ನೆಲೆ ಅವರ ಪಾರಂಪರಿಕ ವೃತ್ತಿ ಆಚರಣೆಗಳಿಗೆ ಸಂಬಂಧಪಟ್ಟಂತೆ ಮಾಹಿತಿಯನ್ನು ಕೊಡುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಇಂದಿನ ಆಧುನಿಕತೆಯಲ್ಲಿ ಗೊಂದಲಿಗರು ಸಾಮಾಜಿಕ, ಆರ್ಥಿಕ, ರಾಜಕೀಯ

ಮತ್ತು ಶೈಕ್ಷಣಿಕ ಜೀವನ ವಿಧಾನದಲ್ಲಿ ಯಾವರೀತಿ ಬದಲಾವಣೆಗೆ ಒಳಗಾಗುತ್ತಿದ್ದಾರೆ ಎನ್ನುವ ವಿಶ್ಲೇಷಣೆಯಲ್ಲಿ ಈ ಗ್ರಂಥಗಳ ಆಕರಗಳನ್ನು ಬಳಸಿಕೊಳ್ಳಲಾಗಿದೆ.

## ೧.೬ ಅಧ್ಯಯನದ ಮಹತ್ವ

ಅಕ್ಷರಲೋಕದ ಮಡಿವಂತ ಸಮಾಜದ ಸಂಸ್ಕೃತಿಗಿಂತಲೂ ಜೀವಪರ ನೆಲೆಯ ಜಾನಪದ ಲೋಕವನ್ನು ಶ್ರೀಮಂತಗೊಳಿಸಿರುವ ಅಲೆಮಾರಿ-ಅರೆಅಲೆಮಾರಿ ಸಮುದಾಯ ಗಳಲ್ಲೊಂದಾದ ಗೊಂದಲಿಗರು, ಸಾಮಾಜಿಕ ವ್ಯವಸ್ಥೆಯಲ್ಲಿ ಕಲಾವಿದರಾಗಿ, ಸಾಂಸ್ಕೃತಿಕ ಮಾಧ್ಯಮಗಳಾಗಿ, ತಮ್ಮ ಉಪಜೀವನಕ್ಕಾಗಿ ಅಲೆದಾಟದ ಜೀವನವನ್ನು ಕಳೆಯುತ್ತಾ ಬಂದವರು. ಸಮಕಾಲೀನ ಸಂದರ್ಭದಲ್ಲಿ ಗೊಂದಲಿಗರು ಸ್ಥಿರ ನೆಲೆಯನ್ನು ಕಂಡುಕೊಂಡಿದ್ದರೂ, ಇನ್ನೂ ಹಲವರು ಅರೆ-ಅಲೆಮಾರಿತನದ ಬದುಕನ್ನು ಕಳೆಯುತ್ತಿದ್ದಾರೆ. ಪರಿಣಾಮ ಆರ್ಥಿಕವಾಗಿ ದುರ್ಬಲವಾಗಿರುವ ಗೊಂದಲಿಗರು ಶೈಕ್ಷಣಿಕ ವಾಗಿಯೂ ಹಿಂದುಳಿದಿದ್ದಾರೆ. ಹೀಗಾಗಿ ಗೊಂದಲಿಗರು ಇಂದಿನ ಆಧುನಿಕ ಕಾಲದಲ್ಲಿ ಪೂರ್ಣ ಪ್ರಮಾಣದಲ್ಲಿ ಬದಲಾವಣೆಗೊಂಡಿಲ್ಲ ಎಂದರೆ ತಪ್ಪಾಗಲಾರದು.

ಭಾರತದಲ್ಲಿಯ ಜನ-ಸಮುದಾಯಗಳ ಮೇಲೆ ಆಧುನಿಕತೆಯ ಪ್ರಭಾವ ಬೀರಿದ್ದು ಪ್ರತಿಯೊಂದು ಜನಾಂಗಗಳು ಬದಲಾವಣೆಗೆ ಒಳಪಡುತ್ತಿರುವದನ್ನು ಕಾಣುತ್ತೇವೆ. ಪ್ರಸ್ತುತ ಅಧ್ಯಯನವು ಗೊಂದಲಿಗರ ಜೀವನ ವಿಧಾನ ಹಾಗೂ ಸಾಮಾಜಿಕ ಜೀವನದಲ್ಲಾದ ಬದಲಾವಣೆಯ ಬಗ್ಗೆ ಅಧ್ಯಯನಿಸಲಾಗಿದೆ. ಕೆಲವಾರು ದಶಕಗಳ ಹಿಂದಿನ ಸ್ಥಿತಿ-ಗತಿ, ಈಗಿರುವ ಗೊಂದಲಿಗರಲ್ಲಿ ಸಂಪೂರ್ಣ ಅಲ್ಲದಿದ್ದರೂ ಬದಲಾವಣೆಯ ಹಂತದಲ್ಲಿರುವ ಸನ್ನಿವೇಶವನ್ನು ಕಾಣುತ್ತೇವೆ. ಇನ್ನುಳಿದ ಸಮುದಾಯದವರಂತೆ ಈ ಸಮುದಾಯವು ಪರಿವರ್ತನೆಗೊಳ್ಳುತ್ತಿದೆ. ಸಮಕಾಲೀನ ಸಮಾಜದ ಆಚಾರ-ವಿಚಾರ, ಸಂಪ್ರದಾಯ ಗಳಿಂದ, ಈ ಜನಸಮುದಾಯವು ಸಾಕಷ್ಟು ಪ್ರಭಾವಿತರಾಗುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಗೊಂದಲಿಗ ರಲ್ಲಿಯ ಸಾಮಾಜಿಕ ಬದಲಾವಣೆಗೆ ಕಾರಣವಾದ ಅಂಶಗಳು ಯಾವವು ಬದಲಾವಣೆಗೆ ಅವರು ಯಾವ ರೀತಿ ಸ್ಪಂದಿಸುತ್ತಿದ್ದಾರೆ ಎನ್ನುವುದನ್ನು ಈ ಅಧ್ಯಯನದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ - ೨

# ಗೊಂದಲಿಗರ ಸಮುದಾಯದ ಹಿನ್ನೆಲೆ

೨.೧ ಗೊಂದಲಿಗರ ಮೂಲ ಹಾಗೂ ಹಿನ್ನೆಲೆ

೨.೨ ಪೌರಾಣಿಕ ಹಾಗೂ ಸಾಹಿತ್ಯಿಕ ಹಿನ್ನೆಲೆ

೨.೩ ಗೊಂದಲಿಗರಲ್ಲಿರುವ ಪ್ರಚಲಿತ ಕಥೆಗಳು ಹಾಗೂ ನಂಬಿಕೆಗಳು

೨.೪ ಗೊಂದಲಿಗರು ವಾಸಿಸುವ ಭೌಗೋಳಿಕ ಪರಿಸರ

೨.೫ ಗೊಂದಲಿಗರ ಜನಸಂಖ್ಯೆ

# ಅಧ್ಯಾಯ ಎರಡು

# ಗೊಂದಲಿಗರ ಸಮುದಾಯದ ಹಿನ್ನೆಲೆ

**ಭೂ**ಮಿಯ ಮೇಲೆ ಮಾನವ ತನ್ನ ಅಸ್ತಿತ್ವದಡಿಯಲ್ಲಿ ಹೇಗೊ ಅಲೆಮಾರಿತನದ ಬದುಕನ್ನು ಕಳೆಯುತ್ತಾ ಬಂದೆಂತೆಲ್ಲ, ನಾಗರೀಕತೆಯ ಬೆಳೆವಣಿಗೆಯ ಅಡಿಯಲ್ಲಿ ಹಲವಾರು ಜನ ಸಮೂಹಗಳು ಸ್ಥಿರತೆಯ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸಿರುವುದು ಅಷ್ಟೇ ಅಲ್ಲ ಸ್ಥಿರತೆಯ ನೆಲೆಯಲ್ಲಿ ಸಾಮುದಾಯಿಕ ಜೀವನವನ್ನು ಕಂಡು ಕೊಂಡಿರುವುದು ಒಂದೆಡೆ ಆದರೆ, ಇನ್ನೊಂದೆಡೆ ಅನೇಕ ಜನ ಸಮೂಹಗಳು ಅಂತಹ ಸ್ಥಿರತೆಯ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸದೆ ಸಾಧ್ಯವಾಗದೆ ಅಲೆಮಾರಿತನದ ಅಡಿಯಲ್ಲಿಯೇ ಬದುಕನ್ನು ಕಳೆಯುತ್ತಾ ಬಂದಿದ್ದಾರೆ.

"ಮಾನವ ಮೂಲತಃ ಆಹಾರಕ್ಕಾಗಿ ಅಲೆದಾಡುವ ಪ್ರವೃತ್ತಿಯನ್ನು ಹೊಂದಿದ್ದಾನೆ. ಒಂದುಕಡೆ ನೆಲೆ ನಿಂತು ನಿರ್ದಿಷ್ಟ ಸ್ಥಳದಲ್ಲಿ ಕೃಷಿಯ ಮತ್ತು ಪಶು ಸಂಗೋಪನೆಯ ಮೂಲಕ ಆಹಾರವನ್ನು ಮತ್ತು ಬದುಕನ್ನು ಕಂಡುಕೊಳ್ಳುವ ಮುಂಚೆ ರೂಢಿಯಲ್ಲಿದ್ದ ಸ್ಥಳಾಂತರ ಬೇಸಾಯ ಪದ್ಧತಿ ಕೂಡಾ, ಮಾನವನ ಅಲೆಮಾರಿ ಗುಣವನ್ನೆ ಹೇಳುತ್ತದೆ. ಸಾಮಾಜಿಕ ಒತ್ತಡದ ಪರಿಣಾಮವಾಗಿ ಸಂಪತ್ತಿನ ಸಂಗ್ರಹಣೆಯ ಚಪಲದಿಂದಾಗಿ ಉಂಟಾದ ಭೂ ಒಡೆತನ ಪ್ರಜ್ಞೆ ಮಾನವನನ್ನು ಒಂದೆಡೆ ನೆಲೆ ನಿಲ್ಲುವಂತೆ ಪ್ರಾಯಶಃ ಮಾಡಿದೆ. ಇವುಗಳ ಪರಿವೆಯೆ ಇಲ್ಲದ ಮೂಲ ಸ್ವಭಾವವನ್ನು ಇಂದಿಗೂ ಉಳಿಸಿಕೊಂಡ ಜನ ಸಮುದಾಯಗಳನ್ನು ಅಲ್ಲಲ್ಲಿ ಕಾಣಬಹುದಾಗಿದೆ".[೧] ಹೀಗೆ ಬದುಕಿನಲ್ಲಿ ಸ್ಥಿರತೆಯನ್ನು ಕಂಡುಕೊಂಡು ಆದಾಯ ಮೂಲ ಉದ್ಯೋಗದಲ್ಲಿ ತೊಡಗಿಕೊಳ್ಳದೇ ಇರುವಂತಹ ಜನಸಮುದಾಯಗಳು ಇಂದಿಗೂ ಅಲೆಮಾರಿಗಳಾಗಿಯೇ ಉಳಿದಿವೆ.

ರೆಡ್ ಫೀಲ್ಡ್ ಮತ್ತು ಗರ್ಟ್ ಅವರು- "ಒಂದು ನಿರ್ದಿಷ್ಟ ಜನ ಸಮೂಹವು ಆಹಾರಕ್ಕಾಗಿ ಮತ್ತು ಜೀವನಕ್ಕಾಗಿ ಒಂದು ಸ್ಥಳದಲ್ಲಿ ನಿರಂತರವಾಗಿ ನೆಲೆಯೂರದೆ ನಿಯತವಾಗಿ ಒಂದು ಕಡೆಯಿಂದ ಮತ್ತೊಂದು ಕಡೆ ವಲಸೆ ಹೋಗುವಿಕೆಯನ್ನು ಅಲೆಮಾರಿತನ"[೨] ಎಂದಿದ್ದಾರೆ.

"ಅಲೆಮಾರಿತನವು ಒಂದು ಜೀವನ ವಿಧಾನ. ಬೇಟೆ ಮತ್ತು ಆಹಾರ ಸಂಗ್ರಹಣೆ ಪಶುಪಾಲನೆ ಅಥವಾ ವ್ಯಾಪಾರಕ್ಕಾಗಿ ಮಾನವ ಒಂದೆಡೆ ನೆಲೆಯೂರದೆ, ದಿಕ್ಕು ದೆಸೆಯಿಲ್ಲದೆ ಅಥವಾ ಕಾಲಕ್ರಮಾನುಸಾರದ ಅಲೆಯುವಿಕೆಯನ್ನು ಅಲೆಮಾರಿತನ" ಎಂದು ಬ್ರಿಟಾನಿಕ ವಿಶ್ವಕೋಶದಲ್ಲಿ ವಿವರಿಸಿದೆ. ಸ್ಥಿರತೆಯ ನೆಲೆಯನ್ನು ಕಂಡುಕೊಳ್ಳುವುದಕ್ಕಾಗಿ ಜೀವನದ ನಿರ್ವಹಣೆಗಾಗಿ ನಿಯಮಿತವಾಗಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸುವುದು ಅಲೆಮಾರಿತನ ಎನ್ನಲಾಗುತ್ತದೆ. ಈ ಹಿನ್ನೆಲೆಯಲ್ಲಿ ಮಾನವ ಒಂದೆಡೆ ನೆಲೆನಿಂತು ಜೀವನ ಸಾಗಿಸಲು ಆರಂಭಿಸಿದರೂ ಇಂದಿಗೂ ಭಾರತದಲ್ಲಿ ಹಲವಾರು ಅಲೆಮಾರಿ ಸಮುದಾಯಗಳನ್ನು ಕಾಣುತ್ತೇವೆ.

ಯಾವುದೇ ಅಲೆಮಾರಿ ಸಮುದಾಯವನ್ನು ಒಂದು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಳಿಸಲು ಸಾಧ್ಯವಿಲ್ಲ. ನಿಯಮಿತವಾಗಿ ಸ್ಥಳ ಬದಲಾಯಿಸುವ ಕಾರಣದಿಂದ ಅಲೆಮಾರಿಗಳು ಎಲ್ಲ ಪ್ರದೇಶಗಳಲ್ಲಿಯೂ ಕಂಡುಬರುತ್ತಾರೆ. ಕರ್ನಾಟಕದ ಹಿನ್ನೆಲೆಯಲ್ಲಿ ಕಂಡು ಬರುವ ಹಲವಾರು ಅಲೆಮಾರಿ ಸಮುದಾಯಗಳನ್ನು ಹೇಳುವುದಾದರೆ, ಕಿಳ್ಳಿಕ್ಯಾತರು, ಹಾವಾಡಿಗ, ಗೊರವ, ದುರುಗಮುರುಗಿಯರು, ಕಿನ್ನರ ಜೋಗಿಗಳು, ಸುಡಗಾಡ ಸಿದ್ಧರು, ಗೊಂದಲಿಗರು ಮುಂತಾದವರನ್ನು ಗುರುತಿಸಬಹುದಾಗಿದೆ.

ಡಾ. ಸ.ಚಿ. ರಮೇಶರವರು ಸಂಪಾದಿಸಿದ "ಅಲೆಮಾರಿಗಳ ಸ್ಥಿತಿಗತಿ" ಎಂಬ ಗ್ರಂಥದಲ್ಲಿ 'ಅಲೆಮಾರಿಗಳ ಆರ್ಥಿಕ ಸ್ಥಿತ್ಯಂತರಗಳು' ಎಂಬ ಲೇಖನ ಹೊಂದಿದ್ದು, ಲೇಖಕ ಡಾ. ಎ.ಎಸ್. ಪ್ರಭಾಕರ ಅವರು ಅಲೆಮಾರಿಗಳನ್ನು ಈ ಕೆಳಗಿನಂತೆ ೫ ಭಾಗಗಳಾಗಿ ವಿಂಗಡಿಸಿದ್ದಾರೆ.

"೧. ಪ್ರದರ್ಶಕ ಕಲೆಗಳನ್ನು ಅವಲಂಭಿಸಿರುವ ಸಮುದಾಯಗಳು – ದೊಂಬರು, ಜಾತಿಗಾರರು, ಕಿಳ್ಳಿಕ್ಯಾತರು, ಹಗಲುವೇಷದವರು, ಕವಲೆತ್ತಿನವರು, ದೊಂಬಿದಾಸರು, ಕಿನ್ನರಜೋಗಿಗಳು, ಬುಡಬುಡಿಕೆ, ಗೊಂದಲಿಗರು, ಮೋಡಿಕಾರರು.

೨. ಕರಕುಶಲ ಕಲೆಯನ್ನು ಅವಲಂಭಿಸಿದ ಸಮುದಾಯಗಳು – ಬಯಲುಪತ್ತಾರ, ಬಯಲು ಕಮ್ಮಾರರು, ಮೇದಾರ, ಪಿಂಜಾರರು, ಮುದ್ದೆ ಕಂಬಾರರು, ಹಂಡಿಜೋಗಿಗಳು.

೩. ಧಾರ್ಮಿಕ ಸಂಬಂಧಿ ವೃತ್ತಿಗಳನ್ನು ಅವಲಂಭಿಸಿರುವವರು – ದುರಗಮುರಿಗಿಯವರು, ಗೊರವರು, ದೊಂಬಿದಾಸರು, ಸುಡಗಾಡ ಸಿದ್ಧರು, ಅರ್ಜುನಜೋಗಿಗಳು, ಬೈರಾಗಿಗಳು.

೪. ಪಾರಂಪರಿಕ ಮೂಲ ವೃತ್ತಿಗಳಲ್ಲಿ ಇರುವ ಸಮುದಾಯಗಳು – ಹೆಳವರು, ದಕ್ಕಲರು, ಮೊಂಡರು.

೫. ಬೇಟೆ ಪಶುಪಾಲನೆ ಮತ್ತು ಆಹಾರ ಸಂಗ್ರಹಣೆಯಂತಹ ಮೂಲ ಕಸಬುಗಳನ್ನು ಅವಲಂಬಿಸಿರುವವರು- ಅಡವಿ ಚೆಂಚರು, ಯಾನಾದಿಗಳು, ಹಕ್ಕಿಪಿಕ್ಕಿಗಳು, ಅಲೆಮಾರಿ ಕುರುಬರು, ಗೋಸಂಗಿಗಳು, ಕಿಳ್ಳೆಕ್ಯಾತರು, ರಾಜಗೊಂಡರು, ೨೪ ಮನೆ ತೆಲುಗುಶೆಟ್ಟರು, ಎಂದು ವಿಂಗಡಿಸಿದ್ದಾರೆ.[೩] ಹೀಗೆ ವಿವಿಧ ರೀತಿಯಲ್ಲಿ ಅಲೆಯುತ್ತ ಬದುಕನ್ನು ರೂಪಿಸಿಕೊಳ್ಳುವ ಅಲೆಮಾರಿ ಜನಾಂಗಗಳನ್ನು ಇದೇ ಗ್ರಂಥದಲ್ಲಿ 'ಮಾನವ ಸಂಬಂಧಿ ಲೋಕದೃಷ್ಟಿ' ಎನ್ನುವ ಲೇಖನದಲ್ಲಿ ಡಾ. ಶ್ರೀಪಾದ ತಮ್ಮಯ್ಯ ಭಟ್‌ರವರು ಮೂರು ರೀತಿಯಲ್ಲಿ ವರ್ಗೀಕರಿಸಿದ್ದಾರೆ:

೧. ಬೇಟೆಗಾರರು ಮತ್ತು ಆಹಾರ ಸಂಗ್ರಹಕಾರರು.

೨. ಪಶು ಸಂಗೋಪನಾ ಅಲೆಮಾರಿಗಳು.

೩. ಕಲಾಯಿ ಕೆಲಸಗಾರರು ಅಥವಾ ವಣಿಕರು.

ಈ ರೀತಿ ವರ್ಗೀಕರಣದ ಅಡಿಯಲ್ಲಿ ಕಂಡುಬರುವ ಅಲೆಮಾರಿಗಳು ಎಂದಾಕ್ಷಣ ಒಂದೆಡೆಗೆ ನೆಲೆ ಕಂಡುಕೊಳ್ಳದವರು, ಸ್ಥಿರ ನೆಲೆ ನಿಲ್ಲದವರು ಎಂದೇ ಅರ್ಥೈಸಲಾಗುತ್ತದೆ.

"ನವದೆಹಲಿಯ ರಾಷ್ಟ್ರೀಯ ವಿಮುಕ್ತ ಅಲೆಮಾರಿ ಮತ್ತು ಅರೆಅಲೆಮಾರಿ ಬುಡಕಟ್ಟು ಆಯೋಗದ ಅಂದಾಜು ಪಟ್ಟಿಯ ಪ್ರಕಾರ ಭಾರತದ ೨೩ ರಾಜ್ಯಗಳಲ್ಲಿ ಮತ್ತು ೫ ಕೇಂದ್ರಾಡಳಿತ ಪ್ರದೇಶಗಳಲ್ಲಿ ಒಟ್ಟು ೭೪೯ ವಿಮುಕ್ತ ಮತ್ತು ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿವೆ. ಪ್ರಸ್ತುತ ಭಾರತದಲ್ಲಿ ಇವುಗಳ ಒಟ್ಟು ಜನಸಂಖ್ಯೆ ಸುಮಾರು ೧೦ ಕೋಟಿಯನ್ನು ಮೀರಿದೆ. ಅಂದರೆ ಭಾರತದ ಒಟ್ಟು ಜನಸಂಖ್ಯೆಯ ಶೇ. ೧೦ರಷ್ಟು ಜನ ಈ ಹಿನ್ನೆಲೆಯವರಿವರು. ಮಹಾರಾಷ್ಟ್ರದ ರಾಜ್ಯದಲ್ಲಿ ಅತ್ಯಧಿಕ ಅಂದರೆ ೭೩ ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿ ಇದ್ದರೆ, ಎರಡನೇ ಸ್ಥಾನ ೫೬ ಅಲೆಮಾರಿ ಸಮುದಾಯಗಳನ್ನು ಹೊಂದಿದ ಕರ್ನಾಟಕ ರಾಜ್ಯಕ್ಕೆ ಸಲ್ಲುತ್ತದೆ. ಇಂತಹ ಸಮುದಾಯಗಳು ಭಾರತೀಯ ಸಂವಿಧಾನ ಮೀಸಲಾತಿಯಲ್ಲಿ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಹಂಚಿ ಹೋಗಿವೆ. ಇಂತಹ ಅಲೆಮಾರಿ ಸಮುದಾಯಗಳು ಸರ್ಕಾರದ ಯೋಜನೆಗಳಿಂದ ಹಾಗೂ ಸಮುದಾಯಗಳ ಸಹಕಾರದಿಂದ ನೆಲೆಕಂಡಿವೆ. ಆದರೂ ಇನ್ನೂ ಬದುಕಿಗಾಗಿ ಜೀವನ ನಿರ್ವಹಣೆಗಾಗಿ ತಿಂಗಳುಗಟ್ಟಲೇ ಅಲೆಮಾರಿತನವನ್ನು ಮುಂದುವರೆಸಿವೆ".[೪]

ಕರ್ನಾಟಕದಲ್ಲಿ ವಾಸಿಸುತ್ತಿರುವ ಬುಡಕಟ್ಟಿನ ವಿಭಿನ್ನ ಅಲೆಮಾರಿಗಳಲ್ಲಿ ಸುಡಗಾಡು ಸಿದ್ದರು, ಹೆಳವರು, ಗೊಂದಲಿಗರು, ಬುಡಬುಡಕೆಯವರು, ಕೊರವರು, ವೇಷಗಾರರು, ದುರುಗಮುರಗಿಯವರು, ಗೊರವರು, ರಾಮಕೊಂಡಾಡಿಗಳು, ಕವಲತ್ತಿನವರು ಪ್ರಮುಖರು. ಇವರು ಒಂದೇ ವಲಯ ಅಥವಾ ಸ್ಥಳದಲ್ಲಿ ನೆಲೆಯೂರಿ ನಿಲ್ಲದೇ ಜೀವನೋಪಾಯಕ್ಕಾಗಿ ಕುಟುಂಬ ಸಮೇತ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಲೆದಾಡುವದರಿಂದ ಅಲೆಮಾರಿಗಳೆಂದು ಕರೆಯಲಾಗುತ್ತಿದೆ. ತಮ್ಮದೆಯಾದ ಕಲೆ, ಭಾಷೆ, ಸಾಹಿತ್ಯ, ಸಂಸ್ಕೃತಿ ಹೊಂದಿರುವ ಇವರು ಭಾರತೀಯ ಸಮಾಜದ ಸಾಂಸ್ಕೃತಿಕ ಸಂಪತ್ತನ್ನು ಹೆಚ್ಚಿಸಿದ್ದಾರೆ. ಒಂದೊಂದು ಅಲೆಮಾರಿ ಸಮುದಾಯದವರು ಒಂದೊಂದು ರೀತಿಯ

ಸಾಮಾಜಿಕ ಸಾಂಸ್ಕೃತಿಕ, ಸಾಹಿತ್ಯಿಕ ಹಾಗೂ ಧಾರ್ಮಿಕವಾದ ಕಟ್ಟು ಕಟ್ಟಳೆಗಳನ್ನು ಪಾಲಿಸಿಕೊಂಡು ಬಂದಿದ್ದಾರೆ. ಒಂದು ರೀತಿ ಭಾರತೀಯ ಸಾಮಾಜಕ್ಕೆ ಅಲೆಮಾರಿಗಳು ಸಾಂಸ್ಕೃತಿಕ ಮಾಧ್ಯಮಗಳಾಗಿ ತೋರ ಹೊಮ್ಮಿದ್ದಾರೆ. ಅಕ್ಷರ ಲೋಕದ ಮಡಿವಂತ ಸಮಾಜದ ಸಂಸ್ಕೃತಿಗಿಂತಲೂ ಜೀವಪರ ನೆಲೆಯ ಜನಪದ-ಸಾಮಾಜಿಕ ಲೋಕವನ್ನು ಶ್ರೀಮಂತ ಗೊಳಿಸಿದವರು ಅಲೆಮಾರಿಗಳು. ಅದರಲ್ಲಿ ಗೊಂದಲಿಗರು ಪ್ರಮುಖರು.

## ೨.೧ ಗೊಂದಲಿಗರ ಮೂಲ ಮತ್ತು ಹಿನ್ನೆಲೆ

ಮೂಲ ಎಂಬ ಎರಡಕ್ಷರದಲ್ಲಿ ವಿಶಾಲವಾದ ಅರ್ಥಅಡಗಿದೆ. ಮೂಲ ಎಂಬ ಕಲ್ಪನೆಯಲ್ಲಿ ಬುಡ, ಹುಟ್ಟು, ನೆಲೆ, ಆದಿ, ಬೇರು, ಮುಂತಾದ ಕಲ್ಪನೆಗಳನ್ನು ತಂದು ಕೊಳ್ಳುತ್ತೇವೆ. ಅಂದರೆ ಪ್ರತಿಯೊಂದು ಜೀವಿ-ನಿರ್ಜೀವ, ಚೇತನ-ಅಚೇತನವಾದುದರ ಆಳವನ್ನು ತಿಳಿದುಕೊಳ್ಳುವುದಾಗಿದೆ. ಈ ದೃಷ್ಟಿಯಲ್ಲಿ ಎಲ್ಲ ಜನ ಸಮುದಾಯಗಳ ಅಂತರಾಳದಲ್ಲಿ ಬೆಳೆದು ಬಂದ ಅನೇಕ ರೀತಿಯ ಕಥೆ, ಕಾವ್ಯ, ಪುರಾಣಗಳು ಆ ಸಮುದಾಯಗಳ ಮೂಲ ಹಾಗೂ ಹಿನ್ನೆಲೆಯನ್ನು ತಿಳಿಸಿಕೊಡುತ್ತವೆ.

"ಒಂದು ಜನಾಂಗ ತನ್ನ ಮೂಲ ಇತಿಹಾಸವನ್ನು ಮರೆಯುವುದೆಂದರೆ ಅದು ತನ್ನ ಸಾಮಾಜಿಕ ಅಸ್ತಿತ್ವದ ವಿಶಿಷ್ಟತೆಯನ್ನು ಮರೆತಂತೆಯೇ ಮೂಲ ಇತಿಹಾಸವನ್ನು ನೆನಪಿಸಿಕೊಳ್ಳುವುದೆಂದರೆ ಒಂದು ಜನ ಸಮುದಾಯ ತಾನು ನಡೆದು ಬಂದ ರೀತಿಯನ್ನು ತನ್ನ ಹಿಂದಿನ ಜೀವನ ವಿಧಾನವನ್ನು ಅರ್ಥಾತ್ ತನ್ನ ಈ ಹಿಂದಿನ ಸಾಂಸ್ಕೃತಿಕ ನಡಿಗೆಯನ್ನು ಅರಿತುಕೊಳ್ಳುವುದು. ತನ್ನ ಸಾಂಸ್ಕೃತಿಕ ನಡಿಗೆಯನ್ನು ಅಥವಾ ಸಾಂಸ್ಕೃತಿಕ ಪರಂಪರೆಯನ್ನು ಅರಿತುಕೊಳ್ಳುವ ಯತ್ನದಿಂದಾಗಿಯೇ ಒಂದು ಸಮುದಾಯಕ್ಕೆ ತನ್ನತನದ ಅರಿವು ತನ್ನ ವಿಶಿಷ್ಟತೆಯ ತಿಳಿವು ಮಾಡುವುದು"[೫]

ಈ ಹಿನ್ನೆಲೆಯಲ್ಲಿ ಗೊಂದಲಿಗರ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ರೂಢಿಸಿ ಕೊಂಡು ಬಂದ ಜೀವನ ಶೈಲಿಯನ್ನು ಅರ್ಥೈಸುವ ದಿಶೆಯಲ್ಲಿ ಗೊಂದಲಿಗರ ಕುರಿತಾದ ಮೂಲ ಹಿನ್ನೆಲೆಯ ವಿವರಗಳನ್ನು ಲಭ್ಯವಿರುವ ಮಾಹಿತಿಗಳ ಆಧಾರದ ಮೇಲೆ ಅರಿತುಕೊಳ್ಳುವದು ಅವಶ್ಯಕ ವಾಗಿದೆ.

ಕರ್ನಾಟಕ ಜನಪದ ಕಾವ್ಯ ಸಂಪ್ರದಾಯಗಳಲ್ಲಿ ವೃತ್ತಿಗಾಯಕ ಸಂಪ್ರದಾಯದವರ ಪಾತ್ರ ಪ್ರಮುಖವಾದದು. ಅತ್ಯಂತ ಗಣನೀಯ ಸಂಖ್ಯೆಯಲ್ಲಿ ಜನಪದ ಕಾವ್ಯಗಳು ವೃತ್ತಿ ಗಾಯಕರಲ್ಲಿ ಕಂಡುಬಂದಿವೆ. ಗೊಂದಲಿಗರು ಕರ್ನಾಟಕದ ವೃತ್ತಿಗಾಯಕ ವರ್ಗದ ಒಂದು ಪ್ರಮುಖ ಸಂಪ್ರದಾಯ ವನ್ನು ಪ್ರತಿನಿಧಿಸುತ್ತವೆ. ಇವರು ಉತ್ತರ ಕರ್ನಾಟಕಕ್ಕೆ ಹೆಚ್ಚಾಗಿ ಸೇರಿದವರಾಗಿದ್ದರೂ, ದಕ್ಷಿಣ ಕರ್ನಾಟಕ ದಲ್ಲಿಯೂ ಸಾಕಷ್ಟು ಸಂಖ್ಯೆಯಲ್ಲಿ ಕಂಡು ಬರುತ್ತಾರೆ.

ಪಂಡಿತ ಕವಲಿಯವರ ಕನ್ನಡ-ಕನ್ನಡ ಕಸ್ತೂರಿ ಕೋಶದಲ್ಲಿ ಗೊಂದಲ ಎಂಬ ಶಬ್ದಕ್ಕೆ "ಗೊಂದಲ, ಗೊಂದಳ, (ನಾ) ಗಲಿಬಿಲಿ, ಗೌಜು, ಗದ್ದಲ, ಸಮೂಹ, ಮಹಾರಾಷ್ಟ್ರದಲ್ಲಿ ಒಂದು

ಉತ್ಸವ ಗೊಂದಣ, ಗೊಂದಣಿ-ಸಮೂಹ, ರಾಶಿ, ಗುಂಪು, ಸಭೆ, ಗಡಣ, ಮೇಳ, ಗೊಂದಲಿಗರ ಕಥಾ-ಪ್ರಸಂಗ, ಗೊಂದಣಿಸು-ನೆರೆಯು, ಗುಂಪಾಗು, ಮೇಳವಿಸು, ಒಟ್ಟಾಗಿಸು". ಎನ್ನುವ ಅರ್ಥವನ್ನು ಕೊಡುತ್ತಿದ್ದು ಇಲ್ಲಿ ಜನರನ್ನು ಸೇರಿಸಿ ದೈವಿಕಥೆಯನ್ನು ಪಸರಿಸುವ ಕಾರ್ಯವೇ ಮೂಲ ಉದ್ದೇಶ.

ಸಾಮಾನ್ಯವಾಗಿ ಗೊಂದಲ ಹಾಕುವವರೇ ಗೊಂದಲಿಗರು ಎಂದು ಕರೆಯಲಾಗುತ್ತದೆ. ದೇವತಾ ಆರಾಧನೆಯ ವಿಧಿ-ವಿಧಾನಗಳನ್ನು ಕ್ರಮಬದ್ಧವಾಗಿ ನೆರವೇರಿಸಿಕೊಡುವ ಕಲಾವಿದರಿಗೆ ಗೊಂದಲಿಗರು ಎಂದು ಕರೆಯುತ್ತಾರೆ. ಇವರು ನೆಡಿಸಿಕೊಡುವ ದೈವಿ ಆರಾಧನೆಯ ಕ್ರಮಕ್ಕೆ ಗೊಂದಲ ಹಾಕುವುದೆಂದು ಹೇಳುತ್ತಾರೆ. ವೃತ್ತಿಗಾಯಕರಾದ ಗೊಂದಲಿಗರು ಇನ್ನೊಂದೆಡೆ ಬುಡಬುಡಿಕೆ ವೃತ್ತಿಯನ್ನು ಅನುಸರಿಸುತ್ತಾರೆ. ಶಕ್ತಿ ದೇವತೆಯ ಆರಾಧಕರಾದ ಗೊಂದಲಿಗರಿಗೆ ತುಳಜಾಪುರದ ಅಂಬಾ ಭವಾನಿಯೇ ಕುಲ ದೈವವಾದರೂ ಉಪಾಸನೆಗಾಗಿ ಇಂದು ಯಾವ ನಿರ್ದಿಷ್ಟ ಕ್ಷೇತ್ರಕ್ಕೂ ಸಿಮೀತರಾಗಿಲ್ಲ. ದುರ್ಗಮ್ಮ ತುಳಜಮ್ಮ, ಯಲ್ಲಮ್ಮ, ಚಾಮುಂಡಮ್ಮ, ಮಾರಮ್ಮ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಗೊಂದಲ ಸಮಾರಂಭದಲ್ಲಿ ದೇವಿಯನ್ನು ಸ್ತುತಿಸುವ ಹಾಡು ಮಿಶ್ರಿತ ದೈವಿ ಕಥೆಯನ್ನು ಸಂಭಾಷಣೆಯೊಂದಿಗೆ ಮೇಳೈಸಿ ಹೇಳುವ ಕಥಾಶೈಲಿ ತುಂಬಾ ಮೋಹಕವಾಗಿರುತ್ತದೆ. 'ಗೊಂದಲ' ದೈವಿ ಕಥೆಗೆ ಬದ್ಧವಾದ ಆರಾಧನೆ. ಇದು ಒಂದು ಸಾಮೂಹಿಕ ವಿಧಿಕ್ರಿಯೆ. ಕುಲಧರ್ಮ ಪಾಲನೆಯ ಸಂಪ್ರದಾಯ, ಅಂಬಾಭವಾನಿಯ ಭಕ್ತರಾದವರು ನವರಾತ್ರಿ, ದೀಪಾವಳಿ, ವಿವಾಹ, ಉಪನಯನಗಳಲ್ಲಿ ಶುಭ ಕಾಮನೆಯ ಸಂಕೇತವಾಗಿ ದುಷ್ಟ ನಿವಾರಣೆಯ ಅಭಿಲಾಶೆಯ ಕುರುಹಾಗಿ ಹರಕೆಯ ರೂಪದಲ್ಲಿ ತಮ್ಮ-ತಮ್ಮ ಮನೆಗಳಲ್ಲಿ ಭಕ್ತಿ-ಶ್ರದ್ಧೆಗಳಿಂದ ಆಹ್ವಾನಿತ ಗೊಂದಲಿಗರಿಂದ ನಡೆಯುವ ಧಾರ್ಮಿಕ ವೃತಾಚರಣೆಯಾಗಿದೆ. ಬುಡಬುಡಿಕೆ ವೃತ್ತಿಯನ್ನು ಅನುಸರಿಸುವವರು ಚರ್ಮ ವಾದ್ಯಗಳಲ್ಲಿ ಅತಿ ಚಿಕ್ಕದಾದ ಕಿಡುಬುಡಿಕೆ(ಢಕ್ಕೆ)ಯನ್ನು ಬಳಸಿ, ಪಣ ಕಟ್ಟಿ ನಸುಕಿನ ವೇಳೆಯಲ್ಲಿ ಹಾಲಕ್ಕಿಯು ನುಡಿಯುವ ಶಕುನದ ಮೂಲಕ ಜನರ ಭವಿಷ್ಯವನ್ನು ನುಡಿಯುತ್ತಾರೆ.

ಕರ್ನಾಟಕದಲ್ಲಿಯ ಅಲೆಮಾರಿ ಜನಾಂಗದವರಾದ ಗೊಂದಲಿಗರ ಮೂಲದ ನೆಲೆಯನು ಗುರುತಿಸುವಲ್ಲಿಯೇ ಅನೇಕ ಗೊಂದಲಗಳಿವೆ. ಗೊಂದಲಿಗರನ್ನು ಕೆಲವರು ಮಹಾರಾಷ್ಟ್ರದವರು ಇನ್ನೂ ಕೆಲವರು ಕನ್ನಡ ನೆಲದವರೇ ಎಂಬ ವಿಭಿನ್ನ ಹೇಳಿಕೆಗಳನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಗೊಂದಲಿಗರ ಮೂಲದ ಬಗ್ಗೆ ಅನೇಕರು ಮಾಡಿದ ಅಧ್ಯಯನಗಳಡಿಯಲ್ಲಿ ನೋಡಲಾಗಿ,

* ಸೈಯದ್ ಸಿರಾಜ್ ಉಲ್ ಹಸನ್ ಅವರು- "The Castes and Tribes of H.E.H The Nizam's Dominions"ಎಂಬ ಗ್ರಂಥದಲ್ಲಿ-

"ಗೊಂದಲಿ ಇದೊಂದು ಮರಾಠಿ ಭಿಕ್ಷುಕರ ಸಂಗೀತಗಾರರ ಮತ್ತು ನೃತ್ಯಗಾರರ ವರ್ಗ. ಈ ವರ್ಗವು, ಮರಾಠವಾಡ ಜಿಲ್ಲೆಯಲ್ಲಿ ಅದರಲ್ಲಿಯೂ ವಿಶೇಷವಾಗಿ ಉಸ್ಮಾನಿಯಾ ಜಿಲ್ಲೆಗಳಲ್ಲಿ ಕಂಡು ಬರುವರು. ವೃತ್ತಿ ನರ್ತನ 'ಗೊಂದಲ'ದಿಂದ ಅವರು ತಮ್ಮ ಹೆಸರನ್ನು ಪಡೆದಿದ್ದಾರೆ. ಬಹಳವಾಗಿ

ಈ ಪದವು, ಕೊಲಾಹಲ, ಗದ್ದಲ, ಯಾವುದನ್ನು ಗೊಂದಲಿಗರು ನೃತ್ಯ ಮಾಡುವಾಗ ಎಬ್ಬಿಸುತ್ತಾರೋ ಆಮೂಲದಿಂದ ಬಂದಿರಬಹುದು. ಅವರು ಜಮದಗ್ನಿ ಋಷಿ ಮತ್ತು ಆತನ ಪತ್ನಿ ರೇಣುಕಾರ ವಂಶಸ್ಥ / ಸಂತತಿ ಎಂಬುದು ಅವರ ಸಂಪ್ರದಾಯ ಹೇಳುತ್ತದೆ. ಮತ್ತೊಂದು ಹೇಳಿಕೆಯ ಪ್ರಕಾರ ತಂದೆ ವೈದೆಹಿಕ ಹಾಗೂ ತಾಯಿ ಅಯೋಗವ ಅವರ ಸಂತಾನವೆಂದು ಪರಿಗಣಿಸಲ್ಪಡುವ ಮೈತ್ರಿಯರ ಸಮಾಗಮ ಹೊಂದಿದ್ದಾರೆ".

* ಸುಭದ್ರ ಚೆನ್ನಾರವರ "Encyclopaedia of Indian Tribes and Castes" ಎಂಬ ಸಂಪಾದಿತ ಗ್ರಂಥದಲ್ಲಿ-

ಗೊಂದಲಿಗರನ್ನು ಬುಡಬುಡಿಕೆಗಳಂತೆ ಮರಾಠ ಮೂಲದ ಭಿಕ್ಷುಕರು ಎಂದು ೧೯೦೧ರ ಮೈಸೂರ ಜನಗಣತಿ ವರದಿ ತಿಳಿಸುತ್ತದೆ. ಅವರು ಶ್ರೀದುರ್ಗೆಯ ಉಪಾಸಕರು ವಿಶೇಷವಾಗಿ ವಿವಾಹದ ನಂತರ ದೇಶಸ್ಥ ಬ್ರಾಹ್ಮಣರ ಮನೆಗಳಲ್ಲಿ ಅಥವಾ ಬೇರೆ ಸಂದರ್ಭಗಳಲ್ಲಿ ಹರಕೆ ತೀರಿಸಲು ಗೊಂದಲ ಅಥವಾ ದೀವಟಿಗೆ ನೃತ್ಯವನ್ನು ಶ್ರೀ ಅಂಬಾಭವಾನಿಯ ಗೌರವಾರ್ಥವಾಗಿ ಮಾಡುವುದು ಇವರ ವೃತ್ತಿ. ಗೊಂದಲಿಗರು ಬಾಂಬೆ ಪ್ರೆಸಿಡೆನ್ಸಿಯಿಂದ ಬಂದ ಮರಾಠ ಮೂಲದವರು. ಅವರು ಕೊಲಬಾ, ಸತಾರ ಖಾಂದೇಶ ಹಾಗೂ ಕೊಲ್ಲಾಪೂರ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುವರು. ದೇವರ ಹರಕೆ ಮಕ್ಕಳಂತಿರುವ ಗೊಂದಲಿಗರದು ಧಾರ್ಮಿಕ ಭಿಕ್ಷುಕರ ಒಂದು ವರ್ಗ. ಮೈಸೂರ ರಾಜ್ಯದ ಎಲ್ಲಾ ಭಾಗಗಲ್ಲಿ ಸಣ್ಣ ಸಣ್ಣ ಪ್ರಮಾಣದಲ್ಲಿ ಕಂಡು ಬರುತ್ತಾರೆ.

ತಮ್ಮ ಮೂಲ ನಿವಾಸವಾದ ಮಾಹುರ ಮತ್ತು ತುಳಜಾಪೂರ ನಿಜಾಮರ ಗಡಿಯಿಂದ ದಕ್ಷಿಣಕ್ಕೆ ೨ರಿಂದ ೩ ಶತಮಾನಗಳ ಮೊದಲು ಬಂದ, ಜಮದಗ್ನಿ ಆತನ ಪತ್ನಿ ರೇಣುಕೆ ಇವರೇ ನಮ್ಮ ಸಮುದಾಯದ ಸೃಷ್ಟಿಕರ್ತರು ಎಂಬ ಪರಿಕಲ್ಪನೆ ಇವರಲ್ಲಿದೆ. ಇವರು ನಾವು ಅಂಬಾ ಭವಾನಿಯ ಆರಾಧಕರೆಂದು ಹೇಳಿ ಕೊಳ್ಳುತ್ತಾರೆ ಮತ್ತು ಭವಾನಿ ಕವಡೆಗಳೆಂದು ತಿಳಿದ ಹಳದಿ ಕವಡೆಗಳ ಮಾಲೆಯನ್ನು ಕೊರಳ ಸುತ್ತ ಧರಿಸುತ್ತಾರೆ. ದೇವಿಯ ಆರಾಧಕರಾದ ಅವರು ಕೆಳವರ್ಗ ಹಿಂದೂಗಳಲ್ಲಿ ಬಹಳ ಪ್ರಭಾವಿ ಹಾಗೂ ಜನಪ್ರಿಯತೆಯನ್ನು ಹೊಂದಿರುತ್ತಾರೆ. ೭ನೇ ಶತಮಾನದ ಪ್ರಾರಂಭದಿಂದ ಅಂಬಾ ಭವಾನಿಯ ಆರಾಧನೆ ಡೆಕ್ಕನ್ನಿನ ಉದ್ದಗಲ್ಲಕ್ಕೂ ವ್ಯಾಪಿಸಿತ್ತು. ದೇವಿಯ ಆರಾಧನೆಯು ಪ್ರತಿ ಮರಾಠರಲ್ಲಿಯೂ ಪ್ರತಿಧ್ವನಿಸುತ್ತಿತ್ತು ಮತ್ತು ಬಹಳ ಗೌರವಿಸಲ್ಪಡುವ ಗೊಂದಲಿಗರು ತಮ್ಮ ಹಾಡುಗಳಿಂದ ಜನಪ್ರಿಯರಾಗಿದ್ದರು. ಮುಸಲ್ಮಾನರ ಶೋಷಣೆಯಿಂದ ಜರ್ಜರಿತರಾಗಿದ್ದ ಹಿಂದುಗಳು ಆ ವಿದೇಶಿ ಶೋಷಕರಿಂದ ರಕ್ಷಿಸಲು ದೇವಿ ಸಹಾಯಕ್ಕಾಗಿ ಪ್ರಾರ್ಥಿಸುತ್ತಿದ್ದರು ಮತ್ತು ಆರಾಧಕರ ಕೋರಿಕೆಯನ್ನು ಅವಳು ಈಡೇರಿಸಿದ್ದಳು. ಕೆಲವರ ಕನಸಿನಲ್ಲಿ ಕಂಡ ದೇವಿ ಇತರರ ಸಂಕಷ್ಟದಲ್ಲಿ ಸಹಾಯ ಮಾಡಿದಳು ಹಾಗೂ ಕೇವಲ ಕೆಲವರಿಗೆ ಗುಪ್ತ ಸಂಪತ್ತನ್ನು ತೋರಿದಳು ಎಂಬ ಕಲ್ಪನೆ ಇವರಲ್ಲಿದೆ.

ಗೊಂದಲಿ ನೃತ್ಯ ಮಾಡುವಾಗ ಅಂಬಾಭವಾನಿ ದೇವಿ ಗೊಂದಲಿಗರ ಮೈ-ಮನಸ್ಸಿನಲ್ಲಿ ಸೇರಿಕೊಂಡು ಭೂತ-ಭವಿಷ್ಯದ ಘಟನೆಗಳ ಬಗ್ಗೆ ಭವಿಷ್ಯ ನುಡಿಯುವಂತೆ ಮಾಡಿ ಪವಾಡ ಮೆರೆದವಳು. ಆ ಕಾಲದಲ್ಲಿ ಮರಾಠಿ ಧಾರ್ಮಿಕ ಕವಿಗಳಾಗಿದ್ದ ವಾಮನ ಪಂಡಿತ ಮತ್ತು ಶ್ರೀಧರರು ಹಾಡುಗಳನ್ನು ರಚಿಸಿದ್ದರು. ಅವು ಕೆಲ ಜನರಿಗೆ ಮಾತ್ರ, ಗೊಂದಲಿ ಹಾಡುಗಳು ಬೇರೆ ಬಗೆಯಾಗಿದ್ದು ಬಹು ಜನರಿಗೆ ಅರ್ಥವಾಗುತ್ತಿದ್ದರಿಂದ ಬಹಳ ಜನರ ಆಕರ್ಷಣೆಯಾಗಿದ್ದವು. ಜನರ ಮನ ಮುಟ್ಟಿ ಅಭಿಮಾನವನ್ನು ತಟ್ಟಿದ್ದು ಹಾಗೂ ಪಶ್ಚಿಮ ಘಟ್ಟಗಳಲ್ಲಿನ ಅನಕ್ಷರಸ್ಥರಲ್ಲಿ ದೇಶಭಿಮಾನವನ್ನು ಎಬ್ಬಿಸಿ ದಂಗೆ ಎಳುವಂತೆ ಮಾಡಿದವು".

* ಆರ್.ಇ. ಎಂಥೋವನ್ ಅವರು – "The Tribes and Castes of Bombay" ಎಂಬ ಗ್ರಂಥದಲ್ಲಿ- ಗೊಂದಲಿಗರು ಮರಾಠಿ ಮೂಲದವರು. ತುಳಜಾಪುರದ ಅಂಬಾ ಭವಾನಿಯ ಆರಾಧಕರಾದ ಇವರು ಗೊಂದಳ, ಗೊಂದಲ ಎನ್ನುವ ವಿಶಿಷ್ಟ ಆರಾಧನಾ ವಿಧಾನವನ್ನು ಆಚರಿಸುತ್ತಿರುವ ಗೊಂದಲ ಹಾಕುವಾಗ ನೃತ್ಯ ಮಾಡುವ ಜನ ಸಮೂಹ ಎಂಬ ವಿವರಣೆಯನ್ನು ಕೊಟ್ಟಿದ್ದಾರೆ.

* ಸುಪ್ರಸಿದ್ಧ ಮರಾಠಿ ಜಾನಪದ ಇತಿಹಾಸತಜ್ಞ ಡಾ. ರಾಮಚಂದ್ರ ದೇಖಣೆ ಹೇಳಿರುವಂತೆ- "ಗೊಂದಲ ಮಹಾರಾಷ್ಟ್ರದ ಧರ್ಮವಾಗಿದೆ. ಗೊಂದಲಿಗರು ಈ ಧರ್ಮದ ಪುರೋಹಿತರೆಂದು ಪರಿಗಣಿಸಲ್ಪಡುತ್ತಾರೆ. ಅಂಬಾ ಭವಾನಿಯು ಸ್ಫೂರ್ತಿ ದೇವತೆಯೆಂದೂ, ಕುಲಸ್ವಾಮಿನಿಯೆಂದೂ ಅವರ ನಂಬುಗೆ. ಆಕೆಯ ಉಪಾಸಕರಾದ ಗೊಂದಲಿಗರು ಮರಾಠಿ ಸಂಸ್ಕೃತಿಯ ಮಹಾನ್ ವಾರಸುದಾರರೆಂದು ಗೌರವಿಸಲ್ಪಡುತ್ತಾರೆ".[೬]

ಈ ಎಲ್ಲ ಅಧ್ಯಯನಗಳ ಹಿನ್ನೆಲೆಯನ್ನು ಗಮನಿಸಿದಾಗ ಗೊಂದಲಿಗರು ಮಹಾರಾಷ್ಟ್ರದ ಮೂಲದವರು ಎನ್ನುವ ಅಭಿಪ್ರಾಯಗಳು ಕಂಡು ಬರುತ್ತವೆ. ಇದಕ್ಕೆ ವ್ಯತಿರಿಕ್ತವಾಗಿ ಗೊಂದಲಿ ನೃತ್ಯದ ಬಗ್ಗೆ ಕನ್ನಡದ ಪ್ರಾಚೀನ ಗ್ರಂಥಗಳಲ್ಲಿ ಇರುವ ವಿವರಣೆಯನ್ನು ನೋಡಿದರೆ ಗೊಂದಲಿಗರು ಕರ್ನಾಟಕ ಮೂಲದವರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಬೇಕಾಗುತ್ತದೆ.

"ಒಂದು ಕಾಲದಲ್ಲಿ ಮಹಾರಾಷ್ಟ್ರ-ಕರ್ನಾಟಕ ಸಾಂಸ್ಕೃತಿಕ ದೃಷ್ಟಿಯಿಂದ ಒಂದೇ ಆಗಿತ್ತು. ಭಾಷಾವಾರು ಪ್ರಾಂತದ ರಚನೆಯ ನಂತರ ಮಹಾರಾಷ್ಟ್ರ ಪ್ರತ್ಯೇಕ ರಾಜ್ಯವಾಗಿ ಪರಿಣಮಿಸಿತ್ತು. ಡಾ. ಶಂಭಾಜೋಶಿಯವರು ಹೇಳಿರುವಂತೆ ಕರ್ನಾಟಕ-ಮಹಾರಾಷ್ಟ್ರಗಳ ಸಂಬಂಧ ಕ್ರಿಸ್ತಪೂರ್ವದ್ದು. ಅಷ್ಟೇ ಏಕೆ ಕ್ರಿ.ಶ. ೧೩ನೇ ಶತಮಾನದವರೆಗೂ ಮಹಾರಾಷ್ಟ್ರವು ಕರ್ನಾಟಕದ ಲಾಲನೆಯಲ್ಲಿಯೇ ಬೆಳೆದಿದೆ. ಮಹಾರಾಷ್ಟ್ರದ ಮೇಲೆ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರೂ, ಶಿಲಾಹಾರರು ಮುಂತಾದ ಕರ್ನಾಟಕದ ದೊರೆಗಳು ಈ ಪ್ರದೇಶವನ್ನು ಆಳಿದ್ದಾರೆ. ಈ ಉಭಯ ರಾಜ್ಯಗಳನ್ನು ನಂತರ ಆಳಿದವರು ದೇವಗಿರಿಯ ಯಾದವರು. 'ತಾರಾತಂತ್ರ' ಎಂಬ ಗ್ರಂಥದಲ್ಲಿ ಮಹಾರಾಷ್ಟ್ರದ

ಹೆಸರನ್ನು ಕರ್ನಾಟಕವೆಂದು ಕರೆದು ಅವೆರಡು ಪ್ರದೇಶಗಳು ಒಂದೇ ದೇಶವೆಂದು ಹೇಳಲಾಗಿದೆ. ದಕ್ಷಿಣ ಮಹಾರಾಷ್ಟ್ರದಲ್ಲಿ ಇಂದಿನವರೆಗೂ ಅಲ್ಲಿ ಕನ್ನಡದ ಶಿಲಾಶಾಸನಗಳೇ ದೊರಕಿವೆ. ಅಲ್ಲಿ ಒಂದೂ ಮರಾಠಿ ಶಾಸನಗಳು ಸಿಕ್ಕಿಲ್ಲ ಎಂಬುದು ಗಮನಿಸಬೇಕಾಗುತ್ತದೆ. ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಗಾಢವಾದ ಸಂಬಂಧ ಅತ್ಯಂತ ವಿಶಿಷ್ಟವಾದುದು. ರಾಜಕೀಯವಾಗಿ, ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಕೊಡಕೊಳ್ಳುವಿಕೆಯು ಇಂದಿಗೂ ಮುಂದುವರೆದಿರುವುದನ್ನು ಕಂಡುಕೊಳ್ಳ ಬಹುದಾಗಿದೆ.

ಕ್ರಿ.ಶ. ೮೫೦ರಲ್ಲಿ ಕವಿರಾಜ ಮಾರ್ಗಕಾರನು ಅಂದಿನ ಕನ್ನಡ ನಾಡಿನ ವಿಸ್ತಾರವನ್ನು "ಕಾವೇರಿ ಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳು" ಎಂದು ಹೇಳಿದ್ದಾನೆ. ಹಿಂದೊಂದು ಕಾಲದಲ್ಲಿ ಕೊಲ್ಹಾಪೂರದ ಮಹಾಲಕ್ಷ್ಮೀ, ಮಾಹುರದ ರೇಣುಕಾ, ತುಳಜಾಪೂರದ ಅಂಬಾಭವಾನಿ ಮುಂತಾದ ಶಕ್ತಿ ಪೀಠಗಳು ಕನ್ನಡ ನಾಡಿನ ಪರಿಸರದಲ್ಲಿಯೇ ಗುರುತಿಸಿಕೊಂಡಿದ್ದವು. ರಾಜ್ಯದ ಭೌಗೋಳಿಕ ಗಡಿಗಳು ಬೇರೆ ಬೇರೆಯಾದ ನಂತರ ಈ ದೇವತೆಗಳು ಇಂದು ಮಹಾರಾಷ್ಟ್ರದಲ್ಲಿ ಉಳಿದಿವೆ. ಈಗಲೂ ಕರ್ನಾಟಕದ ಅನೇಕ ಭಕ್ತರು ಅಂಬಾಭವಾನಿ, ತುಳಜಾಭವಾನಿ, ಮಹಾಲಕ್ಷ್ಮೀ ದೇವಸ್ಥಾನಗಳಿಗೆ ಹೋಗಿ ಬರುವ ಪರಂಪರೆಯನ್ನು ಉಳಿಸಿಕೊಂಡಿದ್ದಾರೆ. ಮಹಾರಾಷ್ಟ್ರ-ಕರ್ನಾಟಕದ ಯಾವ ಯಾವ ಪ್ರದೇಶದಲ್ಲಿ ಶಕ್ತಿ ದೇವತೆಗಳ ಪೀಠಗಳಿವೆಯೋ ಅಲ್ಲಲ್ಲಿ ಗೊಂದಲಿಗರು ಇರುವುದು ಕಂಡು ಬರುತ್ತದೆ. ಹೀಗಾಗಿ ಗೊಂದಲಿಗರು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ಅಥವಾ ಕರ್ನಾಟಕದಿಂದ ಮಹಾರಾಷ್ಟ್ರಕ್ಕೆ ವಲಸೆ ಬಂದವರು ಎನ್ನುವದರ ಬಗ್ಗೆ ನಿರ್ಧಾರಗಳನ್ನು ತೆಗೆದುಕೊಳ್ಳುವುದು ಸೂಕ್ತ ವಾದುದಲ್ಲ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗೊಂದಲಿ ನೃತ್ಯದ ಬಗ್ಗೆ ಅನೇಕ ಪ್ರಾಚೀನ ಕವಿಗಳು ಉಲ್ಲೇಖಿ ಸಿದ್ದಾರೆ. ಗೌಂಡಲಿ ಅಥವಾ ಗೊಂದಲಿ ನೃತ್ಯ ಕರ್ನಾಟಕದಲ್ಲಿ ಹುಟ್ಟಿದೆ ಎಂಬ ಮಾತನ್ನು ಯಾದವರ ಕಾಲದ ಶಾಂಜ್ನಾ ದೇವ ಉಲ್ಲೇಖಿಸಿದ್ದಾನೆ. ಗೊಂದಲ ಶಬ್ದವನ್ನು ಕನ್ನಡದ ಆದಿಕವಿ ಪಂಪ, ರುದ್ರಭಟ್ಟ, ಅಭಿನವಪಂಪ ಮತ್ತು ಶರಣರು ಸಮೂಹಾರ್ಥದಲ್ಲಿ ಬಳಸಿದ್ದಾರೆ. ನಾಗಚಂದ್ರ ತನ್ನ ಮಲ್ಲಿನಾಥ ಪುರಾಣದಲ್ಲಿ 'ಕುಣಿಯುವ ಗೊಂದಲ' ಎಂಬ ಪದ ಬಳಸಿದ್ದಾನೆ.

ಕ್ರಿ ಶ. ೧೨೪೦ರಲ್ಲಿ 'ನೃತ್ಯರತ್ನಾವಳಿ' ಎಂಬ ನೃತ್ಯಶಾಸ್ತ್ರ ಗ್ರಂಥವನ್ನು ರಚಿಸಿದ ವಾರಂಗಲ್ಲದ ಕಾಕತೀಯ ಗಣಪತಿ ರಾಜನ ಗಜದಳಾಧಿಪತಿಯಾದ ಜಾಯಣನು ಕಲ್ಯಾಣಿಯ ರಾಜ ಮುಮ್ಮಡಿ ಸೋಮೆಶ್ವರನು ತನ್ನ ರಾಜಧಾನಿಯಾದ ಕಲ್ಯಾಣದಲ್ಲಿ ಭೂತಮಾತೃ ಮಹೋತ್ಸವ ನಿಮಿತ್ಯವಾಗಿ ಗೊಂಡಲೀ ಎಂಬ ನೃತ್ಯದಲ್ಲಿ ಕೆಲವು ಸುಧಾರಣೆ ಮಾಡಿದನೆಂದು ಅದಕ್ಕೆ 'ಚಿತ್ರಗೊಂಡಲಿ' ಎಂಬ ಹೆಸರು ಕೊಟ್ಟನೆಂದು ತನ್ನ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ.

ಕ್ರಿ.ಶ. ೧೨ ಮತ್ತು ೧೩ನೇ ಶತಮಾನದಲ್ಲಿ ಪಾಲ್ಕುರಿಕೆ ಸೋಮನಾಥ ರಚಿಸಿದ ತೆಲಗು ಬಸವ ಪುರಾಣದಲ್ಲಿ ಬಸವಣ್ಣನ ಮದುವೆ ಸಂದರ್ಭದಲ್ಲಿ ಗೊಂಡ್ಲಿ/ಗೊಂದಲಿ ಪೂಜೆಯನ್ನು,

ಅದರಲ್ಲಿ ಗೊಂದಲಿಗರು ಪಾಲ್ಗೊಂಡಿರುವ ಬಗ್ಗೆ ಉಲ್ಲೇಖಿಸಿದ್ದಾನೆ." (ಈ ಮೇಲಿನ ಮಾಹಿತಿಗಳನ್ನು ಡಾ. ಗಂಗಾಧರ ದೈವಜ್ಞ ಅವರು ಗೊಂದಲಿಗರು ಎಂಬ ಗ್ರಂಥದಲ್ಲಿ ಡಾ. ನಿಂಗಣ್ಣ ಸಣ್ಣಕ್ಕಿ ಅವರು ಗೊಂದಲಿಗರು ಎಂಬ ಗ್ರಂಥಗಳಲ್ಲಿ ವಿವರಿಸಿದ್ದಾರೆ.)

ಕನ್ನಡ ಮತ್ತು ಮರಾಠಿಗಳೆರಡೂ ಬೇರೆ-ಬೇರೆ ಕುಟುಂಬಗಳಿಗೆ ಸೇರಿದ ಭಾಷೆಗಳು. ಕನ್ನಡ ದ್ರಾವಿಡ ವರ್ಗದ್ದಾದರೆ ಮರಾಠಿ ಆರ್ಯ ಭಾಷಾವರ್ಗದ್ದು. ಶಂ.ಬಾ ಜೋಶಿ ಅವರು ಮರಾಠಿ ಬೆಳೆದಿದ್ದು ಕನ್ನಡ ತಾಯಿ ಮೊಲೆ ಹಾಲು ಕುಡಿದು ಎಂದಿದ್ದಾರೆ. ಕ್ರಿಶ ಒಂಬತ್ತನೆಯ ಶತಮಾನದವರೆಗೆ ಮಹಾರಾಷ್ಟ್ರದ ಬಹುತೇಕ ಭಾಗದಲ್ಲಿ ಕನ್ನಡವೇ ಪ್ರಚಾರದಲ್ಲಿತ್ತೆಂಬುದನ್ನು ಮರೆಯುವಂತಿಲ್ಲ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕದವರೇ ಎಂದು ಹೇಳಬೇಕಾಗುತ್ತದೆ. ಒಟ್ಟಿನಲ್ಲಿ 'ಗೊಂದಲ' ಒಂದು ಪೂಜಾ ವಿಧಾನವಾಗಿ ಗೊಂದಲಿಗರು ವೃತ್ತಿಯಿಂದ ಬಂದ ಜನಾಂಗವಾಗಿ ಕನ್ನಡ ನೆಲೆದಲ್ಲಿ ಇದ್ದು, ಇಲ್ಲಿಂದ ಬೇರೆ ಕಡೆ ಅಲೆಮಾರಿಗಳಾಗಿ ಆಯಾ ಪ್ರದೇಶದ ಗೊಂದಲಿಗರಾಗಿ ಗುರುತಿಸಲ್ಪಟ್ಟಿದ್ದಾರೆ.

## ೨.೨ ಪೌರಾಣಿಕ ಹಾಗೂ ಸಾಹಿತ್ಯಿಕ ಹಿನ್ನೆಲೆ

ಪ್ರತಿಯೊಂದು ಸಮುದಾಯವು ತನ್ನ ಮೂಲ ನೆಲೆಯನ್ನು ಗುರುತಿಸಿಕೊಳ್ಳುವದಕ್ಕಾಗಿ ಅನೇಕ ರೀತಿಯ ಕಥೆ-ಪುರಾಣಗಳನ್ನು ಹೊಂದಿರುತ್ತದೆ. "ಪ್ರತಿಯೊಂದು ಸಮುದಾಯದಲ್ಲಿ ಇರುವ ಪುರಾಣಗಳಲ್ಲಿಯೂ ಆಯಾ ಸಮುದಾಯವನ್ನು ಪ್ರತಿಯೊಂದು ಹಂತದಲ್ಲಿಯೂ ರೂಪಿಸಿರುತ್ತದೆ. ನಂಬಿಕೆ, ಆಚಾರ-ವಿಚಾರ, ಸಂಪ್ರದಾಯಗಳಿಗೆ ಪುರಾಣ ಸಮರ್ಥನೆ ನೀಡುತ್ತದೆ. 'ಬುಡಕಟ್ಟು ಸಮುದಾಯಗಳಲ್ಲಿ ಪುರಾಣಗಳು ಎಲ್ಲಿಯವರಿಗೆ ಜೀವಂತ ವಾಗಿರುವುದೋ ಅಲ್ಲಿಯವರೆಗೆ ತನ್ನ ಸಮಾಜದ ಅಥವಾ ಬುಡಕಟ್ಟಿನ ಸಂಘಟನೆಯನ್ನು ಉಂಟುಮಾಡುತ್ತದೆ. ತನ್ನ ಸಮಾಜ ಅಥವಾ ಬುಡಕಟ್ಟಿನ ಜನರಲ್ಲಿ ಏಕತೆಯನ್ನು ಉಂಟುಮಾಡುತ್ತದೆ. ಈ ದೃಷ್ಟಿಯಿಂದ ಪುರಾಣ ಸಮಾಜದಲ್ಲಿ ಅಥವಾ ಬುಡಕಟ್ಟಿನಲ್ಲಿ ಸಕ್ರಿಯವಾದ ಪಾತ್ರ ವಹಿಸುತ್ತದೆ, ಜೀವಂತ ಶಕ್ತಿಯಾಗಿರುತ್ತದೆ. ಪುರಾಣಗಳು ಒಂದು ಸಮಾಜದ ಜನರಿಗೆ ಪರಮ ಪವಿತ್ರ ವಾದವುಗಳಾಗಿವೆ".[೬] ಪುರಾಣ ಎಂಬುದು ಕೇವಲ ಕಟ್ಟು ಕತೆಯಲ್ಲ ಕೀರ್ತನವಲ್ಲ. 'ಪುರಾಭವಂ ಪುರಾಣಂ' ಅಂದರೆ ಹಿಂದೆ ನಡೆದಿದ್ದು ಪುರಾಣ ಎನಿಸುತ್ತದೆ. ಪುರಾಣಗಳಲ್ಲಿ ನಡೆದಿರಬಹುದಾದ ಕಥೆಗಳ ವಿವರಣೆಯನ್ನು ಕಾಣುತ್ತೇವೆ. ಪುರಾಣಗಳು ಹೆಚ್ಚಾಗಿ ನಡೆದಿರುವ ಅಥವಾ ಕಾಲ್ಪನಿಕ ಕಥೆಗಳಿಂದ ಕೂಡಿದ್ದು ನೀತಿತತ್ವಗಳನ್ನು ಸಾರುತ್ತವೆ. ಪುರಾಣ ದಲ್ಲಿ ಭಗವಂತನು ಮಾನವನ ವಿಕಾಸದ ಹಾದಿಯಲ್ಲಿ ಹೇಗೆ ನೆರವಾಗಿರುತ್ತಾನೆ ಎಂಬ ವಿವರಣೆಯನ್ನು ಕಾಣುತ್ತೇವೆ.

ಈ ಕುರಿತು ಗಣಕ ಯಂತ್ರದಲ್ಲಿನ ವಿಕಿಪೀಡಿಯ ವಿಶ್ವ ಕೋಶದ ಪ್ರಾರಂಭಿಕ ವಿವರಣೆಯಲ್ಲಿ "ಪುರಾಣಗಳು ಯಾವುದೇ ಸಂಸ್ಕೃತಿ ಅಥವಾ ಧರ್ಮದಲ್ಲಿ ಅದಕ್ಕೆ ಸಂಬಂಧಿತ ದಂತಕತೆಗಳ ಸಮೂಹ. ಇವುಗಳು ಆಡುಭಾಷೆ ರೂಪದಲ್ಲಿ ಅಥವಾ ಲಿಖಿತ ರೂಪದಲ್ಲಿ ಸಾಂಪ್ರದಾಯಿಕವಾಗಿ ತಲೆಮಾರುಗಳಿಂದ ತಲೆಮಾರುಗಳಿಗೆ ವರ್ಗಾಯಿಸಲಾಗುತ್ತದೆ. ಅನೇಕ ಬಾರಿ ಇವುಗಳು ಆ ಸಂಸ್ಕೃತಿಯ ಅಥವಾ ಧರ್ಮದ ನಾಯಕರ ಅಥವಾ ದೇವತೆಗಳ ಅತಿಮಾನವ ಕಾರ್ಯಗಳನ್ನು ವರ್ಣಿಸುತ್ತವೆ".

ಈ ರೀತಿ ಪುರಾಣಗಳು ಅಲೌಕಿಕವಾದ, ಅತಿಮಾನುಷವಾದ ವ್ಯಕ್ತಿಗಳ ಸಾಹಸಮಯ ವಾದ ಬದುಕನ್ನು ನೈಸರ್ಗಿಕ ಘಟನೆಗಳ ಹಿನ್ನೆಲೆಯ ಮಾಹಿತಿಯನ್ನು ಒದಗಿಸುವುದರ ಜೊತೆಗೆ ಸಮಾಜದಲ್ಲಿ ಸ್ಥಾಪಿತವಾದ ಕಟ್ಟುಪಾಡುಗಳನ್ನು ಸ್ಥಿರಗೊಳಿಸಿ ನಂಬಿಕೆಗಳನ್ನು ಗಟ್ಟಿಗೊಳಿಸಿ ದೇವ-ದೇವತೆಗಳ ಆರಾಧನೆಯತ್ತ ಮಾನವರನ್ನು ಕೊಂಡೊಯ್ಯುವುದಾಗಿದೆ. ಸನ್ಮಾರ್ಗ-ಸನ್ನಢತೆಗಳನ್ನು ಸಮಾಜದಲ್ಲಿ ಬೆಳೆಸುವಲ್ಲಿ ಪುರಾಣಗಳು ಪ್ರಭಾವಿತವಾಗಿವೆ. ಈ ಪುರಾಣಗಳು ಒಂದೊಂದು ಸಮುದಾಯದಲ್ಲಿ ಒಂದೊಂದು ರೀತಿಯಲ್ಲಿ ಬಳಕೆಯಲ್ಲಿವೆ.

ಕರ್ನಾಟಕದ ಕಲಾವಿದರ ಸಮುದಾಯಗಳಲ್ಲಿ ಗೊಂದಲಿಗ ಸಮುದಾಯವು ಕೂಡಾ ಒಂದು. ಅಲೆಮಾರಿ ಗುಂಪಿಗೆ ಸೇರಿರುವ ಈ ಜನಾಂಗದ ಕುರಿತಾದ ಪೌರಾಣಿಕ ಹಿನ್ನೆಲೆಯಲ್ಲಿ ಹಲವಾರು ಕಥೆಗಳು ಪ್ರಚಲಿತವಿದ್ದು ಆ ಮೂಲಕ ಅವರು ಕುರಿತಾದ ಮಾಹಿತಿಯನ್ನು ಪಡೆಯಬಹುದಾಗಿದೆ.

"ಭೂಮಿ ಹುಟ್ಟುವ ಪೂರ್ವದಲ್ಲಿ ಇಡೀ ಜಗತ್ತೇ ನೀರಿನಿಂದ ತುಂಬಿ ಸೂರ್ಯದೇವನೆ ಮೊದಲಿಗೆ ಹುಟ್ಟಿದನು. ಸೂರ್ಯನು ತನ್ನ ತಮ್ಮ ಚಂದ್ರನ ಹುಟ್ಟಿಗೆ ಕಾರಣನಾಗುತ್ತಾನೆ. ಸೂರ್ಯ-ಚಂದ್ರರು ಸೇರಿ ಭೂಮಿ ಸೃಷ್ಟಿಸಿದರು. ಭೂಮಿ ಹುಟ್ಟಿದಾಗ ನೀರೇ ನಿರಂಕಾರವಾಗಿತ್ತು. ನೀರೇ ನಿರಂಕರವಾದ ಈ ಭೂಮಿ ಕಾಯಲು ಒಡೆಯನೊಬ್ಬ ಬೇಕೆಂದು ಯೋಚಿಸಿದ ಸೂರ್ಯ-ಚಂದ್ರರು ಜಮದಗ್ನಿಯನ್ನು ಕಳಿಸಿದರು. ಜಮದಗ್ನಿ ಭೂಮಿಗೆ ಒಡೆಯನೇನೋ ಆದನು. ಆದರೆ ಈ ಭೂಮಿಯ ಮೇಲೆ ಇರಲು ಸ್ಥಳವೆ ಇರಲಿಲ್ಲ. ಇದರಿಂದ ಸ್ವಾಮಿ ನಾನೆಲ್ಲಿ ಇರುವದು ಎಂದು ಶಿವನಿಗೆ ಕೇಳಿದಾಗ ಶಿವನು ನೀರನ್ನು ಸರಿಸಿ ನೆಲ ಕಾಣುವಂತೆ ಮಾಡಿದನು. ನೆಲದಲ್ಲಿ ಬಂದು ಉಳಿದ ಜಮದಗ್ನಿಗೆ ಜೊತೆಗೆ ಸಂಗಾತಿ ಬೇಕೆಂದು ಕೇಳಿದಾಗ ಪಾರ್ವತಿಯನ್ನು ಕೇಳಿ ರೇಣುಕೆಯನ್ನು ಭೂಮಿಗೆ ಕಳಿಸುತ್ತಾನೆ. ಈರ್ವರು ಸೇರಿ ಸೃಷ್ಟಿ ಕಾರ್ಯದಲ್ಲಿ ತೊಡಗುತ್ತಾರೆ. ಹೀಗೆ ಸೃಷ್ಟಿ ಕಾರ್ಯದಲ್ಲಿ ತೊಡಗಿದಾಗ ನೂರಾ ಒಂದು ಮಕ್ಕಳು ಹುಟ್ಟುತ್ತವೆ. ಮೊದಲು ಹುಟ್ಟಿದವನೇ ಗೊಂದಲಿಗ ಇವನಿಗೆ ಇನ್ನುಳಿದ ನೂರು ಮಕ್ಕಳನ್ನು ಕಾಪಾಡುವ ಹೊಣೆಯನ್ನು ಜಮದಗ್ನಿ ರೇಣುಕೆಯರು ವಹಿಸುತ್ತಾರೆ. ಅವರನ್ನು ರಮಿಸಿ ಸುಮ್ಮನಿರಿಸುವುದೇ ಗೊಂದಲಿಗನಿಗೆ ಸಾಧ್ಯವಾಗುವುದಿಲ್ಲ. ಆಗ ತಮ್ಮಂದಿರನ್ನು ಸುಮ್ಮನಿರಿಸಲು ಹಾಡು ಕುಣಿತಗಳಲ್ಲಿ ತೊಡಗುತ್ತಾನೆ. ಈ ಹಾಡು ಕುಣಿತಗಳೆ ಮುಂದೆ ಗೊಂದಲಿಗರ ಹಾಡು ಕುಣಿತಗಳಾದವು".[೮]

ಸಮರ್ಥ ರಾಮದಾಸರ ಶಿಷ್ಯರಾದ ದಿನಕರ ಸ್ವಾಮಿಯು 'ಸ್ವಾನುಭವ ದಿನಕರ' ಎಂಬ ಮರಾಠಿ ಪುಸ್ತಕದಲ್ಲಿ ಗೊಂದಲಿಗರ ಸಮುದಾಯದಲ್ಲಿ ಗೊಂದಲದ ಸೃಷ್ಟಿ ಕುರಿತಾದ 'ರೇಣುಕಾ ಮಹಾತ್ಮೆ' ಯಲ್ಲಿರುವ ಗೊಂದಲದ ಪುರಾಣ ಕಥೆ ಹೀಗಿದೆ- "ಸವದತ್ತಿಯ ಯಲ್ಲಮ್ಮ/ರೇಣುಕಾದೇವಿಯ ಮಗನಾದ ಪರಶುರಾಮನು ಆ ಪರಿಸರದಲ್ಲಿದ್ದ ಬೆಟ್ಟಾಸುರ ಎಂಬ ರಾಕ್ಷಸನನ್ನು ಸಂಹರಿಸಿ ಅವನ ತಲೆಯನ್ನು ಕತ್ತರಿಸಿದ. ಆಗ ಆ ದೈತ್ಯನ ಶಿರದ ಬ್ರಹ್ಮರಂಧ್ರದಿಂದ ತಂತುವೊಂದು ಹೊರಬರುತ್ತದೆ. ಆ ದೈತ್ಯನ ದೇಹವನ್ನೇ ಚೌಡಕಿಯನ್ನು ಮಾಡಿ, ಆ ತಂತುವನ್ನು ಮಿಡಿದಾಗ ಅದರಿಂದ 'ತಿಂತ್ರಣ

ತಿಂತೃಣ' ಎಂಬ ನಾದ ಹೊರಡುತ್ತದೆ. ಪರುಶುರಾಮ ಚೌಡಕಿಯನ್ನು ನುಡಿಸುತ್ತಾ, ತಾಯಿಯ ಹತ್ತಿರ ಬಂದು ಅವಳಿಗೆ ನಮಸ್ಕರಿಸುತ್ತಾನೆ. ಪರುಶುರಾಮ ಆ ತೃಣ ತೃಣ ನಾದ ಮಾಡುತ್ತಾ ಉಧೋ ಉಧೋ ಎಂಬ ನಾದಘೋಷ ಮಾಡುತ್ತಾ ಆನಂದಮಯನಾಗಿ ಗೊಂದಲ ರೂಪದಿಂದ ಸ್ತುತಿಸಿದ ವಾಕ್ಯವೇ ಗೊಂದಳವು. ಇಲ್ಲಿಂದಲೇ ಗೊಂದಲ, ಗೊಂದಲಿಗರು ಹುಟ್ಟಿದರೆಂದು ಹೇಳುತ್ತಾರೆ. ಜಮದಗ್ನಿ ಋಷಿ ಅವನ ಪತ್ನಿ ರೇಣುಕಾದೇವಿ ನಮ್ಮ ಜಾತಿಯನ್ನು ಸೃಷ್ಟಿಸಿದರೆಂದು ಹೇಳಿಕೊಳ್ಳುತ್ತಾರೆ".[೯]

ಗೊಂದಲಿಗರಲ್ಲಿ ಕೆಲವರು ತಮ್ಮ ಉಪಜೀವನಕ್ಕಾಗಿ ಆರಿಸಿಕೊಂಡ ವೃತ್ತಿಯಲ್ಲಿ ಪ್ರಮುಖವಾದ ವಾದ್ಯ ಬುಡಬುಡಕೆ. ಡಾ. ನಿಂಗಣ್ಣ ಸಣ್ಣಕ್ಕಿಯವರು 'ಗೊಂದಲಿಗರ ಸಂಸ್ಕೃತಿ' ಡಾ. ಗಂಗಾಧರ ದೈವಜ್ಞ ಅವರ 'ಗೊಂದಲಿಗರು' ಎಂಬ ಕೃತಿಗಳಲ್ಲಿ ಈ ಕುರಿತಾದ ಹಾಗೂ ಗೊಂದಲಿಗ, ಗೊಂದಳದ ಸೃಷ್ಟಿಯ ಕುರಿತು ಇರುವ ಪುರಾಣ, ದಂತಕಥೆಗಳನ್ನು ಹೀಗೆ ವಿವರಿಸುತ್ತಾರೆ.

೧. "ಬುಡಬುಡಕೆ ವಾದ್ಯ ಇದು ಶಿವನ ಕೈಯಲ್ಲಿ ಇರುವ ಪವಿತ್ರವಾದ ವಾದ್ಯ. ಈ ವಾದ್ಯ ಸೃಷ್ಟಿಯಾಗಲು ಶ್ರೀಕೃಷ್ಣನೇ ಕಾರಣ. ಒಂದು ಕಾಲದಲ್ಲಿ ತಾರಕಾಸುರ, ಮಕಾಸುರ ಮತ್ತು ಯುದ್ಧ ಮಾರಿ ಎಂಬ ರಾಕ್ಷಸರು ದೇವ-ದೇವತೆಗಳಿಗೆ, ಋಷಿಗಳಿಗೆ, ಮಾನವರಿಗೆ ಅನೇಕ ತೊಂದರೆಗಳನ್ನು ಕೊಡುತ್ತಿದ್ದರು. ಆ ಮೂರು ಜನ ರಾಕ್ಷಸರನ್ನು ಕೊಲ್ಲುವ ಸಲುವಾಗಿ ಶ್ರೀಕೃಷ್ಣ ಪರಮಾತ್ಮನೆ ನೀನೇ ಒಂದು ಉಪಾಯ ಹೂಡಬೇಕೆಂದು ದೇವತೆಗಳು ಕೇಳಿಕೊಳ್ಳುತ್ತಾರೆ. ಆಗ ಶ್ರೀಕೃಷ್ಣನು ಆ ರಾಕ್ಷಸ ರನ್ನು ಸಂಹರಿಸುವದಕ್ಕಾಗಿ ಮೊದಲು ಶಿವನ ಕೈಯಲ್ಲಿ ಇರುವ ಢಮರುಗವನ್ನು ಸಣ್ಣ ವಾದ್ಯವಾಗಿ ರಮ್ಯವಾದ ನಿನಾದವು ಹೊರಡುವಂತೆ ಮಾಡಬೇಕಾಗಿತ್ತಂತೆ. ಆ ರಮ್ಯ ನಿನಾದ ಬುಡು ಬುಡು ಬುಡು ಎಂಬುದಾಗಿ ಶಬ್ದ ಬಂದುದರಿಂದ ಈ ವಾದ್ಯಕ್ಕೆ ಬುಡಬುಡಕೆ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ. ಈ ನಾದದಿಂದಲೆ ನಾವು ಮನುಷ್ಯ ಜೀವನದಲ್ಲಿ ಆಗುಹೋಗುಗಳನ್ನು ಅರಿತುಕೊಂಡು, ಭವಿಷ್ಯ ಹೇಳುತ್ತೇವೆಂದು ಕತೆ ಹೇಳುತ್ತಾರೆ"[೧೦] (ಗಂಗಾಧರ ದೈವಜ್ಞ ಪು-೨೫)

೨. "ಗೊಂದಲಿಗರು ತಾವು ಮಚ್ಚಗಂದಿನಿ ಸಂಜಾತರೆಂದು ಹೇಳಿಕೊಳ್ಳುತ್ತಾರೆ. ಕಾರ್ತಿವೀರ ಅರ್ಜುನನು ಕಾಮಧೇನುವನ್ನು ಬಂಧಿಸಿದಾಗ ಕಾಮಧೇನುವಿನ ಗೋಮೂತ್ರದಿಂದ ಉದ್ಭವಿಸಿದ ದ್ರಾವಿಡರೆಂದು ಹೇಳಲಾಗುತ್ತದೆ. ಆ ದ್ರಾವಿಡರು ಕಾರ್ತಿವೀರಾರ್ಜುನನ ಸಂಹಾರ ಕಾಲದಲ್ಲಿ ನೆರವಾದ ರೆಂದೂ ಬೆಟ್ಟಾಸುರನನ್ನು ಸಂಹರಿಸಿದಾಗ ಆತನ ತಲೆ ಒಡೆದು ಚೌಡಿಕೆಯನ್ನು ಮಾಡಿ ಶ್ರೀದೇವಿಯ ಸುತ್ತಿ ಮಾಡುತ್ತಾ ರೇಣುಕಾಗಿರಿಯಲ್ಲಿ ಉಧೋ ಉಧೋ ಎಂಬ ಉಗ್ಗಡಸಿ ಗೊಂದಲ ಹಾಕಿದಾಗ ಗೊಂದಲಿಗರೆಂದು 'ಗೊಂದಲಿ' ಎಂದು ಕರೆಯಲಾಗಿದೆ".[೧೧] (ನಿಂಗಣ್ಣ ಸಣ್ಣಕ್ಕಿ ಪು-೯೨)

೩. ಒಮ್ಮೆ ಪಾರ್ವತಿ ಪರಮೇಶ್ವರರು ಆನಂದಮಯುವಾಗಿ ಕುಳಿತಾಗ ತಮ್ಮ ಭಕ್ತರಿಗೆ ವರ ಗಳನ್ನು ನೀಡುತ್ತಾ ಇದ್ದರಂತೆ. ಬಂದಂತಹ ಬಡವರಿಗೆ ಅವರು ಬೇಡಿದ್ದನ್ನು ದಾನ ಮಾಡಿದರು. ಕೊನೆಗೆ ಇವರ ಕೈಯಲ್ಲಿ ಇದ್ದುದೆಲ್ಲ ಮುಗಿದಾಗ ಬುಡಬುಡಕೆ ಜನಾಂಗದವರು ಬಂದು ಪಾರ್ವತಿ ಪರಮೇಶ್ವರನ್ನು ಬೇಡಿದರು. ಆಗ ಪಾರ್ವತಿಯು ಅವರನ್ನು ಬರಿಗೈಯಲ್ಲಿ ಕಳುಹಿಸಲು ಇಷ್ಟವಾಗದೆ,

ಶಿವನ ಕೈಯಲ್ಲಿದ್ದ ಡಮರುಗವನ್ನೇ ಅವರಿಗೆ ದಾನವಾಗಿ ಕೊಟ್ಟು, ಇದರಿಂದಲೇ ನಿಮ್ಮ ಉಪಜೀವನದ ಮಾರ್ಗ ಕೊಂಡುಕೊಳ್ಳಿ ಎಂದು ಹರಿಸಿದಳಂತೆ".[೨] (ಗಂಗಾಧರ ದೈವಜ್ಞ ಪು-೨೫)

೪. ಮೂರು ಮಂದಿ ಅಣ್ಣ ತಮ್ಮಂದಿರು ವಿಧ್ವಂಸಕ ಶಕ್ತಿಯಲ್ಲಿ ಎಲ್ಲರನ್ನೂ ಮೀರಿಸಿದ್ದರು. ಆ ಧರ್ಪದಿಂದ ಎಲ್ಲರನ್ನೂ ಹಿಂಸಿಸಿ ಪೀಡಿಸುತ್ತಿದ್ದರು. ನರರೂ-ಸುರರು ಇವರ ಹಾವಳಿಯಿಂದ ಕಂಗಾಲಾಗಿದ್ದರು. ಇಷ್ಟು ಸಾಲದುದ್ದಕ್ಕೆ ಇವರ ಶಕ್ತಿ ಎಷ್ಟು ಪ್ರಬಲವಾಗಿತ್ತೆಂದರೆ, ಇವರು ದೇವ ದೇವತೆಗಳನ್ನು ಕಾಡಿಸಿ ಪೀಡಿಸುತ್ತಿದ್ದರು. ಈ ಉಪದ್ರವದಿಂದ ಪರಿಹಾರವನ್ನು ಹುಡುಕುತ್ತಿದ್ದಾಗ, ನಾರದನು ಒಂದು ಸಲಹೆ ಕೊಟ್ಟನಂತೆ, ಇದನ್ನು ತಡೆಯಬೇಕಾದರೆ ಕೃಷ್ಣನೊಬ್ಬನಿಂದಲೇ ಸಾಧ್ಯ, ಎಂದು ಸೂಚಿಸಿದನಂತೆ, ಆಗ ದೇವ-ದೇವತೆಗಳೆಲ್ಲಾ ಕೃಷ್ಣನ ಮೊರೆಹೊಕ್ಕರು. ಇವರ ರಕ್ಷಣೆಗಾಗಿ ಶ್ರೀಕೃಷ್ಣನು ಬುಡಬುಡಕೆಯ ವೇಷವನ್ನು ಧರಿಸಿಕೊಂಡು, ಬುಡಬುಡಕೆಯನ್ನು ಬಾರಿಸುತ್ತಾ ಬಂದು ಈ ಕಂಟಕಿಗಳಾದ ದೈತ್ಯರ ಪತ್ನಿಯರಿಗೆ ಅವರ ಬಂಜೆತನವನ್ನು ನಿವಾರಿಸುವ ದಾರಿಯನ್ನು ಮತ್ತು ಅವರ ಭವಿಷ್ಯವನ್ನು ಹೇಳಿದನಂತೆ. ಆತನ ಸಲಹೆ ಪ್ರಕಾರ ನಡೆದಾಗ ಅವರ ಪಾತಿವ್ರತ್ಯ ಕೆಟ್ಟು ಹೋಯಿತು. ಅವರ ಗಂಡಂದಿರ ಶಕ್ತಿ-ಬಲಗಳೆಲ್ಲಾ ಇವರ ಪಾತಿವ್ರತ್ಯದ ಮೇಲೆ ಅವಲಂಭಿಸಿದ್ದರಿಂದ ಇವರ ಪಾತಿವ್ರತ್ಯ ನಾಶವಾದಂತೆಯೇ, ಅವರ ಬಲವೂ ಉಡಗಿಹೋಯಿತು. ಆಮೇಲೆ ಶ್ರೀಕೃಷ್ಣನು ಅವರನ್ನು ಸುಲಭವಾಗಿ ಧ್ವಂಸ ಮಾಡಿ ಜಯ ಸಾಧಿಸಿ ಹಿಂದುರುಗುತ್ತಿದ್ದಾಗ ದಾರಿಯಲ್ಲಿ ಆತನಿಗೆ ಈ ಜನಾಂಗದವರು ಎದುರಾದರು, ಅಷ್ಟೇ ಅಲ್ಲದೇ ಆತನ ಕೈಯಲ್ಲಿದ್ದ ಆ ಪುಟ್ಟ ಢಮರುಗವನ್ನು ಬೇಡಿ ಪಡೆದರು. ಶ್ರೀಕೃಷ್ಣನು ಅವರಿಗೆ ಅದನ್ನು ನೀಡಿ ಇನ್ನು ಮುಂದೆ ತಾನು ಪ್ರಾರಂಭಿಸಿದ ಭವಿಷ್ಯ ಹೇಳುವ ವೃತ್ತಿಯನ್ನು ನಿರಂತರವಾಗಿ ಮುಂದುವರಿಸಿಕೊಂಡು ಹೋಗಬೇಕೆಂದು ಕಟ್ಟಪ್ಪಣೆ ಮಾಡಿದನಂತೆ. ಅಂದಿನಿಂದ ಇವರು ತಮ್ಮ ಉಪಜೀವನಕ್ಕಾಗಿ ಹಕ್ಕಿ ಶಕುನ ಹೇಳುವ ವೃತ್ತಿಯನ್ನು ನಡೆಸುತ್ತಾ ಬಂದಿದ್ದಾರೆ".[೧೩] (ಗಂಗಾಧರ ದೈವಜ್ಞ ಪು-೨೬-೨೭)

೫. "ಪ್ರಾಚೀನ ಕಾಲದಲ್ಲಿ ತಾರಾಕಾಸುರ, ಮಕಾರಾಸುರ ಮತ್ತು ಯುದ್ಧಮಾರಿ ಎಂಬ ರಾಕ್ಷಸ ಅಣ್ಣ ತಂಗಿಯರಿದ್ದರು. ಯುದ್ಧಮಾರಿ ತಂಗಿಯಾಗಿದ್ದು, ಅವಳು ಭೂಮಿಗೂ-ಆಕಾಶಕ್ಕೂ ನಡುವೆ ಹೆಬ್ಬಟ್ಟಿನ ಮೇಲೆ ಇವರ ಪಟ್ಟಣವನ್ನು ಹಿಡಿದುಕೊಂಡಿದ್ದಳು. ತಾರಾಕಾಸುರ ಹಾಗೂ ಮಕಾರಾಸುರರಿಗೆ ಮಾಲಿ ಮತ್ತು ಸುಮಾಲಿ ಎಂಬುವರು ಹೆಂಡತಿಯರು. ಇವರು ದೇವಾನುದೇವತೆಗಳನ್ನೆಲ್ಲಾ, ಬಂಧನದಲ್ಲಿಟ್ಟು ಮೆಟ್ಟಲುಗಳನ್ನಾಗಿ ಮಾಡಿಕೊಂಡಿದ್ದರು. ತ್ರಿಮೂರ್ತಿಗಳು ಮಾತ್ರ ಇವರ ಕೈಯಿಗೆ ಸಿಕ್ಕಿರಲಿಲ್ಲ. ಇವರಿಗೆ ಇಷ್ಟೊಂದು ಬಲ ಸಾಮರ್ಥ್ಯಗಳಿದ್ದುದು ಅವರ ಹೆಂಡತಿಯರ ಪತಿವ್ರತಾ ಬಲದಿಂದ. ಒಮ್ಮೆ ನಾರದನು ತ್ರಿಮೂರ್ತಿಗಳ ಹತ್ತಿರ ಬಂದು ರಾಕ್ಷಸರನ್ನು ಹೀಗೆ ಬೆಳೆಯಬಿಟ್ಟರೆ ದೇವತೆಗಳಿಗೆ ತುಂಬಾ ಕಷ್ಟವಾಗುತ್ತದೆ. ಎಲ್ಲಿ ನೋಡಿದರೂ ಅವರ ಹಾವಳಿಯೇ. ಏನಾದರು ಮಾಡಿ ನಾಶ ಮಾಡಲೇಬೇಕೆಂದು ಹೇಳಿದಾಗ ತ್ರಿಮೂರ್ತಿಗಳು ಅದಕ್ಕೊಂದು ಪರಿಹಾರವನ್ನು ಸೂಚಿಸುವಂತೆ ಆತನಿಗೆ ಹೇಳುತ್ತಾರೆ. ಅದಕ್ಕೆ ನಾರದ ಅವರ ಹೆಂಡತಿಯರ ಪತಿವ್ರತಾ ಧರ್ಮಕ್ಕೆ ಭಂಗ ತರುವಂತೆ

ಮಾಡಿದರೆ ರಾಕ್ಷಸರ ಶಕ್ತಿ ಕುಂದುತ್ತದೆ ಎಂದು ಹೇಳಿ, ಶ್ರೀಕೃಷ್ಣನಿಗೆ ನೀನು ಪಟ್ಟಣಕ್ಕೆ ಹೋಗು ಎಂದು ಹೇಳುತ್ತಾನೆ. ಪಟ್ಟಣದ ಮುಂಭಾಗದಲ್ಲಿ ಹೊತ್ತು ಹುಟ್ಟುವದಕ್ಕೆ ಮುಂಚೆ ಅಶ್ವತವೃಕ್ಷ ಹುಟ್ಟುತ್ತದೆ ಎಂದು, ಶಕುನ ನುಡಿಯಲು ಹೇಳುತ್ತಾನೆ. ಅದರಂತೆ ಕೃಷ್ಣ ಬುಡಬುಡಕಿ ವೇಷಧರಿಸಿ ರಾಕ್ಷಸರ ಪಟ್ಟಣಕ್ಕೆ ಹೋಗಿ ಶಕುನ ನುಡಿಯುತ್ತಾನೆ. ಇದನ್ನು ಕೇಳಿದ ಮಾಲಿ ಮತ್ತು ಸುಮಾಲಿಯರು ಶಕುನವನ್ನು ಪರೀಕ್ಷೆ ಮಾಡಲು ಅವನ ಹೇಳಿದಂತೆ ಬೆಳಗಾಗುವದರೊಳಗಾಗಿ ಬೆಳೆದು ನಿಂತಿದ್ದ ಅಶ್ವತ ವೃಕ್ಷವನ್ನು ಪ್ರದಕ್ಷಣೆ ಮಾಡಿ ತಬ್ಬಿಕೊಂಡಿದ್ದರಿಂದ ಪಾತಿವೃತ್ಯಕ್ಕೆ ಭಂಗ ಉಂಟಾಗಿ ರಾಕ್ಷಸರು ನಾಶವಾದರು. ಅವರನ್ನೆಲ್ಲಾ ಸಂಹರಿಸಿ ಕೃಷ್ಣ ಬುಡಬುಡಕೆಯ ವೇಷದಲ್ಲಿ ಬರುತ್ತಿದ್ದಾಗ ಒಬ್ಬ ವ್ಯಕ್ತಿ ಬಂದು 'ಸ್ವಾಮಿ ಬುಡಬುಡಕೆಯನ್ನು ನನಗೆ ಕೊಡಿ ನಿಮ್ಮ ಹೆಸರು ಹೇಳಿಕೊಂಡು ಜೀವನ ನಡೆಸುತ್ತೇನೆ' ಎಂದು ಕೇಳಿದಾಗ ಕೃಷ್ಣ ಅವನ ಇಷ್ಟದಂತೆ ವೇಷ-ಭೂಷಣವನ್ನೆಲ್ಲಾ ಕೊಟ್ಟು 'ನೀನು ಭೂಮಿಯಲ್ಲಿ ಸೂರ್ಯ-ಚಂದ್ರರಿರುವವರಿಗೂ ಈ ವೃತ್ತಿಯನ್ನು ಸಾಗಿಸು, ನಿನ್ನ ವಂಶದವರಿಗೆ ಬುಡಬುಡಕೆಯವರೆಂದು ಹೆಸರಾಗಲಿ, ಇದಕ್ಕೆ ನೀವು ತಪ್ಪಿದರೆ ನಿಮಗೆ ದರಿದ್ರಾಂಶ ಬರಲಿ' ಎಂದು ಹೇಳಿದ. ಹೀಗೆ ಶ್ರೀಕೃಷ್ಣನ ಕೊಡುಗೆಯಿಂದ ಬುಡಬುಡಕೆಯ ಪರಂಪರೆಯ ಬೆಳೆದು ಬಂದಿತು".[೧೪] (ಅದೇ. ಪು-೨೬)

ಈ ರೀತಿ ಬೆಳೆದು ಬಂದ ಪುರಾಣ ಕಥೆಗಳು ಗೊಂದಲಿಗ ಸಮುದಾಯದ ಪ್ರಾಚೀನ ದೈವಿ ಹಿನ್ನೆಲೆಯನ್ನು ಒದಗಿಸುವದರ ಜೊತೆಗೆ ಸಮುದಾಯವು ಅನುಸರಿಸುತ್ತಿರುವ ವೃತ್ತಿಯು ಬೆಳೆದು ಬಂದ ಬಗೆಯನ್ನು ವಿವರಿಸುತ್ತದೆ. ಗೊಂದಳಿ ಸಮುದಾಯವು ಕೂಡಾ ಇನ್ನಿತರ ಸಮುದಾಯಗಳ ಹಾಗೆ ಪೌರಾಣಿಕ ಹಿನ್ನೆಲೆಯನ್ನು ಹೊಂದಿದ್ದು, ಆ ನಂಬಿಕೆಯ ಮೇಲೆಯೇ ವೈವಿಧ್ಯಪೂರ್ಣವಾದ ಸಾಂಸ್ಕೃತಿಕ ಸಂಪತ್ತನ್ನು ಹಾಗೂ ಸಾಮಾಜಿಕ ಜೀವನವನ್ನು ಹುಟ್ಟು ಹಾಕಿರುವದನ್ನು, ಕಾಣುತ್ತೇವೆ.

### ೨.೩. ಗೊಂದಲಿಗರಲ್ಲಿರುವ ಪ್ರಚಲಿತ ಕಥೆಗಳು ಹಾಗೂ ನಂಬಿಕೆಗಳು

ಅಲೆಮಾರಿ-ಅರೆಅಲೆಮಾರಿ ಸಮುದಾಯಗಳಲ್ಲಿಯೇ ವಿಶಿಷ್ಟವಾಗಿ ಕಂಡುಬರುವ ಗೊಂದಲಿಗರಲ್ಲಿ ಉಪಪಂಗಡಗಳಿರುವದು ಕಂಡುಬರುತ್ತದೆ. ಕಥೋಪಜೀವಿಗಳು, ಭೂತೇಯರು, ಸಿಂಗದವರು, ಬುಡಬುಡಿಕೆಯರು, ವಾಸುದೇವರು, ಜ್ಯೋತಿಷಿಗಳು, ಭಾಟರು, ಚಿತ್ರಪಟದವರು ಮುಂತಾದ ವೃತ್ತಿ ಪಂಗಡದವರನ್ನು ಕಾಣುತ್ತೇವೆ. ವೃತ್ತಿಪಂಗಡಗಳು ಬೇರೆ-ಬೇರೆಯಾಗಿದ್ದರೂ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಲೇ ಬಂದಿದ್ದಾರೆ. ಈ ರೀತಿ ಸಮುದಾಯದಲ್ಲಿ ವಿಭಿನ್ನ ವೃತ್ತಿಯ ಅನುಸರಣೆ ಮತ್ತು ವೃತ್ತಿ ಪಂಗಡಗಳು ಬೆಳೆದು ಬರುವಲ್ಲಿ ಹಲವಾರು ಕಥೆಗಳು, ನಂಬಿಕೆಗಳು ಗೊಂದಲಿಗರಲ್ಲಿವೆ.

ಗೊಂದಲಿಗ ಸಮುದಾಯಕ್ಕೆ ಸಂಬಂಧಪಟ್ಟಂತೆ ಬೆಳೆದು ಬಂದ ಕಥೆಗಳ ಕುರಿತು ಸಮುದಾಯದ ಹಿರಿಯರನ್ನು ಸಂದರ್ಶಿಸಿದಾಗ ಹೇಳಿರುವ ಕಥೆಗಳನ್ನು ಹಾಗೂ ಕ್ಯಾತನಹಳ್ಳಿ ರಾಮಣ್ಣರವರ 'ಗೊಂದಲಿಗರು ಒಂದು ಅಧ್ಯಯನ' ಎಂಬ ಗ್ರಂಥಗಳಲ್ಲಿ ಪ್ರಸ್ತಾಪಿಸಲ್ಪಟ್ಟ ವಿವರಣೆಗಳು ಈ ಸಮುದಾಯ ದವರು ಗುಪ್ತಚಾರಿಕೆ ವೃತ್ತಿಯಲ್ಲಿ ತೊಡಗಿರುವ ಬಗ್ಗೆ ಹಾಗೂ ಅಲೆಮಾರಿಗಳಾಗಿ ವಿವಿಧ ಭಾಗಗಳಲ್ಲಿ ಹರಡಿಕೊಂಡಿರುವ ಬಗ್ಗೆ ಮಾಹಿತಿಯನ್ನು ಕೊಡುತ್ತವೆ.

"ಮಹಾರಾಷ್ಟ್ರದಲ್ಲಿ ಸುಮಾರು ೩೦೦ ವರ್ಷಗಳ ಹಿಂದೆ ಶಿವಾಜಿಯು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಬಿಜಾಪೂರ ಮೊಘಲರ ರಾಜ್ಯವಾಗಿತ್ತು. ಅಕ್ಕಪಕ್ಕದ ಈ ಆಳ್ವಿಕೆಯಲ್ಲಿ ಆಗಾಗ ಸಣ್ಣ-ಪುಟ್ಟ ಕಲಹಗಳು ತಲೆದೋರುತ್ತಿದ್ದುದರಿಂದಲೂ ಆ ರಾಜ್ಯವನ್ನು ಕಸಿದುಕೊಳ್ಳಲು ಎರಡೂ ಕಡೆಯಿಂದಲೂ ಹೊಂಚುಗಳು ನಡೆಯುತ್ತಿದ್ದರಿಂದಲೂ, ಎರಡು ರಾಜ್ಯಗಳಲ್ಲಿಯೂ ಗೂಢಚಾರರ ಸಂಚಾರ ಇದ್ದೇ ಇರುತ್ತಿತ್ತು. ಗೊಂದಲಿಗರು ಶಿವಾಜಿಯ ಗೂಢಚಾರರಾಗಿ ಭಿಕ್ಷುಕರ ವೇಷಧರಿಸಿ ಮೊಘಲರ ರಾಜ್ಯಕ್ಕೆ ಬರುತ್ತಾರೆ. ಮಹಾರಾಷ್ಟ್ರದಲ್ಲಿ ಗೂಢಚಾರರ ವೃತ್ತಿ ಮಾಡುತ್ತಿದ್ದ ಗೊಂದಲಿಗರಿಗಾಗಿಯೇ ಶಿವಾಜಿ ಮಹಾರಾಜ ಭೂಮಿಯನ್ನು ನೀಡಿದ್ದರೂ ಸ್ವತಃ ಗೂಢಚಾರರು ಸಹಜವಾಗಿ ಅನುಭವಿಸಲಾಗದೇ ಅವರನ್ನು ನಂಬಿದ ಮಂದಿ ಮಾತ್ರ ಅನುಭವಿಸುತ್ತಿದ್ದರು. ಇಲ್ಲಿ ಇವರು ತಮ್ಮ ವೇಷವನ್ನೇ ಜೀವನಾಧಾರವನ್ನಾಗಿ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಗೊಂದಲ ಹಾಕುವ ನೆಪದಲ್ಲಿ ಇವರು ಮುಸಲ್ಮಾನರ ರಾಜ್ಯದಲ್ಲಿ ಸಂಗ್ರಹಿಸುತ್ತಿದ್ದ ಸುದ್ದಿಗಳನ್ನು ಮರಾಠಿಯಲ್ಲಿ ಕಥೆಯಾಗಿ ಹಾಡುತ್ತಿದ್ದರು. ಭಿಕ್ಷಾಟನೆಯ ನೆಪದಲ್ಲಿ ಗೊಂದಲಿಗರು ಮನೆಯ ಮುಂದೆ ನಿಂತು ಹಾಡತೊಡಗಿದರೆಂದರೆ, ಆ ಮನೆಯ ಒಳಗಿದ್ದವರೆಲ್ಲರಿಗೂ ಗುಪ್ತ ಸುದ್ದಿ ತಿಳಿದು ಹೋಗುತ್ತಲಿದ್ದವು. ಮರಾಠಿಗಳಾದ ಲಮಾಣಿಗಳು ಮತ್ತು ಅವರಂತೆ ಅಲೆಮಾರಿ ಮರಾಠಿಗಳಾದ 'ಮಾವಳೆ' ಮಂದಿ ಇರುವಲೆಲ್ಲಾ ಹೋಗಿ ಗೊಂದಲ ಹಾಕಿ ಆಮೂಲಕ ಮುಸಲ್ಮಾನರ ಮಸಲತ್ತುಗಳನ್ನು ತಿಳಿಸಿ, ಒಗಟ್ಟನ್ನು ಸಾಧಿಸಲು ಸಲಹೆ ನೀಡುತ್ತಿದ್ದರು. ಅವರೆಲ್ಲಾ ಅಂಬಾ ಭವಾನಿಯ ಭಕ್ತರೇ ಆಗಿದ್ದರಿಂದ, ಆ ದೇವತೆಯ ಹೆಸರಿನಲ್ಲೇ ಹಾಡುತ್ತಿದ್ದ ಕಥೆಗಳು ಇವರ ಸಲಹೆಗಳನ್ನು ಸುದ್ದಿಗಳನ್ನು ಯಶಸ್ವಿಗೊಳಿಸುತ್ತಿದ್ದವು. ಗೂಢಚರ್ಯೆಯ ಕೆಲಸ ಮುಗಿದ ಮೇಲೆ ಮತ್ತೆ ತಾಯ್ನಾಡಿಗೆ ಹಿಂದುರುಗಲು ಇಚ್ಚಿಸದೇ ಇಲ್ಲಿಯೇ ಭಿಕ್ಷಾಟಣೆ ಮಾಡಿಕೊಳ್ಳುತ್ತಾ ಕನ್ನಡದ ನೆಲದಲ್ಲಿಯೇ ನೆಲೆಸಿದರು".[೧೫] (ಪು-೧೪-೧೫)

"ಗೊಂದಲಿಗರು ಎಂಬ ಹೆಸರು ಬರುವದಕ್ಕಿಂತ ಮೊದಲು ಇವರು 'ಮಾವಳೆ ಜನಾಂಗ' ಎಂಬ ಹೆಸರಿನ ಕಾಡುಕುರುಬರಾಗಿದ್ದರಂತೆ. ಇವರು ದೇವಿಯ ಹೆಸರಿನಲ್ಲಿ ತಿಳಿದಂತೆ ಹಾಡುವುದು ಕುಣಿಯುವುದು, ಮಾಡುತ್ತಿದ್ದರು. ಮುಸಲ್ಮಾನರ ಕುತಂತ್ರಗಳಿಂದ ಬೇಸತ್ತಿದ್ದ ಶಿವಾಜಿ ಮಹಾರಾಜನು ಚಿಂತಾಕ್ರಾಂತನಾಗಿದ್ದನು. ಈಸಂದರ್ಭದಲ್ಲಿ ಶಿವಾಜಿಯ ಸೇನಾಧಿಪತಿಯಾಗಿದ್ದ ತಾನಾಜಿ ಮಾಲುಸರೆಯು ಇವರನ್ನು ಕರೆದು ದೇವಿಯ ಹೆಸರಿನಲ್ಲಿ ಮುಸಲ್ಮಾನರ ಮನೆಗಳಿಗೆ ಹೋಗಿ ಗೊಂದಲ ಮಾಡಿ ಪ್ರಸಾದ ಕೊಡುವ, ಭಂಢಾರ ಹಚ್ಚುವ ನೆಪದಿಂದ ಅವರ ಮನೆಯೊಳಗೆ ಪ್ರವೇಶಿಸಿ ಅವರ ರಹಸ್ಯಗಳನ್ನು ತಿಳಿದು ವರದಿ ಮಾಡಬೇಕೆಂದು ಅಪ್ಪಣೆ ಮಾಡಿದ. ದೇವಿಯ ಹೆಸರನ್ನು ಕೇಳಿದರೆ ತೆಪ್ಪಗೆ ನಿಲ್ಲುವಂತೆ ಮಾಡಿ ಮನೆಯೊಳಗೆ ಪ್ರವೇಶ ಮಾಡಿ ಮುಸಲ್ಮಾನರ ಮನೆಯಲ್ಲಿ ಅಡಗಿಸಿದ ಮತ್ತು ಶೇಖರಿಸಿಡುತ್ತಿದ್ದ ಶಸ್ತ್ರಾಸ್ತ್ರಗಳನ್ನು, ಅಲ್ಲಲ್ಲಿ ಅಡಗಿದ್ದ ಗುಪ್ತ ಯೋಧರನ್ನು ಕಂಡು ಹಿಡಿದು ಶಿವಾಜಿಗೆ ತಿಳಿಸುತ್ತಿದ್ದರು. ಇವರ ಯಶಸ್ವಿ ಗೂಢಚರ್ಯದಿಂದ ಸಂತೃಪ್ತನಾದ ಶಿವಾಜಿ ಮಹಾರಾಜ ನೆರೆ ರಾಜ್ಯವಾದ ಬಿಜಾಪೂರ ಸಂಸ್ಥಾನಕ್ಕೂ ಗೊಂದಲಿಗರನ್ನು ಗೂಢಚಾರನ್ನಾಗಿ ನೇಮಿಸುತ್ತಾನೆ".[೧೬] (ಪು.೧೭-೧೮)

"ಛತ್ರಪತಿ ಶಿವಾಜಿ ಮಹಾರಾಜ ಒಮ್ಮೆ ತುಂಬಾ ಕಷ್ಟಕ್ಕೆ ಸಿಕ್ಕಿಕೊಂಡು ಚಿಂತಾಕ್ರಾಂತನಾಗಿ ಕುಳಿತಾಗ, ಶಿವಾಜಿ ಆಸ್ಥಾನದಲ್ಲಿ ಪ್ರಧಾನಿಗಳಾಗಿದ್ದ ತಾನಾಜಿ ಮತ್ತು ಮಾನಾಜಿ ಬಂದು ದೇವಿ ಅಂಬಾ ಭವಾನಿಯ ಹೆಸರಿನಲ್ಲಿ ಗೊಂದಲ ಹಾಕಿಸಿದರೆ ಬಂದಿರುವ ಕಷ್ಟಗಳೆಲ್ಲಾ ಮಾಯವಾಗುತ್ತವೆ. ಎಂದು ತಿಳಿಸುತ್ತಾರೆ. ಹಿರಿಯರ ಮಾತನ್ನು ಮೀರಬಾರದೆಂದು ಅವರ ಮೇಲೆ ನಂಬಿಕೆ ಇಟ್ಟು, 'ಗೊಂದಲ ಪೂಜೆ' ನೇರವೇರಿಸುತ್ತಾನೆ. ಈ ಪೂಜೆಯ ನಂತರ ಶಿವಾಜಿಗೆ ಬಂದೊರಗಿದ ಕಷ್ಟಗಳೆಲ್ಲಾ ಹಂತ ಹಂತವಾಗಿ ಕಡಿಮೆಯಾಗುತ್ತವೆ. ಶಿವಾಜಿ ಗೊಂದಲ, ಗೊಂದಲಿಗರ ಅಂಬಾಭವಾನಿಯ ಮೇಲೆ ಭಕ್ತಿ- ಶ್ರದ್ಧೆಯಿಂದ ಅನೇಕ ಗೊಂದಲ ಕಾರ್ಯಕ್ರಮಗಳನ್ನು ತನ್ನ ಮನೆಯಲ್ಲಿ ಏರ್ಪಡಿಸುವದರ ಮೂಲಕ ಅನೇಕ ಕಷ್ಟಗಳಿಂದ ಪಾರಾಗುತ್ತಾನೆ. ಮುಸಲ್ಮಾನರ ಕಿರುಕುಳಗಳು ಎದುರಾದಾಗ ಕೇವಲ ಗೊಂದಲ ಭಕ್ತಿಗೆ ತನ್ನ ಪರಿಹಾರ ಮಾರ್ಗವನ್ನು ಸೀಮಿತಗೊಳಿಸಿಕೊಳ್ಳದೆ ಲೌಕಿಕ ತಂತ್ರಗಳಿಗಾಗಿಯೂ ಗೊಂದಲಿಗರನ್ನು ಬಳಸಿಕೊಳ್ಳಲು ಆಯೋಜಿಸಿದನಂತೆ. ಇದರಿಂದ ಯಶಸ್ವಿ ಸರಮಾಲೆಗಳು ಶಿವಾಜಿಯ ಕೊರಳಿಗೆ ಬೀಳ ತೊಡಗಿದಾಗ ಅವನು ಅಂಬಾಭವಾನಿಯನ್ನು ತನ್ನ ಮನೆ ದೇವರನ್ನಾಗಿ ಸ್ವೀಕರಿಸಿ ದನಂತೆ".[೧೬] (ಪು-೧೮)

ಈ ರೀತಿಯಾಗಿ ಬೆಳೆದು ಬಂದ ಪುರಾಣಗಳು, ಕಥೆಗಳು-ನಂಬಿಕೆಗಳು, ಗೊಂದಲಿಗ ಸಮುದಾಯ ಸಾಮಾಜಿಕ ವ್ಯವಸ್ಥೆಯಲ್ಲಿ ಯಾವ ಹಿನ್ನೆಲೆಯಲ್ಲಿ ಬೆಳೆದು ಬಂದಿತು. ಅವರು ಅನುಸರಿಸುವ ವಿಭಿನ್ನ ವೃತ್ತಿಗಳು ಹೇಗೆ ಬೆಳೆದು ಬಂದು ಆ ಮೂಲಕ ತಮ್ಮ ಉಪಜೀವನದ ಮಾರ್ಗವನ್ನು ಕಂಡುಕೊಂಡರು ಎಂಬುದು ತಿಳಿಯುತ್ತದೆಯಲ್ಲದೇ ಪ್ರಾರಂಭದಿಂದಲೂ ಗೊಂದಲಿಗರು ಅಲೆಮಾರಿ-ಅರೆಅಲೆಮಾರಿ ಗಳಾಗಿಯೇ ಬದುಕನ್ನು ಕಳೆಯುತ್ತಾ ಬಂದಿದ್ದಾರೆಂಬುದು ಸ್ಪಷ್ಟವಾಗಿ ಕಂಡು ಬರುತ್ತದೆ.

## ೨.೪ ಗೊಂದಲಿಗರು ವಾಸಿಸುವ ಭೌಗೋಳಿಕ ಪರಿಸರ

ಗೊಂದಲಿಗರು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಅಲೆಮಾರಿಗಳಾಗಿಯೇ ಬದುಕನ್ನು ಕಳೆಯುತ್ತಾ ಬಂದವರು. ಇವರು ನೂರಾರು ವರ್ಷಗಳಿಂದ ತಮ್ಮಲ್ಲಿ ವಿಶಿಷ್ಟ ಕಲೆಯನ್ನು ವೃತ್ತಿಯಾಗಿಸಿ ಕೊಂಡು ಅದನ್ನು ನಾಗರಿಕ ಸಮುದಾಯದ ಮುಂದೆ ಪ್ರದರ್ಶಿಸಿ, ಅವರನ್ನು ರಂಜಿಸಿ, ನಂತರ ಜನರಿಂದ ದವಸ-ಧಾನ್ಯ ಹಣವನ್ನು ಪ್ರತಿಫಲವಾಗಿ ಬೇಡುತ್ತಾ ಊರಿಂದೂರಿಗೆ ಸಂಚರಿಸುವ ಅಲೆಮಾರಿ ಜನಾಂಗ. ಬದಲಾದ ಇಂದಿನ ಸನ್ನಿವೇಶದಲ್ಲಿ ಗೊಂದಲಿಗರು ವಂಶಪಾರಂಪರ್ಯ ವೃತ್ತಿಯ ಜೊತೆಗೆ ಜೀವನೋಪಾಯಕ್ಕಾಗಿ ಭಾಂಡೆ(ಪಾತ್ರೆ) ವ್ಯಾಪಾರ ಹಾಗೂ ಇನ್ನಿತರ ವೃತ್ತಿಯನ್ನು ಮಾಡುತ್ತಾ ಅಲೆಮಾರಿ-ಅರೆಅಲೆಮಾರಿಗಳಾಗಿದ್ದ ಇವರು ಈಗ ಒಂದೆಡೆ ವಾಸ ಮಾಡುತ್ತಿದ್ದಾರೆ. ಇನ್ನು ಕೆಲವರು ಈವರೆಗೂ ಅಲೆಮಾರಿಗಳಾಗಿ ಊರಿಂದ ಊರಿಗೆ ಅಲೆದು ತಮ್ಮ ಕಾಯಕ ಮಾಡಿ ಜೀವನ ಸಾಗಿಸುತ್ತಿದ್ದಾರೆ.

ಆಲೆಮಾರಿಗಳಾಗಿ ತಮ್ಮ ವೃತ್ತಿಯನ್ನು ಒಂದು ಧಾರ್ಮಿಕ ಕಾರ್ಯವೆಂಬಂತೆ ಮುನ್ನೆಡಿಸಿಕೊಂಡು ಬರುತ್ತಿರುವ ಕಥೋಪಜೀವಿಗಳಾಗಿರುವ ಗೊಂದಲಿಗರು ಸಾಮಾನ್ಯವಾಗಿ ಮಹಾರಾಷ್ಟ್ರ, ಆಂಧ್ರಪ್ರದೇಶ, ಗುಜರಾತ, ತಮಿಳುನಾಡು, ಗೋವಾ ರಾಜ್ಯಗಳಲ್ಲಿ ವಾಸಿಸುತ್ತಿದ್ದು, ಕರ್ನಾಟಕದಲ್ಲಿ ಬಹುಸಂಖ್ಯಾತ ರಾಗಿದ್ದಾರೆ. ಗೊಂದಲಿಗರು ಕರ್ನಾಟಕ ರಾಜ್ಯದ ೨೫ ಜಿಲ್ಲೆಗಳಲ್ಲಿ ಕಂಡು ಬರುವರು. ಸಾಮಾನ್ಯವಾಗಿ ಇವರು ಗ್ರಾಮೀಣ ಪ್ರದೇಶಗಳಿಗಿಂತ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ನೆಲೆ ಕಂಡುಕೊಂಡಿದ್ದು, ಅಲ್ಲಿ ಬಾಡಿಗೆ ಮನೆ, ಬಸ್ ಹಾಗೂ ರೈಲ್ವೆ ನಿಲ್ದಾಣಗಳ ಮತ್ತು ಕೊಳೆಚೆ ಪ್ರದೇಶಗಳಲ್ಲಿ ವಾಸಿಸುತ್ತಿರುವದು ಸಾಮಾನ್ಯವಾಗಿ ಕಂಡುಬರುತ್ತದೆ. ಬಾಗಲಕೋಟ, ಬಿಜಾಪೂರ, ಬೀದರ, ಗುಲಬುರ್ಗ, ರಾಯಚೂರ, ಬಳ್ಳಾರಿ, ಕೊಪ್ಪಳ, ಗದಗ, ಹಾವೇರಿ, ಧಾರವಾಡ, ಬೆಳಗಾವಿ, ದಾವಣಗೇರಿ, ಚಿತ್ರದುರ್ಗ, ತುಮಕೂರ, ಬೆಂಗಳೂರ, ಮೈಸೂರ, ಚಾಮರಾಜ ನಗರ, ಚಿಕ್ಕಮಗಳೂರ, ಕೊಡಗು, ಮಂಡ್ಯ, ಹಾಸನ, ಶಿವಮೊಗ್ಗ, ಮಂಗಳೂರು, ಉಡುಪಿ, ಉತ್ತರಕನ್ನಡ, ಕೊಲಾರ, ಜಿಲ್ಲೆಗಳಲ್ಲಿ ತಮ್ಮ ಬದುಕಿಗಾಗಿ ನೆಲೆಯನ್ನು ಕಂಡುಕೊಂಡಿರುವುದನ್ನು ಕಾಣುತ್ತೇವೆ. ಕೆಲ ಪ್ರದೇಶಗಳಲ್ಲಿ ಗೊಂದಲಿಗರ ಓಣಿಗಳೆಂದೇ ಕರೆಯಲ್ಪಡು ವುದನ್ನು ಕಾಣುತ್ತೇವೆ. ಬೆಳಗಾವಿಯಲ್ಲಿ ಗೊಂಧಳಿಗಲ್ಲಿ, ಬಿಜಾಪುರದಲ್ಲಿ ಗೊಂಧಳಿ ಓಣಿ ಇರುವುದನ್ನು ಕಾಣಸಿಗುತ್ತವೆ.

## ೨.೫ ಗೊಂದಲಿಗರ ಜನಸಂಖ್ಯೆ

ಜಾತಿಯಾಧರಿಸಿ ಭಾರತೀಯ ಸಮಾಜದಲ್ಲಿ ಎಲ್ಲಾ ಸಮುದಾಯಗಳು ಒಂದಲ್ಲಾ ಒಂದು ಜಾತಿಯಲ್ಲಿ ಗುರುತಿಸಿಕೊಂಡಿವೆ. ಕೆಳ ಜಾತಿಯವರು ಎಂದು ಗುರುತಿಸಿಕೊಂಡಿರುವ ಅನೇಕರು ತಮ್ಮ ಜಾತಿಯನ್ನು ಅಭಿಮಾನದಿಂದ ಹೇಳಿಕೊಂಡರೆ, ಸುಶಿಕ್ಷಿತ-ಮುಂದುವರಿದ ಅದೇ ಜಾತಿಯ ಜನರು ತಮ್ಮ ಜಾತಿಯ ಹೆಸರನ್ನು ಪಿಸುಮಾತಿನಲ್ಲಿ ಹೇಳುವರು ಇಲ್ಲವೇ ಹೇಳಿಕೊಳ್ಳಲು ಹಿಂದು-ಮುಂದು ನೋಡುವರು. ಇಂತಹ ಸಂದರ್ಭದಲ್ಲಿ ಜಾತಿ ಹೆಸರನ್ನು ಹೇಳಿಕೊಳ್ಳಲು ಇಷ್ಟಪಡದ ಒಂದು ಸಮುದಾಯದ ಜನಸಂಖ್ಯೆಯನ್ನು ನಿಖರವಾಗಿ ಕಂಡು ಹಿಡಿಯುವುದು ಕಷ್ಟಕರವಾದ ಕೆಲಸವೇ ಸರಿ.

ಬುಡಬುಡಿಕೆಯರು, ಭಾಟರು, ಸಿಂಗದರು, ವಾಸುದೇವ, ಚಿತ್ರಪಟದವರು, ಗಿಳಿಶಾಸ್ತ್ರದವರು, ಭೂತೇರು, ಜ್ಯೋತಿಷಿ/ಜೋಶಿಗಳು ಹೀಗೆ ಹಲವಾರು ಉಪಪಂಗಡಗಳ ವೃತ್ತಿಯಲ್ಲಿ ಇರುವ ಗೊಂದಲಿಗರು ತಮ್ಮ ಜಾತಿಯ ಹೆಸರನ್ನು ಹೇಳುವಾಗ ಗೊಂದಲಿಗರು ಎಂದು ಹೇಳದೆ ಇರುವದು, ತಾವು ಅನುಸರಿಸುವ ವೃತ್ತಿಯನ್ನೇ ಜಾತಿಯನ್ನಾಗಿ ಹೇಳುತ್ತಿರುವುದು ಕಂಡುಬರುವುದರಿಂದ ಇಡೀ ಗೊಂದಲಿಗ ಸಮುದಾಯದ ಒಟ್ಟು ಜನಸಂಖ್ಯೆಯನ್ನು ಹೇಳಲು ಕಷ್ಟಕರ. ಆದಾಗ್ಯೂ ತಮ್ಮ ಸಮುದಾಯವನ್ನು ಒಂದಡೆ ತರಬೇಕೆಂಬ ಹಿರಿಯ ಸಂಘಟಕರ ಪ್ರಯತ್ನದ ಫಲವಾಗಿ 'ಕರ್ನಾಟಕ ಗೊಂದಳಿ ಸಮಾಜ (ರಿ) ಹುಬ್ಬಳ್ಳಿ-ಧಾರವಾಡ, ರಾಜ್ಯ ಮಟ್ಟದ ಸಂಘಟನೆಯು ಇಡೀ ಗೊಂದಲಿಗ ಸಮುದಾಯದವರನ್ನು ಒಟ್ಟುಗೂಡಿಸುವ, ಸಂಘಟಿಸುವ, ಸಮ್ಮೇಳನಗಳನ್ನು ನಡೆಸುವ ಪ್ರಯತ್ನವನ್ನು

ಮಾಡಿದ್ದರ ಫಲವಾಗಿ ಗೊಂದಲಿಗ ಸಮುದಾಯದ ಅಂದಾಜು ಜನಸಂಖ್ಯೆಯನ್ನು ಕಂಡುಕೊಳ್ಳಲು ಸಾಧ್ಯವಾಗಿದೆ.

೧೯೯೩ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರ ಇವರ ಪ್ರಕಾಶನದಲ್ಲಿ ನಿಂಗಣ್ಣ ಸಣ್ಣಕ್ಕಿಯವರು ಬರೆದ 'ಗೊಂದಲಿಗರ ಸಂಸ್ಕೃತಿ' ಎಂಬ ಗ್ರಂಥದಲ್ಲಿ ಕರ್ನಾಟಕದ ೧೯ ಜಿಲ್ಲೆಗಳಲ್ಲಿ ಇರುವ ಒಟ್ಟು ಜನಸಂಖ್ಯೆ ಪುರುಷರು ೧,೫೫,೨೩೦ ಮಹಿಳೆಯರು ೧,೪೫,೩೩೦ ಒಟ್ಟು ೩,೦೦,೩೬೦ ಇದೆ ಎಂದು ತಿಳಿಸಿದ್ದಾರೆ.

೨೦೦೬ರಲ್ಲಿ ಪ್ರಕಾಶನಗೊಂಡ ಚಿಂತಾಮಣಿ ಕೆ ಜೋರಾಪೂರವರು ಬರೆದ ಕರ್ನಾಟಕದಲ್ಲಿ ಕ್ಷತ್ರೀಯ ಪಂಗಡಗಳು ಭಾಗ-೧ರಲ್ಲಿ ಗೊಂದಲಿಗರ ಜನಸಂಖ್ಯೆ ೬ ಲಕ್ಷದಷ್ಟು ಇದೆ ಎಂದಿದ್ದಾರೆ. ತರಂಗ ವಾರ ಪತ್ರಿಕೆಯಲ್ಲಿ ಮೇ ೨೮ ೨೦೦೯ರ ಪತ್ರಿಕೆಯಲ್ಲಿ "ಬೆಳಗಿದೆ ನೋಡಾ ಬುಡಬುಡಿಕೆಯ ಬದುಕು" ಎಂಬ ಲೇಖನದಲ್ಲಿ, ಲೇಖಕ ಕಿಶನ್‌ರಾವ ಕುಲಕರ್ಣಿಯವರು ರಾಜ್ಯದಲ್ಲಿ ಇರುವ ಇವರ ಜನಸಂಖ್ಯೆ ಸುಮಾರು ೩೪ ಸಾವಿರ, ಇವರ ಕುಟುಂಬಗಳ ಸಂಖ್ಯೆ ೭ ಸಾವಿರ, ಎಂಬ ಮಾಹಿತಿ ಯನ್ನು ಕೊಟ್ಟಿದ್ದಾರೆ. ಬಹುಶಃ ಇದು ಬುಡಬುಡಕೆ ವೃತ್ತಿಯನ್ನು ಕೈಕೊಂಡಿರುವವರ ಜನಸಂಖ್ಯೆ ಹಾಗೂ ಕುಟುಂಬಗಳ ವಿವರಗಳಿರಬಹುದೆನಿಸುತ್ತದೆ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೧ರಲ್ಲಿ ಪ್ರಕಟಗೊಂಡ ಡಾ. ಗಂಗಾಧರ ದೈವಜ್ಞರವರ 'ಗೊಂದಲಿಗರು' ಎಂಬ ಗ್ರಂಥ ದಲ್ಲಿ ಕರ್ನಾಟಕದ ಪ್ರತಿಯೊಂದು ಜಿಲ್ಲೆಯಲ್ಲಿ ಕಂಡುಬರುವ ಗೊಂದಲಿಗರ ಸಮುದಾಯದಲ್ಲಿ ಜನಸಂಖ್ಯೆ ಸುಮಾರು ೯೦,೦೦೦-೧,೦೦೦೦೦ ದವರೆಗೆ ಇರಬಹುದೆಂದು ಅಂದಾಜು ಮಾಡಿದ್ದಾರೆ. ಕರ್ನಾಟಕದಲ್ಲಿ ೯೯೦೫ ಗೊಂದಲಿಗ ಕುಟುಂಬಗಳಿದ್ದು, ಉತ್ತರ ಕರ್ನಾಟಕದಲ್ಲಿ ಸುಮಾರು ೬೩೦೭ ಕುಟುಂಬಗಳು, ಕರಾವಳಿ ಕರ್ನಾಟಕದಲ್ಲಿ ೫೯೬ ಕುಟುಂಬಗಳು, ದಕ್ಷಿಣ ಕರ್ನಾಟಕದಲ್ಲಿ ೩೦೦೨ ಕುಟುಂಬಗಳು ಇವೆ ಎಂದು ಅಂದಾಜಿಸಿದ್ದಾರೆ.

ಕರ್ನಾಟಕ ಗೊಂದಳಿ ಸಮಾಜ (ರಿ) ಹುಬಳ್ಳಿ ಧಾರವಾಡ ರಾಜ್ಯ ಮಟ್ಟದ ಸಂಘಟನೆಯು ಆಯೋಜಿಸಿದ್ದ ಮಹಾಅಧಿವೇಶನದ ಮೂಲಕ ಪ್ರತಿ ತಾಲೂಕು ಮತ್ತು ಜಿಲ್ಲೆಗಳಲ್ಲಿ ಸಂಘದ ಪ್ರತಿ ನಿಧಿಗಳನ್ನು ಮತ್ತು ಸದಸ್ಯರನ್ನು ನಿಯೋಜಿಸಿ ಪ್ರತಿ ಗ್ರಾಮ ಪಟ್ಟಣ ಮತ್ತು ನಗರಗಳಲ್ಲಿ ಈ ಗೊಂದಲಿಗ ಜನಾಂಗದ ಜನಸಂಖ್ಯೆಯ ಕೋಷ್ಟಕವನ್ನು ಸಿದ್ದಪಡಿಸಿದ್ದು ೨೦೦೭ರಲ್ಲಿ ಹುಬಳ್ಳಿಯಲ್ಲಿ ಗೊಂದಳಿ ಸಮಾಜದ ಬೃಹತ್ ಅಧಿವೇಶನದಲ್ಲಿ ಹೊರತಂದ ಸ್ಮರಣ ಸಂಚಿಕೆಯ ಅನುಬಂಧ-೧ರಲ್ಲಿ ಕರ್ನಾಟಕದಲ್ಲಿಯ ಗೊಂದಳಿ, ಜೋಷಿ, ಬುಡಬುಡಿಕೆ, ವಾಸುದೇವ ಸಮಾಜಗಳ ಒಟ್ಟು ಜನಸಂಖ್ಯೆಯ ಮಾಹಿತಿಯನ್ನು ಈ ರೀತಿ ನೀಡಲಾಗಿದೆ.

ಕೋಷ್ಟಕ ೨.೧ ಅನುಬಂಧ-೧ರ ಕರ್ನಾಟಕದಲ್ಲಿಯ ಗೊಂದಳಿ, ಜೋಷಿ, ಬುಡಬುಡಿಕೆ, ವಾಸುದೇವ ಸಮಾಜಗಳ ಒಟ್ಟು ಜನಸಂಖ್ಯೆಯ ಮಾಹಿತಿ

| ಜಿಲ್ಲೆ | ಪುರುಷರು | ಸ್ತ್ರೀಯರು | ಒಟ್ಟು |
|---|---|---|---|
| ಧಾರವಾಡ | ೧೫೫೦೦ | ೧೫೦೦೦ | ೩೦೫೦೦ |
| ಗದಗ | ೧೦೦೦೦ | ೧೫೦೦೦ | ೨೫೦೦೦ |
| ಹಾವೇರಿ | ೫೦೦೦ | ೬೦೦೦ | ೧೧೦೦೦ |
| ಬೆಳಗಾಂವ | ೨೦೦೦೦ | ೨೯೦೦೦ | ೪೯೦೦೦ |
| ಬಿಜಾಪೂರ | ೨೩೫೦೦ | ೨೦೦೦೦ | ೪೩೫೦೦ |
| ಬಾಗಲಕೋಟ | ೧೨೦೦೦ | ೧೫೦೦೦ | ೨೭೦೦೦ |
| ಕಾರವಾರ | ೮೦೦೦ | ೮೦೦೦ | ೧೬೦೦೦ |
| ರಾಯಚೂರ | ೧೦೦೦೦ | ೧೨೦೦೦ | ೨೨೦೦೦ |
| ಕೊಪ್ಪಳ | ೮೦೦೦ | ೬೦೦೦ | ೧೪೦೦೦ |
| ಗುಲಬರ್ಗಾ | ೨೦೦೦೦ | ೧೮೦೦೦ | ೩೮೦೦೦ |
| ಬೀದರ | ೧೦೦೦೦ | ೧೦೦೦೦ | ೨೦೦೦೦ |
| ಬಳ್ಳಾರಿ | ೧೦೦೦೦ | ೯೦೦೦ | ೧೯೦೦೦ |
| ಶಿವಮೊಗ್ಗ | ೧೦೦೦೦ | ೮೦೦೦ | ೧೮೦೦೦ |
| ಚಿತ್ರದುರ್ಗ | ೧೬೦೦೦ | ೧೫೦೦೦ | ೩೧೦೦೦ |
| ದಾವಣಗೇರಿ | ೧೦೦೦೦ | ೮೦೦೦ | ೧೮೦೦೦ |
| ತುಮಕೂರ | ೧೦೦೦೦ | ೯೦೦೦ | ೧೯೦೦೦ |
| ಮಂಗಳೂರ | ೪೦೦೦ | ೪೫೦೦ | ೮೫೦೦ |
| ಉಡುಪಿ | ೨೦೦೦ | ೨೦೦೦ | ೪೦೦೦ |
| ಚಿಕ್ಕಮಂಗಳೂರ | ೪೦೦೦ | ೪೦೦೦ | ೮೦೦೦ |
| ಹಾಸನ | ೧೦೦೦೦ | ೧೦೦೦೦ | ೨೦೦೦೦ |
| ಮಂಡ್ಯ | ೪೦೦೦ | ೪೦೦೦ | ೮೦೦೦ |
| ಬೆಂಗಳೂರ | ೧೦೦೦೦ | ೧೦೦೦೦ | ೨೦೦೦೦ |
| ಬೆಂಗಳೂರ ಗ್ರಾಮಾಂತರ | ೧೫೦೦೦ | ೧೪೦೦೦ | ೨೯೦೦೦ |
| ಕೋಲಾರ | ೮೦೦೦ | ೮೫೦೦ | ೧೬೫೦೦ |
| ಮಡಿಕೇರಿ | ೧೦೦೦ | ೧೦೦೦ | ೨೦೦೦ |
| ಮೈಸೂರ | ೧೯೦೦೦ | ೧೮೦೦೦ | ೩೭೦೦೦ |
| ಚಾಮರಾಜ ನಗರ | ೨೦೦೦ | ೨೦೦೦ | ೪೦೦೦ |

ಒಟ್ಟಿನಲ್ಲಿ ರಾಜ್ಯಾದಂತ ಹರಡಿಕೊಂಡಿರುವ ಗೊಂದಲಿಗರ ಜನಸಂಖ್ಯೆಗೆ ಸಂಬಂಧಪಟ್ಟ ಅಂಕಿ-ಅಂಶಗಳನ್ನು ಮೇಲಿನ ವಿವಿಧ ಮೂಲಗಳಿಂದ ತಿಳಿಯಬಹುದಾಗಿದೆ. ಕರ್ನಾಟಕದುದ್ದಗಲಕ್ಕೂ ಹರಡಿರುವ ಗೊಂದಲಿಗರ ಕುರಿತಾದ ಈ ಅಧ್ಯಯನದಲ್ಲಿ ಉತ್ತರ ಕರ್ನಾಟಕವನ್ನು ಕೇಂದ್ರಿಕರಿಸಿಕೊಂಡು ವಿಶ್ಲೇಷಿಸಲಾಗಿದೆ. ಅಧ್ಯಯನಕ್ಕಾಗಿ ಉತ್ತರ ಕರ್ನಾಟಕದ ವ್ಯಾಪ್ತಿಯಲ್ಲಿ ಬರುವ ೧೩ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಂಡು, ಮಾದರಿ ವಿಧಾನದ ಮೂಲಕ (Sampling method) ಕುಟುಂಬಗಳನ್ನು ಸಮೀಕ್ಷೆ ಮಾಡಲಾಗಿದೆ. ಸಮೀಕ್ಷೆಯ ಪ್ರಕಾರ ಕಂಡುಬಂದ ಜನಸಂಖ್ಯಾ ವಿವರವನ್ನು ಈ ಕೆಳಗಿನ ಕೋಷ್ಟಕ ೨.೨ರಲ್ಲಿ ನೀಡಲಾಗಿದೆ.

**ಕೋಷ್ಟಕ ೨.೨. ಗೊಂದಲಿಗರ ಜಿಲ್ಲಾವಾರು ಹಾಗೂ ಜನಸಂಖ್ಯಾ ಪ್ರಮಾಣ**

| ಕ್ರಸಂ. | ಜಿಲ್ಲೆಗಳು | ಕುಟುಂಬಗಳು | ಜನಸಂಖ್ಯೆ | | |
|---|---|---|---|---|---|
| | | | ಗಂಡು | ಹೆಣ್ಣು | ಒಟ್ಟು |
| ೧ | ಬಾಗಲಕೋಟೆ | ೨೯೫ | ೭೩೦ | ೬೮೨ | ೧೪೧೩ |
| ೨ | ಬೆಳಗಾವಿ | ೧೩೩ | ೩೩೯ | ೨೮೫ | ೬೨೪ |
| ೩ | ಬಳ್ಳಾರಿ | ೫೪ | ೧೫೮ | ೧೫೪ | ೩೧೨ |
| ೪ | ಬೀದರ | ೫೬ | ೧೪೪ | ೧೨೪ | ೨೬೮ |
| ೫ | ಬಿಜಾಪುರ | ೫೭ | ೧೭೯ | ೧೧೯ | ೨೯೮ |
| ೬ | ದಾವಣಗೆರೆ | ೯೧ | ೨೭೩ | ೨೫೦ | ೫೨೩ |
| ೭ | ಧಾರವಾಡ | ೧೦೨ | ೨೫೬ | ೨೪೪ | ೫೦೦ |
| ೮ | ಗದಗ | ೧೫೮ | ೪೩೮ | ೩೯೫ | ೮೩೩ |
| ೯ | ಗುಲಬರ್ಗಾ | ೨೭೪ | ೫೯೨ | ೫೭೩ | ೧೧೬೫ |
| ೧೦ | ಹಾವೇರಿ | ೪೫ | ೭೮ | ೮೬ | ೧೬೪ |
| ೧೧ | ಕೊಪ್ಪಳ | ೧೫೯ | ೩೮೩ | ೪೦೮ | ೭೯೧ |
| ೧೨ | ರಾಯಚೂರು | ೮೭ | ೨೨೦ | ೨೩೮ | ೪೫೮ |
| ೧೩ | ಉತ್ತರಕನ್ನಡ | ೩೩ | ೬೪ | ೫೪ | ೧೧೮ |
| | | ೧೫೪೪ | ೩೮೫೪ | ೩೬೧೨ | ೭೪೬೭ |

ಸಮೀಕ್ಷೆ ಮಾಡಿದ ಕುಟುಂಬಗಳ ಜನಸಂಖ್ಯೆಗೆ ಸಂಬಂಧಪಟ್ಟಂತೆ ಬಾಗಲಕೋಟದಲ್ಲಿ ೨೯೫ ಕುಟುಂಬಗಳಿದ್ದು, ಒಟ್ಟು ಜನಸಂಖ್ಯೆಯಲ್ಲಿ ಶೇ. ೧೮ರಷ್ಟು ಇದ್ದರೆ, ಗುಲಬರ್ಗಾದಲ್ಲಿ ೨೭೪ ಕುಟುಂಬಗಳಿದ್ದು, ಒಟ್ಟು ಜನಸಂಖ್ಯೆಯಲ್ಲಿ ಶೇ. ೧೬ರಷ್ಟು ಇದ್ದಾರೆ. ಅದರ ನಂತರದಲ್ಲಿ ಗದಗದಲ್ಲಿ ೧೫೮ ಕುಟುಂಬಗಳು, ಕೊಪ್ಪಳದಲ್ಲಿ ೧೫೯ ಕುಟುಂಬಗಳಿದ್ದು ಶೇ. ೧೧ರಷ್ಟು ಒಟ್ಟು ಜನಸಂಖ್ಯೆಯಲ್ಲಿ

ಕಂಡುಬರುತ್ತಾರೆ. ಬೆಳಗಾವಿ (ಶೇ.೮), ದಾವಣಗೆರೆ (ಶೇ.೭), ಧಾರವಾಡ (ಶೇ.೭), ರಾಯಚೂರ (ಶೇ.೬), ಬಳ್ಳಾರಿ, ಬೀದರ, ಬಿಜಾಪೂರ ಶೇ. ೪ರಷ್ಟು ಹಾಗೂ ಕಾರವಾರ(ಉತ್ತರ ಕನ್ನಡ)ದಲ್ಲಿ ಶೇ. ೨ರಷ್ಟು ಜನಸಂಖ್ಯೆಯನ್ನು ಕಾಣುತ್ತೇವೆ.

**ವೃತ್ತ ಚಿತ್ರ ೨.೧ ಗೊಂದಲಿಗರ ಲಿಂಗವಾರು ಜನಸಂಖ್ಯಾ ಶೇಕಡಾವಾರು ಪ್ರಮಾಣ**




ಮಾದರಿ ಸಮಿಕ್ಷೆಗೆ ಆಯ್ಕೆಮಾಡಿಕೊಂಡ ೧೫೪೪ ಕುಟುಂಬಗಳಲ್ಲಿ ೭೪೬೬ರಷ್ಟು ಜನಸಂಖ್ಯೆ ಇದ್ದು ಅದರಲ್ಲಿ ಪುರುಷರು ೩೮೫೪, ಸ್ತ್ರೀಯರು ೩೬೧೨ರಷ್ಟು ಇದ್ದಾರೆ. ಅಂದರೆ ಸಮೀಕೆ ಮಾಡಿದ ಒಟ್ಟು ಜನಸಂಖ್ಯೆಯಲ್ಲಿ ಶೇ. ೫೨ರಷ್ಟು ಪುರುಷರು, ಶೇ. ೪೮ರಷ್ಟು ಸ್ತ್ರೀಯರು ಇದ್ದಾರೆ. ಈ ಹಿನ್ನೆಲೆಯಲ್ಲಿ ಸ್ತ್ರೀಯರ ಸಂಖ್ಯೆಯು ಪುರುಷರ ಸಂಖ್ಯೆಗಿಂತ ಕಡಿಮೆ ಇದ್ದು ಸರಾಸರಿ ೯೩೭ ಲಿಂಗಾನುಪಾತವನ್ನು ಕಾಣುತ್ತೇವೆ.

**ಆಧಾರಗಳು**

೧. ಶ್ರೀಪಾದ ತಮ್ಮಯ್ಯ ಭಟ್, ಅಲೆಮಾರಿ ಸ್ಥಿತಿಗತಿ, (ಸಂ) ಸ.ಚಿ. ರಮೇಶ, ಪು. ೧೩೦, ೨೦೦೫

೨. ಅದೇ, ಪು. ೧೨೯–೧೩೦.

೩. ಪ್ರಭಾಕರ ಎ.ಎಸ್., ಆರ್ಥಿಕ ಸ್ಥಿತ್ಯಂತರಗಳು, (ಸಂ.) ಸ.ಚಿ. ರಮೇಶ, ಪು. ೯೫, ೨೦೦೫

೪. ಮೈತ್ರಿ ಕೆ.ಎಂ., ಚೆನ್ನದಾಸರ, ಯಲ್ಲಪ್ಪ ಬಿ. ಹಿಮ್ಮಡಿ, ಪು. IX-X (ಪ್ರಸ್ತಾವನೆ), ೨೦೦೮

೫. ಶಂಕರರಾವ್ ಚ.ನ., ಭಾರತೀಯ ಸಮಾಜ, ಪು. ೧, ೧೯೯೫

೬. ಮುದೇನೂರು ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನವರ ಹಾಡುಗಳು, ಪು. ೨೫, ೧೯೯೩

೭. ಗಂಗಾಧರ ದೈವಜ್ಞ, ಗೊಂದಲಿಗರು, ಪು. ೨೪, ೨೦೧೦

೮. ಶಿವಾನಂದ ಪಾಚಂಗಿ, ಗೋಂದಳಿ, ಪು. ೨೩, ೨೦೦೮

೯. ರಾಮಣ್ಣ ಕ್ಯಾತನಹಳ್ಳಿ, ಗೊಂದಲಿಗರು-ಒಂದು ಅಧ್ಯಯನ ಪು.೮, ೧೯೮೨

೧೦. ಗಂಗಾಧರ ದೈವಜ್ಞ, ಗೊಂದಲಿಗರು, ಪು.೨೫, ೨೦೧೦

೧೧. ಲಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ಪು.೯೨, ೧೩೩೯

೧೨. ಗಂಗಾಧರ ದೈವಜ್ಞ, ಗೊಂದಲಿಗರು, ಪು.೨೫, ೨೦೧೦

೧೩. ಅದೇ, ಪು. ೨೬-೨೭

೧೪. ಅದೇ, ಪು. ೨೬

೧೫. ಕ್ಯಾತನಹಳ್ಳಿ ರಾಮಣ್ಣ, ಗೊಂದಲಿಗರು: ಒಂದು ಅಧ್ಯಯನ, ಪು.೧೪-೧೫, ೧೯೮೨

೧೬. ಅದೇ, ಪು.೧೭-೧೮

೧೭. ಅದೇ, ಪು.೧೮.

ಅಧ್ಯಾಯ - ೩

## ಗೊಂದಲಿಗರ ಸಾಮಾಜಿಕ ಜೀವನ

೩.೧ ಕೌಟುಂಬಿಕ ಪದ್ಧತಿ

೩.೨ ಒಳಪಂಗಡ ವ್ಯವಸ್ಥೆ

೩.೩ ಬೆಡಗುಗಳು

೩.೪ ರಕ್ತ ಸಂಬಂಧ

೩.೫ ಮನೆಗಳ ರಚನೆ

೩.೬ ಆಹಾರ ಪದ್ಧತಿ

೩.೭ ಉಡುಗೆ-ತೊಡುಗೆ

೩.೮ ವೈದ್ಯ ಪದ್ಧತಿ

೩.೯ ಜಾತಿ ಪಂಚಾಯತಿ

೩.೧೦ ನ್ಯಾಯ ಪದ್ಧತಿ

೩.೧೧ ನಂಬಿಕೆ-ನಿಷೇಧಗಳು

೩.೧೨ ಭಾಷೆ

## ಅಧ್ಯಾಯ ಮೂರು

# ಗೊಂದಲಿಗರ ಸಾಮಾಜಿಕ ಜೀವನ

ಮಾನವ ಸಮಾಜ ಜೀವಿ. ಸಮಾಜ ಬಿಟ್ಟು ಬದುಕಲಾರ ಏಕಾಂಗಿತನದ ಜೀವನ ಅವನಿಗೆ ಅಸಹನೀಯವಾದದು. ಸಮಾಜದ ಸಂಪರ್ಕರಹಿತವಾದ ಮಾನವನ ಜೀವನವು ನೀರಿನಲ್ಲಿ ವಾಸಿಸುವ ಜಲಪ್ರಾಣಿಗಳನ್ನು ಹೊರತೆಗೆದಾಗ ಅವುಗಳಿಗೆ ಆಗುವ ತೊಂದರೆಗಳಿಂತ ಹೆಚ್ಚಿನ ತೊಂದರೆಗೆ ಒಳಗಾಗುವನು. ಆದ್ದರಿಂದ ಮಾನವನು ಯಾವಾಗಲೂ ಸಾಮುದಾಯಿಕವಾಗಿ ಅಥವಾ ಸಾಂಘಿಕವಾಗಿ ಸಮಾಜದಲ್ಲಿ ಜೀವಿಸುವನು. ಪ್ರಾಣಿ-ಪಕ್ಷಿಗಳಿಗಿಂತ ವಿಶಿಷ್ಟವಾದ ವಿಭಿನ್ನವಾದ ಅಲೋಚನಾ ಶಕ್ತಿ, ಭೌದ್ಧಿಕ ಶಕ್ತಿ, ಭಾಷಾ ಸಾಮರ್ಥ್ಯವನ್ನು ಹೊಂದಿರುವುದರಿಂದಲೇ ಮಾನವನು ಸಮಾಜದಲ್ಲಿ ಶ್ರೇಷ್ಠವಾದ ಜೀವಿ ಎನಿಸಿಕೊಳ್ಳಲು ಸಾಧ್ಯವಾಗಿದೆ.

ಪ್ರತಿಯೊಬ್ಬ ಮಾನವನು ತನ್ನದೆ ಆದ ಹಲವಾರು ಬೇಡಿಕೆಗಳನ್ನು ಸಮಾಜದ ಚೌಕಟ್ಟಿನಲ್ಲಿ ಪೂರೈಸಿಕೊಳ್ಳುತ್ತಾನೆ. ಅಂದರೆ ಸಮಾಜವಿಲ್ಲದೆ ತನ್ನ ಗುರಿ-ಉದ್ದೇಶಗಳನ್ನು, ಆಶೆ-ಆಕಾಂಕ್ಷೆಗಳನ್ನು ಸಾಧಿಸಿಕೊಳ್ಳಲಾರ. ಆ ಮೂಲಕ ತನ್ನ ವ್ಯಕ್ತಿತ್ವವನ್ನು ಸರಿಯಾದ ರೀತಿಯಲ್ಲಿ ರೂಪಿಸಿಕೊಳ್ಳಲು ಸಾಧ್ಯವಿಲ್ಲ. ಸಮಾಜ ಎಂಬ ಪದಕ್ಕೆ ಇಂಗ್ಲೀಷಿನ Society ಎಂಬ ಸಮಾನಾರ್ಥಕ ಪದವನ್ನು ಬಳಸುತ್ತಿದ್ದು ಅದು Socious ಎಂಬ ಲ್ಯಾಟಿನ್ ಭಾಷೆಯ ಪದದಿಂದ ಬಂದಿದೆ. Socious ಎಂಬ ಪದವು ಒಡನಾಡಿತನ ಎಂಬ ಅರ್ಥವನ್ನು ಕೊಡುತ್ತದೆ. ಶಬ್ದಶಃ ಒಡನಾಡಿಗಳಿಂದ ಕೂಡಿರುವುದೇ ಸಮಾಜ.

ವ್ಯಕ್ತಿ ಮತ್ತು ಸಮಾಜ ನಡುವಿನ ಒಡನಾಟದ ಜೀವನವು ಸಮಾಜದಲ್ಲಿ ಬಹುಮುಖ್ಯ ಪಾತ್ರ ವಹಿಸುತ್ತದೆ. ಈ ಸಾಮಾಜಿಕ ವ್ಯವಸ್ಥೆಯು ವ್ಯಕ್ತಿ-ವ್ಯಕ್ತಿಗಳ ನಡುವೆ ಸಾಮಾಜಿಕ ಕ್ರಿಯೆ-ಅಂತರ್

ಕ್ರಿಯೆಗಳ ಕ್ರಮಗಳಿಂದ ಸಮಾಜವು ರಚನೆಯಾಗಿರುತ್ತದೆ. ಕಾರಣ ಮಾನವನು ತನ್ನದೆ ಆದಂತಹ ಸಾಮುದಾಯಿಕ ಭಾವನೆಗಳಿಂದ ಸ್ಪಂದಿಸುವ ಜನಸಮೂಹಗಳ ಚೌಕಟ್ಟಿನಲ್ಲಿ ಸುಖ-ಸಂತೋಷದಿಂದ ಜೀವನ ಮಾಡಲು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದ್ದಾನೆ. ಶ್ರೇಷ್ಠ ಸಮಾಜ ಶಾಸ್ತ್ರಜ್ಞರಾದ ಗಿಡಿಂಗ್ಸರವರು- “ಜೊತೆಗೂಡಿ ಇರಬಹುದಾದ ವ್ಯಕ್ತಿಗಳ ಒಟ್ಟು ಗೂಡಿಸಿ ಆದ ಒಂದು ಮೊತ್ತವೇ ಸಮಾಜವಾಗಿದೆ”[೧] ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಐಯಾನ ರಾಬರ್ಟಸನ್ಸರವರು- “ಒಂದು ಸಾಮಾನ್ಯ ಸಂಸ್ಕೃತಿಯಲ್ಲಿ ಸಹಭಾಗಿಯಾದ ಒಂದು ಭೂಭಾಗವನ್ನು ಹಂಚಿಕೊಂಡು ವಾಸಿಸುತ್ತಾ, ಪರಸ್ಪರ ಒಡನಾಟದಲ್ಲಿಯ ಜನರ ಸಮೂಹವನ್ನು ಸಮಾಜ”[೨] ಎಂದಿದ್ದಾರೆ. ಶಾಸ್ತ್ರಜ್ಞರ ಅಭಿಪ್ರಾಯದ ಪ್ರಕಾರ ಸಾಮಾಜಿಕ ಸಂಬಂಧಗಳ ಸಾಮಾಜಿಕ ಅಂತರ್ ಕ್ರಿಯೆಗಳ ಹಿನ್ನೆಲೆಯಲ್ಲಿ ರೂಪಗೊಂಡ ವ್ಯವಸ್ಥೆಯೇ ಸಮಾಜವಾಗಿದ್ದು, ಸಮೂಹಗಳ ಸಮೂಹವಾಗಿದೆ. ಸಮಾಜ ವೆಂದರೆ ಕೇವಲ ವ್ಯಕ್ತಿಗಳ ಸಂಕಲನವಲ್ಲ ಅದೊಂದು ವ್ಯವಸ್ಥೆ. ಹಲವಾರು ಸಮೂಹಗಳು, ಸಂಘ-ಸಂಸ್ಥೆ ಗಳನ್ನು ಒಳಗೊಂಡಿದ್ದು ಪರಸ್ಪರ ಅವಲಂಬಿತವಾಗಿದೆ. ಈ ಹಿನ್ನೆಲೆಯಲ್ಲಿ ವ್ಯಕ್ತಿ-ಸಮೂಹ, ಸಮೂಹ-ಸಮೂಹಗಳ ಒಡನಾಡಿತನದ ಅಡಿಯಲ್ಲಿ ಕಂಡು ಬರುವುದೇ ಸಾಮಾಜಿಕ ಜೀವನ.

ಸಮಾಜವು ಇಡಿಯಾಗಿದ್ದು ಅದರಲ್ಲಿ ಹಲವಾರು ಸಂಘ-ಸಂಸ್ಥೆ, ಸಮುದಾಯಗಳನ್ನೊಳ ಗೊಂಡಿರುತ್ತದೆ. ಪ್ರತಿಯೊಂದು ಸಮುದಾಯಗಳು ತಮ್ಮದೆಯಾದ ಸಾಮುದಾಯಿಕ, ಸಾಮಾಜಿಕ ಜೀವನವನ್ನು ರೂಪಿಸಿಕೊಂಡಿರುತ್ತವೆ. ಕಾರಣ ಸಮುದಾಯದ ಅಧ್ಯಯನದಲ್ಲಿ ಕಂಡುಬರುವ ಸಾಮಾಜಿಕ ವ್ಯವಸ್ಥೆ, ಆ ಮೂಲಕ ಸಾಮಾಜಿಕ ಜೀವನವನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗುವದು. ಈ ರೀತಿಯಲ್ಲಿ ವಿಶಿಷ್ಟ-ವಿಭಿನ್ನ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಗೊಂದಲಿಗ ಸಮುದಾಯದ ಸಾಮಾಜಿಕ ವ್ಯವಸ್ಥೆ ಹಾಗೂ ಜೀವನವನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ.

## ೩.೧ ಕೌಟುಂಬಿಕ ಪದ್ಧತಿ

ಪ್ರತಿಯೊಂದು ಸಾಮಾಜಿಕ ವ್ಯವಸ್ಥೆಯಲ್ಲಿ ಆಧಾರ ಸ್ತಂಭವಾಗಿ ಮಾನವನ ಸಮೂಹ ಜೀವನದ ಮೂಲಭೂತ ಅಂಗವಾಗಿ ಬೆಳೆದು ಬಂದಿರುವುದು ಕೌಟುಂಬಿಕ ವ್ಯವಸ್ಥೆ. ಕುಟುಂಬವು ಇಂದು ನಿನ್ನೆಯದಲ್ಲ. ಮಾನವನ ಸಾಂಘಿಕ ಜೀವನದಿಂದಲೇ ಅದರ ಇತಿಹಾಸ ಆರಂಭವಾಗುತ್ತದೆ. ಆಯಾ ಸಮುದಾಯದ ಜನಾಂಗಗಳಲ್ಲಿ ಕಂಡುಬರುವ ಅಥವಾ ಬೆಳೆದು ಬಂದಿರುವ ಕೌಟುಂಬಿಕ ವ್ಯವಸ್ಥೆಯು ಆ ಸಮುದಾಯ / ಜನಾಂಗದ ಸಂಸ್ಕೃತಿ ಮತ್ತು ಸಾಮಾಜಿಕ ರಚನೆಯನ್ನು ಪ್ರತಿ ಬಿಂಬಿಸುತ್ತದೆ. ಅಂದರೆ “ಕುಟುಂಬವು ಒಂದು ಸಾರ್ವತ್ರಿಕ ಸಂಸ್ಥೆಯಾಗಿದ್ದು, ಅದು ಅತ್ಯಂತ ಸರಳವಾದ ಮತ್ತು ಸೂಕ್ಷ್ಮವಾದ ಸಮಾಜವಿದ್ದಂತೆ. ಕುಟುಂಬವಿಲ್ಲದೇ ಸಮಾಜವಿಲ್ಲ. ಅದು ಮಾನವನ ಸಾಮಾಜಿಕ ಜೀವನದ ತಳಹದಿಯಾಗಿದೆ”.[೩]

ಕುಟುಂಬವು ಸಾಮಾಜಿಕ ಸಂಸ್ಥೆಗಳಲ್ಲಿ ಅತ್ಯಂತ ಮೂಲಭೂತ ಸ್ವರೂಪದ ಮತ್ತು ಮಹತ್ವ ಪೂರ್ಣವಾದ ಪಾತ್ರವನ್ನು ನಿರ್ವಹಿಸುವ ಸಂಸ್ಥೆ. ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು

ಮತ್ತು ಸ್ಥಿರತೆಯನ್ನು ತಂದುಕೊಡುವುದೇ ಕುಟುಂಬ. ಉಳಿದೆಲ್ಲಾ ಸಂಸ್ಥೆಗಳಿಗಿಂತಲೂ ಅದು ಹೆಚ್ಚು ಶಾಶ್ವತವೂ ಪ್ರಭಾವಿಯಾಗಿದೆ. ಕಾರಣ ಕುಟುಂಬವೂ ಸಮಾಜದ ಪ್ರತಿಬಿಂಬ ಎಂತಲೂ, ಕುಟುಂಬ ಮತ್ತು ಸಮಾಜ ಒಂದೇ ನಾಣ್ಯದ ಎರಡು ಮುಖಗಳು ಎಂತಲೂ ಗುರುತಿಸಲಾಗುತ್ತದೆ.

ಈಲಿಯಟ್ ಮತ್ತು ಮೆರಿಲ್ ಅವರು- "ಪತಿ-ಪತ್ನಿ ಮತ್ತು ಮಕ್ಕಳನ್ನು ಒಳಗೊಂಡಿರುವ ಜೈವಿಕ, ಸಾಮಾಜಿಕ ಘಟಕವೇ ಕುಟುಂಬ"[೭]

ಸಮ್ನರ್ ಮತ್ತು ಕೆಲ್ಲರ್ – "ರಕ್ತ ಸಂಬಂಧಿಗಳಿಂದ ಕೂಡಿದ ಮತ್ತು ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿ ಸೂಕ್ಷ್ಮ ಸಾಮಾಜಿಕ ಸಂಘಟನೆಯೇ ಕುಟುಂಬ"[೮]

ಮೆಕೈವರ ಮತ್ತು ಪೇಜರವರು – "ಸಂತತಿಯ ಉತ್ಪತ್ತಿ ಮತ್ತು ಶಿಶುಗಳ ಪಾಲನೆ-ಪೋಷಣೆಯ ಕಾರ್ಯಗಳನ್ನು ನಿರ್ವಹಿಸುವದರ ಸಲುವಾಗಿ ಲೈಂಗಿಕ ಸಂಬಂಧದ ಆಧಾರದ ಮೇಲೆ ರಚಿತವಾದ ಸಾಕಷ್ಟು ಖಚಿತವಾದ ಮತ್ತು ದೀರ್ಘಕಾಲ ಬಾಳುವ ಸಮೂಹವೇ ಕುಂಟುಂಬ"[೯]

ಸಮಾಜದ ಮೂಲಭೂತ ಘಟಕವಾಗಿರುವ ಕುಟುಂಬವು ಜೈವಿಕ ಘಟಕವಾಗಿದ್ದು, ರಕ್ತ ಸಂಬಂಧಿಗಳ ಸಮೂಹವಾಗಿದೆ. ವ್ಯಕ್ತಿಯ ವೈಯಕ್ತಿಕ ಜೀವನವನ್ನು ನಿಯಂತ್ರಿಸಿ ಆತನ ಗುಣ ದೋಷಗಳನ್ನು ದೂರ ಮಾಡಿ ಆತನ ಸಮಗ್ರ ಸುಧಾರಣೆಗೆ ಕಾರಣವಾಗಿರುವ ಸಂಸ್ಕಾರಗಳ ಕೇಂದ್ರ ಸ್ಥಾನವೇ ಕುಟುಂಬ.

**ಗೊಂದಲಿಗರ ಕುಟುಂಬ ವ್ಯವಸ್ಥೆ**

ಶಕ್ತಿದೇವತೆಯ ಆರಾಧಕರಾದ ಗೊಂದಲಿಗರು ಸಂಸ್ಕೃತಿಯ ಮೂಲದಲ್ಲಿ ಮಾತೃಪ್ರದಾನ ಕುಟುಂಬ ವ್ಯವಸ್ಥೆಯನ್ನು ಒಳಗೊಂಡಿತ್ತೆಂದು ಹೇಳಲಾಗುತ್ತದೆ. ಮೊದಲು ತಾಯಿ ನಂತರ ತಂದೆಗೆ ಪ್ರಾಧಾನ್ಯತೆ ನೀಡಲಾಗುತ್ತಿತ್ತು. ಅಲೆಮಾರಿಗಳಾಗಿದ್ದ ಗೊಂದಲಿಗರಲ್ಲಿ ಕುಟುಂಬದ ಎಲ್ಲ ಜವಾಬ್ದಾರಿಯನ್ನು ತಾಯಿಯೇ ನಿರ್ವಹಿಸುತ್ತಾ ಬಂದಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಗೊಂದಲಿಗರ ಸಮುದಾಯದ ಕುಟುಂಬಗಳು ಗುಂಪು ಗುಂಪಾಗಿ ನೆಲೆಸಿರುತ್ತವೆ. ಇವರಲ್ಲಿ ಮೊದಲಿನಿಂದಲೂ ಅವಿಭಕ್ತ ಕುಟುಂಬಗಳೇ ಇದ್ದವು. ಸಂಚಾರಿ ಜನಾಂಗವಾದ ಗೊಂದಲಿಗರು ಮದುವೆಯಾದ ಮೇಲೆ ಗಂಡ-ಹೆಂಡತಿ ಜೊತೆಯಾಗಿಯೇ ಅಲೆಯಬೇಕಾಗುತ್ತದೆ. ಸದಾ ಗಂಡ ಸುತ್ತುವಲ್ಲೆಲ್ಲಾ ಹೆಂಡತಿ ಹೋಗಲೆ ಬೇಕಾಗುತ್ತದೆ. ನೆಲೆಯಾಗಿ ಉಳಿದರೂ ಜೊತೆಗಾಗಿ ಉಳಿಯಬೇಕು. ಹೆಣ್ಣು ಅಡುಗೆ ಮಾಡಿಕೊಂಡು ಮಕ್ಕಳು ಮರಿಗಳನ್ನು ಮನೆಯಲ್ಲಿನ ಹಿರಿಯರನ್ನು ನೋಡಿಕೊಳ್ಳುವುದರ ಜೊತೆಗೆ ಮನೆಯಲ್ಲಿಯೇ ಕೌದಿ ಹೊಲೆಯುವ ಇಲ್ಲವೇ ಸಣ್ಣ ಪುಟ್ಟ ವ್ಯಾಪಾರಗಳನ್ನು ಮಾಡುತ್ತಾಳೆ.

ಈ ಸಮುದಾಯದಲ್ಲಿ ಬಹುಪಾಲು ಗಂಡಸರು ಸೇಂದಿ-ಸರಾಯಿ ಕುಡಿಯುವ ಚಟಕ್ಕೆ ಒಳಗಾಗಿದ್ದು, ಎಲೆ-ಅಡಿಕೆ, ತಂಬಾಕುಗಳನ್ನು ಗಂಡಸರು-ಹೆಂಗಸರು ಎನ್ನದೆ ಜಗೆಯುವುದು ಸಾಮಾನ್ಯವಾಗಿದೆ. ಕುಡಿತದ ಗಂಡಸರನ್ನು ನಿಯಂತ್ರಿಸಲು ಕೆಲವು ಸಂದರ್ಭದಲ್ಲಿ ಗಂಡ ಹೆಂಡರ ನಡುವೆ

ಉಂಟಾಗುವ ಜಗಳ ದೀರ್ಘಕ್ಕೆ ಹೋದರೂ ಬೇರೆ-ಬೇರೆಯಾಗುವುದಾಗಲಿ, ವಿಚ್ಛೇದನ ನೀಡುವುದಾಗಲಿ ಕಂಡುಬರುವುದು ಅಪರೂಪವಾಗಿದ್ದು, ಇದಕ್ಕೆ ಅವರಲ್ಲಿ ಕಾಣುವ ನ್ಯಾಯ ಪಂಚಾಯತಿ ವ್ಯವಸ್ಥೆಯೇ ಪ್ರಮುಖ ಕಾರಣ.

ಬದಲಾದ ಇಂದಿನ ಸ್ಥಿತಿಯಲ್ಲಿ ಕಂಡುಬರುವ ಗೊಂದಲಿಗರ ಕುಟುಂಬಗಳು ಪಿತೃಪ್ರದಾನ ವಾಗಿದ್ದು, ಅವಿಭಕ್ತ ಕುಟುಂಬಗಳಿಗಿಂತಲೂ ವಿಭಕ್ತ ಕುಟುಂಬಗಳೆ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತದೆ. ಸಮೀಕ್ಷೆಯ ಸಂದರ್ಭದಲ್ಲಿ ಕೆಲವೊಂದು ಅವಿಭಕ್ತ ಕುಟುಂಬಗಳನ್ನು ಕಾಣುತ್ತೇವೆ. ಪ್ರಾಚೀನ ಕಾಲದಿಂದಲೂ ಅಲೆಮಾರಿಗಳಾಗಿದ್ದ ಗೊಂದಲಿಗರು ಇಂದಿನ ಆಧುನಿಕ ಸನ್ನಿವೇಶಕ್ಕನುಗುಣ ವಾಗಿ ತಮ್ಮ ಕೌಟುಂಬಿಕ ವ್ಯವಸ್ಥೆಯನ್ನು ಜೀವನ ವಿಧಾನವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಕುಟುಂಬದ ಅಡಿಯಲ್ಲಿಯೇ ಬದುಕನ್ನು ಕಳೆಯುತ್ತಾ ಬಂದಂತಹ ಸ್ತ್ರೀಯರು ಹೆಚ್ಚುತ್ತಿರುವ ಕುಟುಂಬ ನಿರ್ವಹಣೆಗಾಗಿ ತಮ್ಮ ಪತಿಯ ಜೊತೆಗೆ ವ್ಯಾಪಾರ ವ್ಯವಹಾರದಲ್ಲಿ ತೊಡಗಿ ಕೊಂಡಿದ್ದಾರೆ. ಕುಟುಂಬದ ಅಡಿಯಲ್ಲಿ ಕಂಡುಬರುವ ಬಲವತ್ತರವಾದ ರಕ್ತ ಸಂಬಂಧದ ಎಳೆಗಳು ಕಳಚಿ ಬೀಳುತ್ತಿರುವು ದನ್ನು ಗಮನಿಸಬಹುದಾಗಿದೆ. ಕೌಟುಂಬಿಕ ವ್ಯವಸ್ಥೆಯಲ್ಲಿ ವೈಯಕ್ತಿಕತೆಯ ಪ್ರಭಾವವು ಕಂಡುಬರುತ್ತದೆ.

## ೩.೨ ಒಳಪಂಗಡ ವ್ಯವಸ್ಥೆ

'ಗೊಂದಲ' ಎಂಬುದು ಒಂದು ಪೂಜಾ ವಿಧಾನ. ತಮ್ಮ ಆರಾಧ್ಯ ದೈವವಾದ ಅಂಬಾ ಭವಾನಿಯ ಮುಂದೆ ಇಡಿ ರಾತ್ರಿ ಯಾವುದಾದರೊಂದು ಕಥೆಯನ್ನು ಹಾಡುತ್ತಾ, ಕುಣಿಯುತ್ತಾ, ಅಭಿನಯಿಸುತ್ತಾ, ಕೊನೆ-ಮೊದಲುಗಳಂತೆ ನಡು-ನಡುವೆಯೆ ದೇವಿಸ್ತುತಿ ಮಾಡುತ್ತಾ ಬೆಳಕು ಹರಿಸುವುದೇ ಈ ಪೂಜಾ ವಿಧಾನ. ಇದನ್ನು ಗೊಂದಲ ಹಾಕುವುದು ಎಂದು ಕರೆಯಲಾಗುತ್ತದೆ. ಇವರು ಯಾವ ಜಾತಿಯವರಾದರೂ ಆಗಿರಬಹುದು. ಅನೇಕ ಜಾತಿಯವರು ಸೇರಿ ಒಂದು ಧಾರ್ಮಿಕ ವೃತ್ತಿಗಾಯಕ ವರ್ಗವಾಗಿದೆ".[೬] ಈ ಧಾರ್ಮಿಕ ವೃತ್ತಿಯು ಬಹುಬೇಗ ಜನಪ್ರಿಯತೆಯನ್ನು ಪಡೆದುಕೊಂಡಿದ್ದರಿಂದ ಹಾಗೂ ಅದರಿಂದ ಜೀವನೋಪಾಯವು ಸುಲಭವೆನ್ನಿಸತೊಡಗಿದ್ದರಿಂದ ಬಹುಪಾಲು ಜನರು ದೀಕ್ಷೆಯನ್ನು ಪಡೆದು ಗೊಂದಲವನ್ನೆ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರು. ಪರಿಣಾಮ ಈ ಬಗೆಯ ಭಕ್ತ ಸಮೂಹವನ್ನು ಗೊಂದಲಿಗರೆಂದು ಜನರು ಗುರುತಿಸುತ್ತಾ ಬಂದಿದ್ದ ರಿಂದ, ವೃತ್ತಿಯೇ ಜಾತಿಯಾಗಿ ಪರಿಗಣಿಸಲ್ಪಟ್ಟಿತು. ಅಂದರೆ ವೃತ್ತಿ ಸೂಚಕ ಪದವೊಂದು ಜಾತಿ ಸೂಚಕವಾದ ಪದವಾಗಿ ಮಾರ್ಪಟ್ಟಿತು.

ಜಾತಿಯೊಳಗಿನ ಬೇರೆ-ಬೇರೆ ಕಾರಣಗಳಿಗಾಗಿ ಅಥವಾ ಸಾಮಾಜಿಕ-ಆರ್ಥಿಕ ಸ್ಥಾನಮಾನ ಗಳಲ್ಲಿ ವ್ಯತ್ಯಾಸದಿಂದಿರಬಹುದು ಇಲ್ಲವೇ ಅನೇಕರು ಹೇಳಿರುವ ಸಂದರ್ಶನದ ಹಿನ್ನೆಲೆಯಲ್ಲಿ ಶಿವಾಜಿ ಮಹಾರಾಜನ ಕಾಲದಲ್ಲಿ ಕೈಗೊಂಡ ಗುಪ್ತಚಾರಿಕೆಯ ಕೆಲಸದಲ್ಲಿ ಕೈಗೊಂಡ ವಿಭಿನ್ನ ವೃತ್ತಿಗಳ ಹಿನ್ನೆಲೆಯಲ್ಲಿ ಗೊಂದಲಿಗ ಜಾತಿ ವ್ಯವಸ್ಥೆಯಲ್ಲಿ ಹಲವಾರು ಉಪ ಪಂಗಡಗಳನ್ನು ಕಾಣುತ್ತೇವೆ.

ಈ ಉಪ ಪಂಗಡಗಳು ಕೈಗೊಂಡ ವೃತ್ತಿಗಳು ಬೇರೆ-ಬೇರೆಯಾಗಿದ್ದು, ಅವರ ನಡೆ-ನುಡಿಗಳಲ್ಲಿ ಆಚಾರ-ವಿಚಾರಗಳಲ್ಲಿ, ಆಹಾರದಲ್ಲಿ, ವೇಷ-ಭೂಷೆಗಳಲ್ಲಿ ಕೆಲವು ವ್ಯತ್ಯಾಸಗಳು ಇರುವುದು ಕಂಡು ಬರುತ್ತದೆ.

ಗೊಂದಲಿಗರಲ್ಲಿ ಕಂಡುಬರುವ ಉಪ ಪಂಗಡಗಳು

೧. ಗೊಂದಲ ವೃತ್ತಿಗಾಯಕರು

ಅ. ಕಥೋಪ ಜೀವಿಗಳು ಆ. ಬೀದಿ ಹಾಡುಗಾರರು

೨. ಭೂತೇರರು, ಎಣ್ಣೆ ಜೋಗಿಗಳು

೩. ಸಿಂಗದವರು

೪. ಬುಡಬುಡಿಕೆಯವರು

೫. ವಾಸುದೇವ

೬. ಜ್ಯೋತಿಷಿಗಳು

ಅ. ಹಸ್ತ ಸಾಮದ್ರಿಕ ಜ್ಯೋತಿಷ್ಯಗಳು ಆ. ಗಿಳಿ ಶಾಸ್ತ್ರದವರು

೭. ಭಾಟರು

೮. ಚಿತ್ರ ಪಟದವರು

ಗೋಂಧಳಿ, ಗೊಂದಲಿಗರು, ಬುಡಬುಡಿಕೆ, ಜ್ಯೋಷಿ, ದೋಸಿಗೇರ, ವಾಸುದೇವ, ಭಾಟ, ಬಾಗಡಿ ಹೀಗೆ ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಡುವ ಗೊಂದಲಿಗರಲ್ಲಿಯ ಉಪ ಪಂಗಡಗಳು ಕರ್ನಾಟಕದ ಉದ್ದಗಲಕ್ಕೂ ಕಂಡುಬರುವುದಿಲ್ಲ. ಮುಂಬೈ ಕರ್ನಾಟಕದ ಭಾಗದಲ್ಲಿ ಗೊಂದಲಿಗರು ವಾಸುದೇವ, ಜೋಷಿ, ಹೈದರಾಬಾದ ಕರ್ನಾಟಕದ ಭಾಗದಲ್ಲಿ ಜೋಷಿ, ದೋಸಿಗೇರ್, ಭಾಟ, ಭೂತ್ಯಾ ಎಣ್ಣೆ ಜೋಗಿ, ಗೋಂಧಳಿ, ಹಳೆಯ ಮೈಸೂರ ಭಾಗದಲ್ಲಿ ಗೊಂದಳಿ, ಬುಡಬುಡಿಕೆಯವರು ಎಂದೇ ಗುರುತಿಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಅವರು ಅನುಸರಿಸುವ ವೃತ್ತಿಗಳನ್ನು ಆಧರಿಸಿಯೇ ಕರೆದುಕೊಳ್ಳುತ್ತಿರುವುದನ್ನು ಗಮನಿಸಬಹುದು.

ಪ್ರಾರಂಭದಲ್ಲಿ ಒಂದೇ ಪಂಗಡದವರಾಗಿರಬಹುದಾಗಿದ್ದ ಗೊಂದಲಿಗರು ಉಪಜೀವನಕ್ಕಾಗಿ ಕೈಗೊಂಡ ವಿಭಿನ್ನ ವೃತ್ತಿಗಳ ಹಿನ್ನೆಲೆಯಲ್ಲಿ ಈ ರೀತಿಯ ಉಪ ಪಂಗಡಗಳು ಬೆಳೆದು ಬಂದಿರಬಹುದು.

ವೃತ್ತಿಯಿಂದ ಕಂಡುಬರುವ ಈ ಉಪಪಂಗಡಗಳು ಬೇರೆ-ಬೇರೆಯಾಗಿದ್ದರೂ ರಕ್ತ ಸಂಬಂಧವನ್ನು ಬೆಳೆಸುತ್ತಲೇ ಬಂದಿವೆ. ಆದಾಗ್ಯೂ ಸ್ಥಾನಮಾನಗಳ ಹಿನ್ನೆಲೆಯಲ್ಲಿ ಮೇಲು-ಕೀಳು ಎಂಬ ಭಾವನೆಗಳು ಕೆಲವೊಂದು ಸಂದರ್ಭಗಳಲ್ಲಿ ಕಂಡುಬರುತ್ತದೆ. ಬದಲಾದ ಇಂದಿನ ಸಂದರ್ಭದಲ್ಲಿ ಉಪಪಂಗಡಗಳು ಕೈಗೊಳ್ಳುತ್ತಾ ಬಂದ ವೃತ್ತಿಗಳು ತಮ್ಮ ಪ್ರಾಮುಖ್ಯತೆಯನ್ನು ಕಳೆದುಕೊಂಡಿದ್ದರ ಪರಿಣಾಮ ಅವುಗಳಲ್ಲಿ

ಕೆಲವು ಕಣ್ಮರೆಯಾಗುತ್ತಿವೆ ಎಂದೇ ಹೇಳಬಹುದಾಗಿದೆ. ಆದಾಗ್ಯೂ ಅಲ್ಲಲ್ಲಿ ಈ ಮೂಲ ವೃತ್ತಿಯಲ್ಲಿರುವ ಜನ ಸಮೂಹಗಳನ್ನು ಕಾಣಬಹುದಾಗಿದೆ. ಗೊಂದಲಿಗರು ರಾಜ್ಯ ಮಟ್ಟದಲ್ಲಿ ಮಾಡಿಕೊಂಡಿರುವ ಸಂಘಟನೆಯಿಂದ ತಮ್ಮ ಸಮಾಜದಲ್ಲಿ ಕಂಡು ಬರುವ ಎಲ್ಲಾ ಉಪ ಪಂಗಡಗಳನ್ನು ಒಂದುಗೂಡಿಸುವ ಪ್ರಯತ್ನಗಳನ್ನು ಮಾಡಿದ್ದು, ರಾಜ್ಯ ಮಟ್ಟದಲ್ಲಿ ತಮ್ಮ ಶಕ್ತಿ ಪ್ರದರ್ಶನ ಮಾಡುವ ಹಾಗೂ ಭಿನ್ನವಾಗಿ ಗುರುತಿಸಿಕೊಂಡಿರುವ ನಾವುಗಳೆಲ್ಲಾ ಒಂದೇ ಎಂಬ ಭಾವನೆಯನ್ನು ಮೂಡಿಸುವುದಾಗಿದೆ.

## ೩.೩ ಬೆಡಗುಗಳು

"ಜಗತ್ತಿನ ಎಲ್ಲ ಸಮುದಾಯಗಳಲ್ಲಿಯೂ ಜನರ ಸಮೂಹಗಳು ಹಲವಾರು ಬಗೆಯ ಬಂಧನಗಳಿಂದ ಬಂಧಿಸಲ್ಪಟ್ಟಿರುವುದು ಅಥವಾ ಬೆಸಯಲ್ಪಟ್ಟಿರುವುದನ್ನು ಗುರುತಿಸಬಹುದಾಗಿದೆ. ಈ ರೀತಿಯ ಬಂಧನಗಳಲ್ಲಿ ಹೆಚ್ಚು ಮೂಲಭೂತವಾದುದು, ಸಾರ್ವತ್ರಿಕವಾದುದು, ಮುಖ್ಯವಾದುದು ಎಂದರೆ ಸಂತಾನೋತ್ಪತ್ತಿ ಪ್ರವೃತ್ತಿಯನ್ನು ಆಧರಿಸಿರುವದೇ ಆಗಿದೆ. ಸಂತಾನೋತ್ಪತಿ ಪ್ರವೃತ್ತಿಯು ಪ್ರಮುಖವಾಗಿ ಎರಡು ಬಂಧನಗಳಿಗೆ ಅವಕಾಶ ಮಾಡಿ ಕೊಡುತ್ತದೆ. ಅವುಗಳೆಂದರೆ-

೧. ವೈವಾಹಿಕ ಸಂಬಂಧ

೨. ರಕ್ತ ಸಂಬಂಧ

ವಿವಾಹದ ಆಧಾರದ ಮೇಲೆ ಏರ್ಪಡುವ ಸಂಬಂಧವನ್ನು ವೈವಾಹಿಕ ಸಂಬಂಧ ಎನ್ನುತ್ತೇವೆ. ಹುಟ್ಟಿನ ಆಧಾರದ ಮೇಲೆ ಏರ್ಪಡುವ ಸಂಬಂಧವನ್ನು ರಕ್ತ ಸಂಬಂಧ ಎನ್ನುವರು. ಈ ರೀತಿ ವೈವಾಹಿಕ ಬಾಂಧವ್ಯ ಹಾಗೂ ರಕ್ತ ಸಂಬಂಧಗಳ ಆಧಾರದ ಮೇಲೆ ಜನರು ಬಾಂಧವ್ಯಗಳನ್ನುಳ್ಳವರಾಗಿರುವುದು ಬಂಧುತ್ವ ಎನಿಸಿಕೊಳ್ಳುತ್ತದೆ. ಬಂಧುತ್ವದ ಭಾವನೆಗಳು ಇತರ ಸಮುದಾಯ ಸಮಾಜಗಳಿಗಿಂತಲೂ ಹಿಂದುಳಿದ ಬುಡಕಟ್ಟು ಆದಿವಾಸಿ ಸಮುದಾಯದಲ್ಲಿ ಅತಿಯಾಗಿ ಕಂಡುಬರುತ್ತದೆ. ಏಕೆಂದರೆ ಅವರ ಒಡನಾಟ, ಸಂಬಂಧ ಬಂಧು-ಬಳಗದವರಲ್ಲಿಯೇ ಹೆಚ್ಚು ಸುತ್ತುವರೆದಿರುತ್ತವೆ".[೮] ಈ ಬಂಧುತ್ವದ ಆಧಾರದ ಮೇಲೆಯೇ ಬೆಡಗುಗಳ ಕಲ್ಪನೆ ಬೆಳೆದು ಬಂದಿರಬಹುದೆಂದು ಹೇಳಬಹುದಾಗಿದೆ.

"ಬಂಧುತ್ವದ ಆಧಾರದ ಮೇಲೆ ವ್ಯಕ್ತಿಗಳು ಪರಸ್ಪರ ಹತ್ತಿರದ ಸಂಬಂಧಿಕರು ಇಲ್ಲವೇ ದೂರದ ಸಂಬಂಧಿಕರಾಗಿರುವರೋ, ಇಲ್ಲವೇ ಇನ್ನು ದೂರದ ಸಂಬಂಧಿಗಳಾಗಿರುವವರು ಎಂಬುದರ ಆಧಾರದ ಮೇಲೆ-

೧. ಪ್ರಾಥಮಿಕ ಬಂಧುತ್ವ

೨. ಮಾಧ್ಯಮಿಕ ಬಂಧುತ್ವ

೩. ತೃತೀಯ ಬಂಧುತ್ವ

ಎಂದು ಮೂರು ಭಾಗಗಳಲ್ಲಿ ವಿಂಗಡಿಸಲಾಗುತ್ತದೆ".[೯]

೧. **ಪ್ರಾಥಮಿಕ ಬಂಧುತ್ವ** : ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಗೆ ನೇರವಾಗಿ ಸಂಬಂಧವುಳ್ಳವನಾಗಿದ್ದರೆ ಅದನ್ನು ಪ್ರಾಥಮಿಕ ಬಂಧುತ್ವ ಎನ್ನಲಾಗುತ್ತದೆ. ಉದಾಹರಣೆಗೆ ಪತಿ-ಪತ್ನಿ, ತಂದೆ-ಮಗ, ತಾಯಿ-ಮಗಳು, ತಂದೆ-ಮಗಳು, ತಾಯಿ-ಮಗ, ಸಹೋದರರು, ಸಹೋದರಿಯರು.

೨. **ಮಾಧ್ಯಮಿಕ ಬಂಧುತ್ವ** : ವ್ಯಕ್ತಿಗೆ ತನ್ನ ಪ್ರಾಥಮಿಕ ಬಂಧುಗಳ ಮೂಲಕ ಬಂಧುಗಳಾಗುವವರು ದ್ವಿತೀಯ/ಮಾಧ್ಯಮಿಕ ಬಂಧುಗಳು ಎನಿಸಿಕೊಳ್ಳುತ್ತಾರೆ. ಉದಾಹರಣೆಗೆ ವ್ಯಕ್ತಿಯ ಪತ್ನಿಯ ಸಹೋದರನ ಪತ್ನಿ, ವ್ಯಕ್ತಿಯ ಪತಿಯ ಸಹೋದರನ ಪತ್ನಿ, ಸಹೋದರಿಯ ಪತಿ, ಪತಿಯ ಸಹೋದರಿಯ ಪತಿ.

೩. **ತೃತೀಯ ಬಂಧುತ್ವ** : ಬಂಧುಗಳ ಬಂಧುಗಳು ತೃತೀಯ ಬಂಧುತ್ವದ ಬಂಧುಗಳಾಗುತ್ತಾರೆ. ಉದಾಹರಣೆಗೆ ಅಣ್ಣನ ಹೆಂಡತಿಯ ತಂದೆ-ತಾಯಿ, ತಮ್ಮನ ಹೆಂಡತಿಯ ತಂದೆ-ತಾಯಿ, ಅಕ್ಕ ಅಥವಾ ತಂಗಿಯ ಗಂಡನ ಬಂಧು-ಬಳಗದವರು".

ವೈವಾಹಿಕ ಬಾಂಧವ್ಯದ ಮೂಲಕ ಏರ್ಪಡುವ ಬಂಧುತ್ವ, ಕುಲದ ಬಂಧುತ್ವ, ಒಬ್ಬ ವರ ಒಂದು ವಧುವನ್ನು ವರಿಸಿ ವಿವಾಹ ಸಂಬಂಧ ಏರ್ಪಟ್ಟಾಗ ಹಲವಾರು ಬಗೆಯ ಸಂಬಂಧಗಳು ಬೆಳೆದು ಬರುವವು. ವಿವಾಹಕ್ಕೆ ಮುನ್ನ ಏನೇನೂ ಇಲ್ಲದಿದ್ದ ಸಂಬಂಧಗಳು ವಿವಾಹದ ಮರುಕ್ಷಣವೇ ಗಣನೀಯ ಪ್ರಮಾಣದಲ್ಲಿ ಬೆಳೆದು ಬರುವ ಸಂಬಂಧಗಳು ಕುಲದ ಬಂಧುತ್ವದ ವತಿಯಿಂದ ಉಂಟಾದವುಗಳು. ರಕ್ತಸಂಬಂಧದ ಮೂಲಕ ಏರ್ಪಡುವ ಬಂಧುತ್ವವನ್ನು ಸಗೋತ್ರ ಬಂಧುತ್ವ ಎನ್ನುತ್ತೇವೆ. ರಕ್ತ ಸಂಬಂಧದಡಿಯಲ್ಲಿ ಬರುವ ತಂದೆ-ಮಗ, ತಾಯಿ-ಮಗಳು, ತಂದೆ-ಮಗಳು, ತಾಯಿ-ಮಗ, ಸಹೋದರರು, ಸಹೋದರಿಯರು, ಈ ರೀತಿಯ ಬಂಧುತ್ವದಲ್ಲಿ ಒಳಗೊಳ್ಳುವರು.

ಕುಲದ ಬಂಧುತ್ವವು ಕುಲ, ಬಳಿ ಅಥವಾ ಬೆಡಗುಗಳ ಆಧಾರವನ್ನು ಹೊಂದಿರುತ್ತವೆ. ಸಾಮಾನ್ಯವಾಗಿ ಕುಲ, ಬಳಿ ಅಥವಾ ಬೆಡಗು- "ಒಬ್ಬ ನಿರ್ದಿಷ್ಟ ಪೂರ್ವಜರಿಂದ ಉದ್ಭವಿಸಿದ ಸಂಬಂಧಿಕರ ಒಂದು ಸಮೂಹವಾಗಿದೆ".[೧೧] ಇನ್ನೊಂದು ರೀತಿಯಲ್ಲಿ 'ಒಂದು ಸಮುದಾಯದಲ್ಲಿರುವ ವಿಶಿಷ್ಟ ಘಟಕಗಳಿಗೆ ಬೆಡಗುಗಳು' ಎಂದು ಹೇಳಲಾಗುತ್ತದೆ. ಈ ದೃಷ್ಟಿಯಲ್ಲಿ ಒಂದೇ ಕರಳು ಬಳ್ಳಿಯವರು ಒಂದು ಬೆಡಗಿನವರು ಎನ್ನುವದು ಬೆಳೆದು ಬಂದಿದೆ. ವಿವಿಧ ಬೆಡಗುಗಳು ರಕ್ತ ಸಂಬಂಧದ ಬೇರೆ-ಬೇರೆ ಗುಂಪುಗಳನ್ನು ಸೂಚಿಸುತ್ತವೆ. ಬುಡಕಟ್ಟು, ಅಲೆಮಾರಿ ಸಮುದಾಯಗಳಲ್ಲಿ ವೈವಾಹಿಕ ಸಂಬಂಧಗಳನ್ನು ಬೆಳೆಸುವಾಗ ಕುಲ, ಬಳಿ ಅಥವಾ ಬೆಡಗುಗಳಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಾರೆ. ಸಾಮಾನ್ಯವಾಗಿ ಒಂದೇ ಬೆಡಗಿನವರ ಮಧ್ಯದಲ್ಲಿ ಸಹೋದರ ಸಂಬಂಧವಿರುತ್ತದೆ. ಹೀಗಾಗಿ ಬೇರೆ ಬೇರೆ ಬೆಡಗಿನವರ ಜೊತೆಗೆ ವಿವಾಹ ಸಂಬಂಧ ಏರ್ಪಡಿಸಿವುದು ಕಡ್ಡಾಯ. ಅಂದರೆ ಪ್ರತಿ ಸಮುದಾಯದ ಬಂಧುತ್ವದಲ್ಲಿ ಕೆಲವಂದು ನಿರ್ಬಂಧಿತ ರೂಢಿಗಳು ಬೆಳೆದು ಬಂದಿದ್ದು ಒಂದೇ ಬೆಡಗಿಗೆ ಸೇರಿದವರ ನಡುವೆ ವಿವಾಹ ಸಂಬಂಧಗಳನ್ನು ನಿರ್ಬಂಧಿಸಲಾಗಿದೆ.

ಶಕ್ತಿದೇವತೆ ಅಂಬಾಭವಾನಿಯ ಹೆಸರಿನಲ್ಲಿ ಗೊಂದಲಿ ಪೂಜೆಯನ್ನು ಮಾಡುತ್ತಾ ಬಂದವರನ್ನೆ ಗೊಂದಲಿಗರೆಂದು, ಇದನ್ನು ಯಾವದೇ ಜಾತಿ-ಸಮುದಾಯಕ್ಕೆ ಸಿಮೀತವಾಗಿರದೆ ಯಾವದೇ ಸಮುದಾಯದವರು ಕೈಗೊಳ್ಳಬಹುದಾಗಿತ್ತು. ಮುಂದುವರೆದಂತೆಲ್ಲಾ ಇನ್ನುಳಿದವರಿಗೆ ಅವಕಾಶ ಮಾಡಿಕೊಡದೆ ಗೊಂದಲಪೂಜಾ ವಿಧಾನವನ್ನೇ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡ ಸಮುದಾಯ ವೊಂದು ಪ್ರತ್ಯೇಕ ಜಾತಿಯಾಗಿ ಮಾರ್ಪಟ್ಟಿತು. ಈ ರೀತಿ ಗುರುತಿಸಿಕೊಂಡ ಗೊಂದಲಿಗ ಸಮುದಾಯ ದಲ್ಲಿ ಬೆಡಗುಗಳ ಕಲ್ಪನೆಯು ಬೆಳೆದು ಬಂದಿತು.

ಸೈಯದ್ ಸಿರಾಜ್ ಉಲ್ ಹಸನ್ ಅವರು- "The Castes and Tribes of H.E.H The Nizam's Dominions" ತಮ್ಮ ಗ್ರಂಥದಲ್ಲಿ- 'ಕದಮರ್ರೈ ಮತ್ತು ರೆನುರ್ರೈ ಎಂಬ ಎರಡು ಉಪ ಜಾತಿಗಳಲ್ಲಿ ಗೊಂದಲಿಗರು ವಿಭಾಗಿಸಲ್ಪಟ್ಟಿದ್ದಾರೆ. ಈ ಎರಡು ಉಪ ಜಾತಿಗಳಲ್ಲಿ ಪರಸ್ಪರ ವಿವಾಹ ವಾಗುವದಾಗಲಿ ಅಥವಾ ಕೂಡಿ ಊಟ ಮಾಡುವದಾಗಲಿ ಆಗುವದಿಲ್ಲಾ. ಈ ಎರಡು ವರ್ಗಗಳು ತಮ್ಮ ಭಿಕ್ಷಾಟನಾ ವಿಶಿಷ್ಟವಾದ ಲಾಂಛನಗಳಿಂದ ಗುರುತಿಸಲ್ಪಡುತ್ತಾರೆ. ಮೊದಲಿನವರು ಕವಡೆಸರವನ್ನು, ಎರಡನೆಯವರು ಒಂದರ ನಂತರ ಒಂದು ಕವಡೆಗಳು ಹಾಗೂ ರೇಷ್ಮೆ ಗೊಂಡೆಗಳುಳ್ಳ ಸರವನ್ನು ಧರಿಸುತ್ತಾರೆ. ಇಬ್ಬರು ಶಿವನ ಸತಿ ಭವಾನಿಯ ಆರಾಧಕರು. ಕದಮರ್ರೈಯರು ದೇವತೆಯ ಪಾದದಲ್ಲಿ (ಮರಾಠಿ ಕದಮ) ಬೇಡುತ್ತಾರೆ. ಈ ಸುಯೋಗದಿಂದ ರೇನುರ್ರೈಯರು ನಿರಾಕರಿಸಲ್ಪಟ್ಟಿದ್ದಾರೆ. ಅಕ್ಕರಮಾಸೆಗಳೆಂಬ ಇನ್ನೊಂದು ವರ್ಗ ಗೊಂದಲಿಗರಲ್ಲಿದ್ದು ಬಹುಶಃ ಮೇಲಿನ ಎರಡು ಉಪಜಾತಿಗಳ ಅನೈತಿಕ ಸಂತಾನವಾಗಿರಬಹುದು ಎಂಬ ಮಾಹಿತಿಯನ್ನು ಕೊಡುವುದರ ಮೂಲಕ ಗೊಂದಲಿಗರಲ್ಲಿ ಕಂಡುಬರುವ ಮೂಲದಲ್ಲಿರಬಹುದಾದ ಉಪಪಂಗಡಗಳ ಬಗ್ಗೆ ವಿವರಣೆಯನ್ನು ಕೊಟ್ಟಿದ್ದಾರೆ'.

ಸುಭದ್ರ ಚೆನ್ನಾರವರ "Encyclopaedia of Indian Tribes and Castes" ಎಂಬ ಸಂಪಾದಿತ ಗ್ರಂಥದಲ್ಲಿ- 'ಗೊಂದಲಿಗರು ಬ್ರಾಹ್ಮಣ, ಧಾಂಗರ, ಮರಾಠ, ಕುಂಬಾರ, ಕದಮರ್ರೈ, ರೇಣುಕರ್ರೈ, ಮಾಲಿ, ಅಕ್ಕರಮಾಸೆ ಎಂಬ ಒಳಬಾಂಧವ್ಯ ಸಮೂಹಗಳಲ್ಲಿ ವಿಂಗಡಿತರಾಗಿದ್ದಾರೆ. ಈ ಗುಂಪುಗಳ ಪರಸ್ಪರರಲ್ಲಿ ಊಟ ಅಥವಾ ವಿವಾಹ ಮಾಡುವುದಿಲ್ಲ. ಕೊನೆಯ ಪಂಗಡವನ್ನು ಹೊರತುಪಡಿಸಿ, ಎಲ್ಲ ಪಂಗಡದವರು ಈ ಕೆಳಗೆ ವರ್ಗೀಕರಿಸಿದಂತೆ ನೃತ್ಯ ಮಾಡುತ್ತಾರೆ. ಬ್ರಾಹ್ಮಣ ಗೊಂದಲಿಗರು ಭಾಡೆನ್ ಅಥವಾ ಇತರ ಗೊಂದಲಿಗರಂತೆ ಕೆಳಾರ್ದ ಗಡಿಗೆಯಲ್ಲಿ ಉರಿವ ಪದಾರ್ಥಗಳಿಗೆ ಬೆಂಕಿ ಹಚ್ಚಿ ನರ್ತಿಸುತ್ತಾರೆ. ಕದಮರ್ರೈ ಮತ್ತು ರೇಣುಕರ್ರೈ ತಾವೇ ನಿಜವಾದ ಗೊಂದಲಿಗರೆಂದು, ಇತರರು ಕೇವಲ ಸಂಗೀತಗಾರರು ಎಂದು ಹೇಳಿಕೊಳ್ಳುತ್ತಾರೆ'.

**ಹೊರ ಬಾಂಧವ್ಯ ಪಂಗಡಗಳು**

ಹೊರ ವಿವಾಹ ಪಂಗಡಗಳ ಜಾತಿಗಳ ಅವರ ಅಡ್ಡ ಹೆಸರಿನಂತೆ ಇದೆ. ಒಂದೇ ಅಡ್ಡ ಹೆಸರನ್ನು ಹೊಂದಿರುವ ವ್ಯಕ್ತಿಗಳು ಪರಸ್ಪರ ವಿವಾಹವಾಗುವಂತಿಲ್ಲ. 'ದೇವಕ್' ಒಂದೇ ತೆರನಿದ್ದರೂ ವಿವಾಹ ಮಾಡಿಕೊಳ್ಳುವಂತಿಲ್ಲ. ಹಿಂದಿನ ಸಂಬಂಧ ಗುರುತಿಸಲ್ಪಡದ ವ್ಯಕ್ತಿಗಳು ಪರಸ್ಪರ ವಿವಾಹವಾಗುವಂತಿಲ್ಲ.

ಮರಾಠಾ ಕುಣಬಿಗಳಂತೆಯೇ ಗೊಂದಲಿ ಹೊರ ಬಾಂಧವ್ಯ ವಿವಾಹ ಪಂಗಡಗಳಿವೆ ಎಂದು ಹೇಳಲಾಗುತ್ತಿದ್ದು, ಭಿಕ್ಷೆ ಬೇಡುವ ವೃತ್ತಿಯನ್ನು ಹೊಂದಿದ್ದರು ಎನ್ನುವ ಕಾರಣಕ್ಕೆ ಅವರಿಂದ ಬೇರ್ಪಟ್ಟವರು. ಅವರ ಕೆಲ ಹೊರ ಬಾಂಧವ್ಯ ವಿವಾಹ ಪಂಗಡಗಳನ್ನು ನೋಡಲಾಗಿ-

| | | | |
|---|---|---|---|
| ಗಾಯಕವಾಡ | ಜತಲ | ಕಾಪ್ಸೆ | ಹತ್ಕರ |
| ಮಾಳಿ | ಸೊಂಕರ | ಬಮಾನೆ | ಶಿಕಳ |
| ಪವಾರ | ತೊಡಕರ | ಸೋನವಾನೆ | ಖಾಂಬಲ |

ಈ ರೀತಿ ಜಾತಿ-ಸಮುದಾಯಗಳ ಕುರಿತು ಅಧ್ಯಯನ ಮಾಡಿದ ದಾರ್ಶನಿಕರು, ವಿಶ್ವಕೋಶಗಳಲ್ಲಿ ಗೊಂದಲಿಗರಲ್ಲಿ ಕಂಡು ಬಂದ ಉಪಪಂಗಡಗಳು ಅಥವಾ ಬೆಡಗಗಳ ಕುರಿತು ವಿವರಣೆ ನೀಡುತ್ತಾರೆ.

ವಿಷಯಕ್ಕೆ ಸಂಬಂಧಿಸಿದಂತೆ ಮಾಡಿದ ಕುಟುಂಬಗಳ ಸಮೀಕ್ಷಾ ವರದಿ ಪ್ರಕಾರ ಹಾಗೂ ಗೊಂದಲಿಗ ಹಿರಿಯರು ಸಂದರ್ಶನದಲ್ಲಿ ವ್ಯಕ್ತಪಡಿಸಿದ ವಿವರಣೆಗಳ ಪ್ರಕಾರ ಗೊಂದಲಿಗ ಸಮುದಾಯದ ಸಾಮಾಜಿಕ ಸಂಘಟನೆ, ವೈವಾಹಿಕ ಸಂಬಂಧಗಳಲ್ಲಿ ಬೆಡಗುಗಳ ಪಾತ್ರ ಮಹತ್ವದ್ದಾಗಿದೆ. ಬುಡಬುಡಕಿ, ಅರೆಪಂಚಾಗ, ಸಿಂಗದವರು, ಭೂತೇರು, ಚಿತ್ರವೃತ್ತಿಯರು, ಭಾಟರು ಮತ್ತು ವಾಸುದೇವ ಪಂಗಡಗಳನ್ನು ಒಳಗೊಂಡ ಗೊಂದಲಿಗರಲ್ಲಿ ಸಮೀಕ್ಷೆ ಸಂದರ್ಭದಲ್ಲಿ ೭೨ ಬೆಡಗುಗಳ ಮಾಹಿತಿ ದೊರೆಯುತ್ತಿದೆ. ಆದರೆ ವ್ಯಕ್ತಪಡಿಸಿದ ಹಿರಿಯರ ಅಭಿಪ್ರಾಯ ನಮ್ಮಲ್ಲಿ ೯೬ ಬೆಡಗುಗಳು ಇವೆ ಎಂಬುದನ್ನು ವ್ಯಕ್ತಪಡಿಸುತ್ತಾರೆ. ಜೊತೆಗೆ ೪ ಪಂಥಗಳು ಕಂಡುಬರುತ್ತಿದ್ದು, ಅವು ದೇಶಕ್ ಪಂಥ, ಕಲ್ಯಾಣ ಪಂಥ, ತೋರಸಲ್ ಪಂಥ, ಗುಳಗುಳಿ ಪಂಥ. ಈ ನಾಲ್ಕು ಪಂಥಗಳಲ್ಲಿಯೇ ಬೆಡಗುಗಳನ್ನು ಹಂಚಲ್ಪಟ್ಟಿರುತ್ತದೆ.

**ಕೋಷ್ಟಕ ೩.೧ ದೇಶಕ್ ಪಂಥ, ಕಲ್ಯಾಣ ಪಂಥ, ತೋರಸಲ್ ಪಂಥ ಹಾಗೂ ಗುಳಗುಳಿ ಪಂಥಗಳಲ್ಲಿರುವ ಬೆಡಗುಗಳು**

**೧. ಕಲ್ಯಾಣ ಪಂಥ**

| ಮಾನದಾರರು | ಭೋರಾತ್ | ಗುರುರಾವತ್(ಗುರು) | ಕಾಂಬಳರಾವತ್ | ನವಲಕೆರೆ |
|---|---|---|---|---|
| ಗೋತ್ರ | ಗುಡುಕರ್ | ದುರವೆ | ಉಗಳೇ/ಉಗಡೆ | ಇಂಗಳೆ |
| | ಬಡಗಿ | ಸುಗತೆ | ಕಾಳೆ | ಅಟಕ/ ಆಡೇಕರ್ |
| | ಟೀಕೆ | ಪಾಚಂಗಿ | ಭೋಳೆ | ಹಿರೆಳ್ಳಿ |
| | | ಗಾಗಡೆ/ಗಾಗಲೆ | | ಸಾಗರ |

## ೨. ದೇಶಕ್ ಪಂಥ

| ಮಾನದಾರರು | ವಾಸ್ಟರ್ | ವಾಕೋಡೆ | ಮುಖ್ಯೆ | ಭಾಗವಂತ |
|---|---|---|---|---|
| ಗೋತೆ | ದಶಗುಂಟೆ/ ರಸಗುಂಟೆ | ಗೋಗರೆ | ಬೋಟ್ಲಾಸ್ | ಕಾಕಡೆ |
| | ವಡಗನ್ | ಸಾಳುಂಕೆ | ಏಡೆ | ಧುಮಾಳೆ |
| | ಲಾಖೆ/ಲಾಗ್ವೆ | ರೇಣುಕೆ | ಸಿಂಗನಾಥ | ವಿಷ್ಣು |
| | ನಾಯ್ಕಲ್ | ಮುತ್ತುಡಕರ್ | ಚೋರಗೆ/ದುರ್ವೆ | ಗೋತ್ರಾಳೆ |

## ೩. ತೋರಸಲ್ ಪಂಥ

| ಮಾನದಾರರು | ಗಣಾಚಾರಿ | ಮೋರ್ಕರ್ | ಪಾರಗೆ | ಸಿಂದಗಾನ |
|---|---|---|---|---|
| ಗೋತೆ | ಉದಬೋಲೆ | ಚವ್ಹಾಣ | ದವಡತ್ | ಗಾಯಕವಾಡ |
| | ಬಾಗಡೆ | ದಡೆ/ಜಾದವ್ | ಪವಾರ | ಬಾಗಲೆ |
| | ವಾಡೇಕರ್ | ಠಾಕೂರ್ | ಕಾವಡೆ | ಬಂಡಾರಿ |

## ೪. ಗುಳಗುಳಿ ಪಂಥ

| ಮಾನದಾರರು | ವರವಂಟಾ | ಚುಲವಂಟಾ | ಹುಚ್ಚಣಿ | ಉಭಾಳೆ |
|---|---|---|---|---|
| ಗೋತೆ | ಧೋತೆ | ಔಧೂತೆ | ಸೂಸಾಣಿ | ಪಾಂಡ್ರೆ ಮಿಶ್ಯಾ |

ಈ ರೀತಿಯಲ್ಲಿರುವ ೪ ಪಂಥಗಳಲ್ಲಿ ಬರುವ ಮಾನದಾರರು ತಮ್ಮ ಅಧೀನದಲ್ಲಿ ಬರುವ ಬೆಡಗಿನವರ ಮುಖ್ಯಸ್ಥರಾಗಿ ನ್ಯಾಯ ಪಂಚಾಯತಿಯ ಮುಖಂಡರಾಗಿ ಕಾರ್ಯನಿರ್ವಹಿಸುತ್ತಾರೆ. ಈ ರೀತಿ ಕಂಡುಬರುವ ಬೆಡಗುಗಳು ಗೊಂದಲಿಗರಲ್ಲಿ ಸಾಮಾನ್ಯವಾಗಿ ತಮ್ಮ ಬೆಡಗುಗಳ ಹೆಸರನ್ನೇ ತಮ್ಮ ಮನೆತನದ ಹೆಸರಾಗಿ ಬಳಸಿರುವುದು ಕಂಡುಬರುತ್ತದೆ. ಆದರೆ ಗೊಂದಲಿಗರಲ್ಲಿಯ ಬೇರೆ-ಬೇರೆ ಬೆಡಗಿನ ಅಥವಾ ಮನೆತನದ ಹೆಸರನ್ನು ಹೊಂದಿರುವ ಕುಟುಂಬಗಳು ಬದಲಾದ ಇಂದಿನ ಸಂದರ್ಭದಲ್ಲಿ  ಸಾರ್ವತ್ರಿಕವಾಗಿ ಗುರುತಿಸುವ ಮತ್ತು ಸಂಘಟನೆಯ ದೃಷ್ಟಿಯಿಂದ ಗೊಂಧಳಿ ಎಂದು ಇಟ್ಟುಕೊಂಡಿರುವುದು ಕಂಡು ಬರುತ್ತದೆ.

ಗೊಂದಲಿಗರಲ್ಲಿ ಕಂಡುಬರುವ ವಿಭಿನ್ನ ಬೆಡಗುಗಳು ರಕ್ತ ಸಂಬಂಧವನ್ನು ಹಾಗೂ ವೈವಾಹಿಕ ಸಂಬಂಧವನ್ನು ಬೆಳೆಸುವಲ್ಲಿ ಸಹಾಯಕವಾಗಿದೆ. ಒಂದೇ ಬೆಡಗಿನವರು ನಾವು ಅಣ್ಣ-ತಮ್ಮಂದಿರು ಎನ್ನುವ ಭಾವನೆಯಿಂದ ಒಂದೇ ಬೆಡಗಿನ ಒಳಗೆ ವಿವಾಹ ಸಂಬಂಧ ಏರ್ಪಡಿಸುವ ಹಾಗಿಲ್ಲ ಅಥವಾ ಬೆಳೆಸುವ ಹಾಗಿಲ್ಲ. ಬೇರೆ ಯಾವುದೆ ಬೆಡಗಿನವರ ಜೊತೆಗೆ ವಿವಾಹ ಸಂಬಂಧವನ್ನು ಬೆಳೆಸಬಹುದಾಗಿದೆ.

## ೩.೪ ರಕ್ತ ಸಂಬಂಧ

ಗೊಂದಲಿಗರು ಪ್ರಾರಂಭದಲ್ಲಿ ಮಾತೃಪ್ರದಾನ ಕುಟುಂಬವನ್ನು ಹೊಂದಿದ್ದರು. ಆದಾಗ್ಯೂ ವಂಶಾವಳಿಗಳ ಹಿನ್ನೆಲೆಯಲ್ಲಿ ಗುರುತಿಸುವದಾದರೆ ಗೊಂದಲಿಗರಲ್ಲಿ ಪಿತೃವಂಶೀಯ ನೆಲೆಗಳನ್ನು ಕಾಣುತ್ತೇವೆ. ಸಾಮಾನ್ಯವಾಗಿ ಈ ಒಂದು ಸಮುದಾಯದ ಸದಸ್ಯರೆಲ್ಲರೂ, ರಕ್ತ ಸಂಬಂಧಿಗಳೇ ಆಗಿರುವುದರಿಂದ ಅವರಲ್ಲಿ ಸಹಜವಾಗಿ ಪ್ರೀತಿ-ವಿಶ್ವಾಸಗಳಿಂದ ಕೂಡಿದ ಸಹಕಾರ ಮತ್ತು ಸಂಬಂಧಗಳು ಬೆಳೆದಿರುತ್ತವೆ. ಗೊಂದಲಿಗರಲ್ಲಿ ಪಿತೃಪ್ರದಾನ ಕುಟುಂಬಗಳೇ ಕಂಡು ಬರುವುದರಿಂದ ಕೌಟುಂಬಿಕವಾಗಿ ರಕ್ತ ಸಂಬಂಧವನ್ನು ತಂದೆಯ ಮೂಲಕವೇ ಗುರುತಿಸಿಕೊಳ್ಳುತ್ತಾರೆ. ವಂಶ, ಕುಲ, ಗೊತ್ರ, ಬೆಡಗು, ಮನೆ ದೇವರು, ವಂಶಾವಳಿ, ಏಕರಕ್ತ ಸಂಬಂಧ, ವಿವಾಹ ಮೊದಲಾದ ಸಾಮಾಜಿಕ ಅಂಶಗಳು ರಕ್ತಸಂಬಂಧದ ಆಧಾರದ ಮೇಲೆಯೇ ರೂಪ ಗೊಂಡಿರುತ್ತವೆ. ತಂದೆ-ತಾಯಿ, ಅಕ್ಕ-ತಂಗಿ, ಅಣ್ಣ-ತಮ್ಮ, ಚಿಕ್ಕಪ್ಪ-ದೊಡ್ಡಪ್ಪ, ಅತ್ತೆ-ಮಾವ ಮುಂತಾದವರ ಸುತ್ತಿರುವ ಕುಟುಂಬವು ರಕ್ತಸಂಬಂಧ ಕೇಂದ್ರಿಕೃತ ವಾಗಿರುತ್ತದೆ. ಈ ಹಿನ್ನೆಲೆಯಲ್ಲಿ 'ಪ್ರಾರಂಭದಿಂದಲೂ ಬದುಕು ಸಾಗಿಸುತ್ತಾ ಬಂದಿರುವ ಅಲೆಮಾರಿಗಳಾದ ಗೊಂದಲಿಗರು ಗ್ರಾಮೀಣ-ನಗರ ಸಂಸ್ಕೃತಿಯ ಪ್ರಭಾವಕ್ಕೆ ಸಿಗದೆ ತಮ್ಮದೇ ಆದ ಸಂಸ್ಕೃತಿಯನ್ನು ಪ್ರತ್ಯೇಕವಾಗಿಯೇ ಉಳಿಸಿಕೊಂಡು ಬಂದವರಾಗಿದ್ದು, ರಕ್ತ ಸಂಬಂಧಕ್ಕೆ ಹೆಚ್ಚು ಮಹತ್ವಕೊಡುತ್ತಾರೆ'.

ಬೆಡಗುಗಳ ಪ್ರಾಧಾನ್ಯತೆ ಇರುವ ಗೊಂದಲಿಗರಲ್ಲಿ ಅವುಗಳ ಅಧಾರದ ಮೇಲೆಯೆ ರಕ್ತಸಂಬಂಧ ವನ್ನು ಏರ್ಪಡಿಸಿಕೊಳ್ಳುತ್ತಾರೆ. ಅಂದರೆ ರಕ್ತ ಸಂಬಂಧವನ್ನು ಏರ್ಪಡಿಸಿಕೊಳ್ಳ ಬೇಕೆಂದರೆ ಬೆಡಗುಗಳು ಮುಖ್ಯವಾಗಿರುತ್ತವೆ. ಇವರಲ್ಲಿ ಒಂದೆ ಬೆಡಗಿಗೆ ಸೇರಿದವರೆಲ್ಲಾ ಸಹೋದರ ಸಂಬಂಧಿಗಳಾಗಿರುತ್ತಾರೆ. ಹೀಗಾಗಿ ತಮ್ಮ ವೈವಾಹಿಕ ಸಂಬಂಧಗಳನ್ನು ಯಾವುದೇ ಸಂದರ್ಭದಲ್ಲಿ ಭಿನ್ನ ಬೆಡಗಿನವರ ಜೊತೆಗೆ ಏರ್ಪಡಿಸಿಕೊಳ್ಳುತ್ತಾರೆ. ಏಕಪತ್ನಿತ್ವ ವಿವಾಹಕ್ಕೆ ಪ್ರಾಧಾನ್ಯತೆ ಕೊಟ್ಟ ಗೊಂದಲಿಗರು ಯಾವುದೇ ಸಂದರ್ಭದಲ್ಲಿ ಅಂತರಜಾತಿ ವಿವಾಹಕ್ಕೆ ಎಳ್ಳಷ್ಟು ಅವಕಾಶ ಕೊಟ್ಟಿಲ್ಲ.

ಅಂತರ್ ಜಾತಿ ವಿವಾಹಗಳು ಯಾವದೇ ಸಂದರ್ಭದಲ್ಲಿ ನಡೆದರೂ ಸಮುದಾಯದ ಅಂತಹ ವಿವಾಹಿತರ ಪೋಷಕರನ್ನು ಪಂಚಾಯತಿಗೆ ಕರೆಯಿಸಿ ಸಕಾರಣಗಳ ಆಧಾರದ ಮೇಲೆ ಅವರಿಗೆ ದಂಡವನ್ನು ನಿಗದಿಪಡಿಸಿ ವಸೂಲಿ ಮಾಡುವರು. ಆಗ ಬೇರೆ ಜಾತಿಯ ಆ ಕನ್ಯೆಯನ್ನು ಸಮುದಾಯ ದವರೇ ಎಂದು ಪರಿಗಣಿಸುತ್ತಾರೆ.

## ೩.೫ ಮನೆಗಳ ರಚನೆ

ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಪ್ರಮುಖವಾಗಿ ಕಂಡುಬರುವದು ಆಹಾರ, ಬಟ್ಟೆ, ವಸತಿ. ಬದುಕಿಗಾಗಿ ಆಹಾರ, ಮಾನ ಮುಚ್ಚಿಕೊಳ್ಳಲು ಬಟ್ಟೆ ಹಾಗೆಯೇ ಬಿಸಿಲು ಗಾಳಿ ಮಳೆ ಹಾಗೂ ನೈಸರ್ಗಿಕ ವೈಪರೀತ್ಯಗಳಿಂದ ಜೊತೆಗೆ ಆಗಿರುವ ಆಯಾಸ, ಬಳಲಿಕೆಗಳಿಂದ ತನ್ನನ್ನು ತನ್ನ ಆಶ್ರಯಿಸಿದವರನ್ನು ರಕ್ಷಿಸಿಕೊಳ್ಳಲು ವಸತಿ ಅವಶ್ಯಕವಾದದು. ವಾಸ್ತವ್ಯಕ್ಕಾಗಿ ನಿರ್ಮಿಸಿಕೊಳ್ಳುವ

ಮಣ್ಣು ಕಲ್ಲು ಕಟ್ಟಿಗೆಗಳ ಕಟ್ಟಡವಾಗಿರಬಹುದು, ತಗಡಿನಿಂದ ರೂಪಗೊಂಡಿರುವು ದಾಗಿರಬಹುದು, ಗುಡಿಸಲಿನ ರೂಪದಲ್ಲಿರಬಹುದು, ಅವುಗಳನ್ನು ಮನೆಗಳೆಂದೇ ಕರೆಯುತ್ತೇವೆ. ಮನೆಯನ್ನುವುದು ಕೇವಲ ಕಟ್ಟಡಗಳ ರಚನೆಯವಲ್ಲ. ಅದು ಭಾವನಾತ್ಮಕ ಸಂಬಂಧಗಳನ್ನು ಬೆಸೆಯುವ, ಬೆಸೆದಿರುವ ಪೂರ್ವಜರ ಹಾಗೂ ಈಗಿನ ಸದಸ್ಯರ ಸಂಬಂಧಗಳ ತಾಣ.

ವ್ಯಕ್ತಿಗಳು, ಸಮುದಾಯಗಳು ಹೊಂದಿರುವ ವಾಸ್ತವ್ಯದ ನೆಲೆಗಳು ಆ ಸಮುದಾಯದ ವ್ಯಕ್ತಿಯ ಸಾಮಾಜಿಕ-ಆರ್ಥಿಕ ಸ್ಥಿತಿಗತಿಗಳನ್ನು, ಸ್ಥಾನಮಾನವನ್ನು ಅರ್ಥೈಸಿಕೊಳ್ಳಲು ಸಾಧ್ಯವಾಗಿರುವದು. ಜೊತೆಗೆ ಒಂದು ಸಮುದಾಯವನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾಗಿ ಅರ್ಥ ಮಾಡಿಕೊಳ್ಳ ಬೇಕೆಂದರೆ ಸಮಾಜದಲ್ಲಿ ಆ ಸಮುದಾಯದ ಸ್ಥಾನಗಳನ್ನು ಆ ಊರಿನ ಯಾವ ಭಾಗದಲ್ಲಿ ಹೇಗೆ ವಾಸಿಸುತ್ತಿದೆ ಎಂಬುದನ್ನು ಗಮನಿಸಿದರೆ ಅಲ್ಲಿ ಹೊಂದಿರುವ ಸ್ಥಾನಮಾನಗಳ ಪರಿಧಿ, ಆ ಸಮುದಾಯ ವನ್ನು ಗುರುತಿಸುವಲ್ಲಿ ಸಹಕಾರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ಒಂದೊಂದು ಸಮುದಾಯವು ಪ್ರತಿಯೊಂದು ಊರಿನಲ್ಲಿ ತನ್ನದೇ ಆದ ಸ್ಥಳವನ್ನು ಹಾಗೂ ರೂಪರೇಷೆಗಳನ್ನು ಪಡೆದಿರುತ್ತದೆ ಎಂದು ಹೇಳಬಹುದಾಗಿದೆ.

ಸಾಮಾನ್ಯವಾಗಿ ಗೊಂದಲಿಗರು ಕರ್ನಾಟಕದ ಮೂಲೆ-ಮೂಲೆಗಳಲ್ಲಿಯೂ ವಾಸಿಸುತ್ತಿದ್ದಾರೆ. ಅಲೆಮಾರಿತನದ ಅಡಿಯಲ್ಲಿಯೆ ಬದುಕನ್ನು ಕಳೆಯುತ್ತಾ ಬಂದ ಗೊಂದಲಿಗರು ಅಲೆಮಾರಿಗಳೆಂದೇ ಗುರುತಿಸಲ್ಪಟ್ಟವರು. ಕಾರಣ ಇಡೀ ಜೀವನವನ್ನು ಅಲೆಮಾರಿತನದಲ್ಲಿಯೇ ಕಳೆಯುವುದರಿಂದ ಇವರಿಗೆ ಸ್ವಂತ ಮನೆಯ ಕಲ್ಪನೆಯಾಗಲಿ, ಅದರ ರಚನೆಯ ಬಗ್ಗೆಯಾಗಲಿ ತಿಳುವಳಿಕೆ ಅಥವಾ ಅರಿವಾಗಲೀ ಇರುವುದನ್ನು ಕಾಣುವುದಿಲ್ಲ. ಅಲೆಮಾರಿಗಳಾದ ಇವರು ಕನಿಷ್ಟ ೫-೬ ಕುಟುಂಬಗಳ ಸಮೇತವಾಗಿ ಸಂಚರಿಸುತ್ತಿದ್ದು ಯಾವದೇ ಊರಿಗೆ ಹೋದಾಗ ಸಾಮಾನ್ಯವಾಗಿ ಊರ ಹೊರಗಿನ ಬಯಲು ಪ್ರದೇಶಗಳಲ್ಲಿ ಗುಡಿ-ಗುಂಡಾರಗಳಲ್ಲಿ ಶಾಲಾ ಆವರಣದಲ್ಲಿ, ಊರಿನ ಸಮೀಪ ಇರುವ ಹೊಲಗಳಲ್ಲಿ ತಾಡಪಾಲು, ಗರಿಗಳಿಂದ ಮೇಲ್ಚಾವಣೆಯನ್ನು ಪ್ಲಾಸ್ಟಿಕ ಹೊದಿಕೆಯಿಂದ, ಆವೃತ್ತವಾಗಿರುವ ಗುಡಿಸಲು ಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಗುಡಿಸಲಿನ ಮುಂಭಾಗದಲ್ಲಿಯೇ ತಾತ್ಪೂರ್ತಿಕ ಒಲೆಗಳನ್ನು ನಿರ್ಮಿಸಿ ಅಲ್ಲಿಯೇ ಅಡುಗೆ ಮಾಡಿಕೊಳ್ಳುತ್ತಾರೆ. ಗುಡಿಸಲಿನ ಒಳಗೆ ತಮ್ಮ ಜೊತೆಗೆ ತೆಗೆದುಕೊಂಡು ಬಂದ ಅಗತ್ಯ ವಸ್ತುಗಳನ್ನು ಇಡುವುದರ ಜೊತೆಗೆ ಅಲ್ಲಿಯೇ ಸ್ಥಳಾವಕಾಶ ಮಾಡಿಕೊಂಡು ಮಲಗಿಕೊಳ್ಳುವರು. ಕೆಲ ಪ್ರದೇಶಗಳಲ್ಲಿ ಗೊಂದಲಿಗರು ಊರಿನ ಒಂದೇ ಸ್ಥಳದಲ್ಲಿ ನೆಲೆಕಂಡುಕೊಂಡಿದ್ದು, ಆ ಪ್ರದೇಶವು 'ಗೊಂದಳಿ ಓಣಿ', 'ಗೊಂದಳಿ ಗಲ್ಲಿ' ಎಂದೇ ಊರಿನಲ್ಲಿ ಗುರುತಿಸಲ್ಪಟ್ಟಿರುತ್ತದೆ.

ಉತ್ತರ ಕರ್ನಾಟಕದ ೧೩ ಜಿಲ್ಲೆಗಳಲ್ಲಿ ಕೈಗೊಂಡ ಅಧ್ಯಯನದಡಿಯಲ್ಲಿ ೧೫೪ ಕುಟುಂಬಗಳು ವಾಸಿಸಿರುವ ಮನೆಗಳ ಮಾದರಿಗಳನ್ನು ಸಮೀಕ್ಷಿಸಿದಾಗ ಬಹುಪಾಲು ಕುಟುಂಬಗಳು ಗುಡಿಸಲು, ಟಿನ್, ಹೆಂಚಿನ ಹಾಗೂ ದಾಬಾಮನೆಗಳಲ್ಲಿ ವಾಸಿಸುತ್ತಿರುವದು ಕಂಡುಬರುತ್ತದೆ.

**ಕೋಷ್ಟಕ ೩.೨ ಜಿಲ್ಲಾವಾರು ಗೊಂದಲಿಗರ ಕುಟುಂಬಗಳ ಮನೆಗಳ ಮಾದರಿಗಳ ಅಂಕಿ-ಸಂಖ್ಯೆ**

| ಕ್ರ ಸಂ. | ಜಿಲ್ಲೆಗಳು | ಗುಡಿಸಲು | ಟಿನ್ | ದಾಬಾ/ ಮಾಳಿಗೆ | ಆರ್‌ಸಿಸಿ | ಹೆಂಚಿನ | ಜನತಾ | ಬಾಡಿಗೆ |
|---|---|---|---|---|---|---|---|---|
| ೧ | ಬಾಗಲಕೋಟೆ | ೬ | ೬೭ | ೧೦೨ | ೩೫ | ೨೫ | ೩ | ೫೭ |
| ೨ | ಬೆಳಗಾವಿ | – | ೨ | ೨ | ೭ | ೬೩ | ೨೫ | ೩೪ |
| ೩ | ಬಳ್ಳಾರಿ | – | – | – | – | ೪೯ | ೨ | ೩ |
| ೪ | ಬೀದರ | ೩೪ | ೫ | ೧೩ | – | – | – | ೪ |
| ೫ | ಬಿಜಾಪುರ | ೪೪ | ೧ | ೧೨ | – | – | – | – |
| ೬ | ದಾವಣಗೆರೆ | – | ೧೨ | ೨೬ | ೧ | ೪೨ | | ೧೦ |
| ೭ | ಧಾರವಾಡ | ೧೨ | ೧ | – | ೨ | ೩೩ | ೧೭ | ೩೭ |
| ೮ | ಗದಗ | ೧೯ | ೩೪ | ೩೦ | ೧೨ | ೧೮ | ೧೨ | ೩೩ |
| ೯ | ಗುಲಬರ್ಗಾ | ೯೦ | ೩೪ | ೧೧ | ೬ | ೧೨೦ | – | ೧೩ |
| ೧೦ | ಹಾವೇರಿ | – | ೨೦ | ೨ | ೧ | ೧೦ | ೩ | ೯ |
| ೧೧ | ಕೊಪ್ಪಳ | ೧೮ | ೪೦ | ೩೮ | ೨ | ೩೮ | ೨ | ೨೧ |
| ೧೨ | ರಾಯಚೂರು | ೪ | ೨೧ | ೨೨ | ೮ | ೧೬ | ೩ | ೧೩ |
| ೧೩ | ಉತ್ತರಕನ್ನಡ | – | – | – | – | ೨೪ | ೬ | ೩ |
| | ಒಟ್ಟು | ೨೨೭ | ೨೩೭ | ೨೫೮ | ೭೪ | ೪೩೮ | ೭೩ | ೨೩೭ |

ಈ ರೀತಿ ವಾಸಸ್ಥಾನದ ಮನೆಗಳನ್ನು ಹೊಂದಿರುವ ಕುಟುಂಬಗಳು ಇನ್ನೂ ಬಡತನದ ರೇಖೆಯಲ್ಲಿಯೇ ಇದ್ದು, ಕನಿಷ್ಟ ಸೌಲಭ್ಯಗಳು ಇಲ್ಲದೇ ಇರುವಂತಹ ಮನೆಗಳಲ್ಲಿ ವಾಸಿಸುತ್ತಿರುವದು ಕಂಡುಬರುತ್ತದೆ.

**ವೃತ್ತ ಚಿತ್ರ ೩.೧ ಗೊಂದಲಿಗರ ಮನೆಗಳ ಶೇಕಡಾವಾರು ಪ್ರಮಾಣ**



ಈ ಚಿತ್ರವನ್ನು ಗಮನಿಸಿದಾಗ ಗೊಂದಲಿಗರ ಕುಟುಂಬಗಳು ನೆಲಸಿರುವ ಮನೆಗಳಲ್ಲಿ ಶೇ.೨೮ ರಷ್ಟು ಹೆಂಚಿನ ಮನೆಗಳಲ್ಲಿ ವಾಸಿಸುತ್ತಿದ್ದು, ಹೆಚ್ಚಾಗಿ ಗುಲಬರ್ಗಾ, ಬೆಳಗಾವಿ, ಬಳ್ಳಾರಿ, ದಾವಣಗೆರೆ ಜಿಲ್ಲೆಗಳಲ್ಲಿ ಇಂತಹ ವಾಸಸ್ಥಾನದ ಮನೆಗಳನ್ನು ಗುರುತಿಸಬಹುದಾಗಿದೆ. ಇದೇರೀತಿ ದಾಬಾ ಮಳಿಗೆ ಶೇ. ೧೭ರಷ್ಟು, ಗುಡಿಸಲು, ಟಿನ್, ಬಾಡಿಗೆ ಮನೆಗಳಲ್ಲಿ ಶೇ. ೧೫ರಷ್ಟು ಕುಟುಂಬಗಳು ನೆಲೆಗೊಂಡಿದ್ದು, ಇಂತಹವುಗಳನ್ನು ಬಾಗಲಕೋಟ, ಗುಲಬರ್ಗಾ, ಕೊಪ್ಪಳ, ಬಿಜಾಪೂರ, ಗದಗ ಜಿಲ್ಲೆಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಆರ್.ಸಿ.ಸಿ. ಮನೆಗಳನ್ನು ಹೊಂದಿರುವವರು ಕೇವಲ ಶೇ. ೫ರಷ್ಟಿದ್ದು, ಬಹುಪಾಲು ಜನರು ಸ್ವಂತ ಮನೆಯನ್ನು ಹೊಂದಿದ್ದರೂ ಅಂತಹ ಸುಸಜ್ಜಿತವಾಗಿರು ವಂತಹವುಗಳಲ್ಲ, ೩೨೧ ಕುಟುಂಬಗಳು ಸ್ವಂತ ನಿವೇಶನವನ್ನು ಹೊಂದಿವೆ. ಆಶ್ರಯ ಯೋಜನೆಯ ಅಡಿಯಲ್ಲಿ ಶೇ. ೫ರಷ್ಟು ಕುಟುಂಬಗಳು ಮಾತ್ರ ಸರ್ಕಾರದ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ.

ಇಂದಿನ ಸಂದರ್ಭದಲ್ಲಿ ಗೊಂದಲಿಗರು ಅಲೆಮಾರಿತನದಿಂದ ಮುಕ್ತರಾಗಲು ಅಲ್ಲಲ್ಲಿಯೇ ನೆಲೆಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದು ತಮ್ಮದೇ ಆದ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಮೂಲ ವೃತ್ತಿ ಜೊತೆಗೆ ಭಾಂಡೆ(ಪಾತ್ರೆ) ವ್ಯಾಪಾರದಲ್ಲಿ ತೊಡಗಿರುವ, ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಹಾಗೂ ಉದ್ಯೋಗದಲ್ಲಿರುವ ಗೊಂದಲಿಗರು ತಮ್ಮದೇ ಆದ ಸ್ವಂತ ಮನೆಯನ್ನು ಹೊಂದಿದ್ದಾರೆ. ಬಡತನದ ರೇಖೆಯಲ್ಲಿರುವ ಬೆರಳೆಣಿಕೆಯ ಕೆಲವರು ಸರ್ಕಾರದ ಆಶ್ರಯ ಮನೆಗಳನ್ನು ಹೊಂದಿರುವುದು ಕಂಡುಬರುತ್ತದೆ, ಆರ್.ಸಿ.ಸಿ ಮನೆಗಳ ಪ್ರಮಾಣ ಬಹಳಷ್ಟು ಕಡಿಮೆ ಎಂದು ಹೇಳಬಹುದು. ಹಂಚಿನ ಮತ್ತು ಮೇಲಮುದ್ದಿಯ ಮನೆಗಳನ್ನು ಕೆಲವರು ಹೊಂದಿದ್ದಾರೆ. ಸಾಮಾನ್ಯವಾಗಿ ಇವರು ತಮ್ಮ ಮನೆಯ ಮುಂದೆ ಒಂದು ಕಟ್ಟೆಯನ್ನು ಕಟ್ಟಿರುವುದು ಕಂಡು ಬರುತ್ತದೆ. ಮನೆಯೊಳಗೆ ಪಡಸಾಲೆ, ಅಡುಗೆ ಮನೆ, ದೇವರ ಮನೆ, ಬಚ್ಚಲು ಮನೆ ಒಳಗೊಂಡಿರುತ್ತದೆ. ಮನೆಯ ಹೊರೆಗೆ ಇರುವ ಕಟ್ಟೆಯು ಹೆಣ್ಣು ಮಕ್ಕಳಿಗೆ ಕೌದಿ ಹೊಲೆಯಲು ಹಾಗೂ ಸಂಗ್ರಹಿಸಿದ ಗುಜರಿ ಸಾಮಗ್ರಿಗಳನ್ನು ಒಡೆದು ಪ್ರತ್ಯೇಕಿಸಲು ಬಳಸುತ್ತಾರೆ.

ಇನ್ನು ಸ್ಥಿರ ನೆಲೆಯನ್ನು ಕಂಡುಕೊಳ್ಳಲು ಸಾಧ್ಯವಾಗದೆ ಇರುವ ಗೊಂದಲಿಗರಿಗೂ ಅವರ ರಾಜ್ಯಮಟ್ಟದ ಸಂಘಟನೆಯು ಪ್ರಮುಖವಾಗಿ – 'ಕಲ್ಯಾಣ ರಾಷ್ಟ್ರ ಎಂದೇ ಗುರುತಿಸಿಕೊಂಡಿರುವ ಸರಕಾರವು ಪ್ರತಿಯೊಬ್ಬ ವ್ಯಕ್ತಿಯ ಮೂಲಭೂತ ಅಗತ್ಯತೆ-ಅವಶ್ಯಕತೆಯನ್ನು ಪೂರೈಸಬೇಕು ಹಾಗೂ ಮೂಲಭೂತ ಹಕ್ಕುಗಳನ್ನು ಸಂರಕ್ಷಿಸಬೇಕು ಎನ್ನುವ ದಿಸೆಯಲ್ಲಿ ಮನೆ ಎನ್ನುವದು ಪ್ರತಿಯೊಂದು ಕುಟುಂಬದ ಮೂಲಭೂತ ಅವಶ್ಯಕತೆ, ಅದನ್ನು ಕಲ್ಪಿಸಿಕೊಡಬೇಕಾದದ್ದು ಆದ್ಯ ಕರ್ತವ್ಯ ಕಾರಣ ಅಲೆಮಾರಿ ಜನಾಂಗದವರಿಗೆ ಸ್ಥಿರ ನೆಲೆಯನ್ನು ಕಲ್ಪಿಸಲು ವಿಶೇಷ ಯೋಜನೆಯನ್ನು ರೂಪಿಸಿ, ಕರ್ನಾಟಕ ಗೃಹ ಮಂಡಳಿ ನಗರಾಭಿವೃದ್ಧಿ ಪ್ರಾಧಿಕಾರ, ಮಹಾನಗರ ಪಾಲಿಕೆ, ಗ್ರಾಮ ಪಂಚಾಯಿತಿಗಳ ಮೂಲಕ ಮನೆಗಳನ್ನು ಕಟ್ಟಿಸಿಕೊಡಬೇಕು, ಎಂಬ ಬೇಡಿಕೆಯನ್ನು ಆಡಳಿತಕ್ಕೆ ಬರುವ ಪ್ರತಿ ರಾಜ್ಯ

ಸರಕಾರಗಳಿಗೆ ಒತ್ತಾಯವನ್ನು ಮಾಡುತ್ತಲೇ ಬಂದಿದ್ದಾರೆ. ಆದರೂ ಆ ಬೇಡಿಕೆಯ ಪೂರೈಕೆಯಲ್ಲಿ ನಿರೀಕ್ಷಿತ ಯಶಸ್ಸು ಅಥವಾ ಪ್ರತಿಫಲ ಸಾಧ್ಯವಾಗಿಲ್ಲ ಎಂದು ಹೇಳಬಹುದು.

### ೩.೬ ಆಹಾರ ಪದ್ಧತಿ

ಮಾನವನ ಮೂಲಭೂತ ಅಗತ್ಯತೆಗಳಲ್ಲಿ ಆಹಾರವು ಒಂದು. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಬದುಕಿಗಾಗಿ ಹಾಗೂ ಚಟುವಟಿಕೆಗಳ ನಿರ್ವಹಣೆಗಾಗಿ ದೈಹಿಕ ಶಕ್ತಿಯನ್ನು ತಂದು ಕೊಳ್ಳಲು ಆಹಾರವು ಅವಶ್ಯಕವಾಗಿ ಬೇಕೇಬೇಕು. ಆಹಾರ ಕೇವಲ ಮನುಷ್ಯನಿಗೆ ಮಾತ್ರವಲ್ಲ, ಪ್ರಕೃತಿಯಲ್ಲಿ ಹುಟ್ಟಿರುವ ಪ್ರತಿಯೊಂದು ಜೀವಿಗೂ ಅವಶ್ಯಕವಾಗಿ ಬೇಕು. ಮಾನವನು ಸಹ ಆಹಾರಕ್ಕಾಗಿಯೆ ದುಡಿಯುತ್ತಾನೆ. ಕೆಲಸ ಮಾಡುತ್ತಾನೆ ಇಲ್ಲವೇ ಭಿಕ್ಷೆ ಬೇಡುತ್ತಾನೆ. ಹೊಟ್ಟೆಗೊಸ್ಕರ ಏನೇಲ್ಲಾ ಹೋರಾಟದ ಮೂಲಕ ತನ್ನ ಆಹಾರವನ್ನು ದೊರಕಿಸಿಕೊಂಡು ಜೀವನವನ್ನು ಸಾಗಿಸುತ್ತಾ ಬಂದಿದ್ದಾನೆ. ಈ ಹಿನ್ನೆಲೆಯಲ್ಲಿ ಮಾನವನಿಗೆ ಆಹಾರವಿಲ್ಲದಿದ್ದರೆ ಬದುಕೆ ಇಲ್ಲ. ಉಸಿರೆ ಇಲ್ಲ. ಕ್ರಿಯೆ-ನಡಿಗೆಯೇ ಇಲ್ಲ. ಸೇವಿಸುವ ಆಹಾರವು ಪ್ರಾದೇಶಿಕವಾಗಿ, ಸಾಮುದಾಯಿಕವಾಗಿ ಭಿನ್ನ-ಭಿನ್ನವಾಗಿ ಇರುವುದನ್ನು ಕಾಣುತ್ತೇವೆ. ಗೊಂದಲಿಗರು ಆಹಾರಕ್ಕಾಗಿ ತನ್ನ ಮೂಲ ವೃತ್ತಿಯನ್ನು ಅವಲಂಭಿಸಿದ್ದು ಸಾಮಾನ್ಯವಾಗಿ ಈ ಸಮುದಾಯದ ಜನ ಎರಡು ರೀತಿಯ ಆಹಾರವನ್ನು ಸೇವಿಸುತ್ತಾರೆ.

**೧. ಮಾಂಸಾಹಾರ**

ಪ್ರಾರಂಭದಿಂದಲೂ ಗೊಂದಲಿಗರು ಮಾಂಸಾಹಾರಿಗಳು. ಅಲೆಮಾರಿಗಳಾಗಿದ್ದ ಗೊಂದಲಿಗರು ಅರಣ್ಯಗಳಲ್ಲಿಯೇ ವಾಸಮಾಡುತ್ತಿದ್ದರು. ಕಾಡಿನಲ್ಲಿಯ ಮೊಲ, ಚಿಗರೆ ಹಂದಿಗಳ ಬೇಟೆಯನ್ನು ಆಡಿ ಅವುಗಳನ್ನೇ ಸೇವಿಸುತ್ತಿದ್ದರು. ಅಷ್ಟೇ ಅಲ್ಲ ಕೌಜುಗ, ಅಡವಿಕೋಳಿ, ಮೀನುಗಳನ್ನು ಹಿಡಿದು ಅದನ್ನು ಸೇವಿಸುತ್ತಿದ್ದರು. ಗೊಂದಲಿಗರಿಗೆ ಮಾಂಸಾಹಾರ ಅತ್ಯಂತ ಇಷ್ಟವಾದ ಆಹಾರ. ಗೊಂದಲಿಗರಲ್ಲಿ ನಡೆಯುವ ವಿವಾಹ ಸಂದರ್ಭಗಳಲ್ಲಿಯೂ ಮಾಂಸ ಆಹಾರವು ಒಂದು ಕಾಲಕ್ಕೆ ಸರ್ವೇ ಸಾಮಾನ್ಯವಾಗಿತ್ತು.

ಆಧುನಿಕ ಕಾಲದಲ್ಲಿಯೂ ಗೊಂದಲಿಗರು ಮಾಂಸಾಹಾರವನ್ನು ಇಷ್ಟ ಪಡುತ್ತಾರೆ. ವಾರದಲ್ಲಿ ಒಂದು ದಿನವಾದರೂ ಇವರು ಮಾಂಸಾಹಾರ ಸೇವಿಸುತ್ತಾರೆ. ಹಬ್ಬಗಳಲ್ಲಿ ಪ್ರಾಣಿ ಬಲಿ ಕೊಟ್ಟು ಅದರ ಮಾಂಸವನ್ನು ಸಾಮೂಹಿಕವಾಗಿ ಸೇವಿಸುತ್ತಾರೆ. ನವರಾತ್ರಿ, ಜಾತ್ರೆ-ಉತ್ಸವಗಳಲ್ಲಿ ಮಾಂಸಾಹಾರ ಸಾಮಾನ್ಯವಾಗಿದೆ. ಆಷಾಢ ಮಾಸದಲ್ಲಿ ಹೆಚ್ಚಾಗಿ ಮಾಂಸಾಹಾರವನ್ನು ಸೇವಿಸುತ್ತಾರೆ. ಮಾಂಸಾಹಾರಕ್ಕೆ ಪ್ರಾಣಿಗಳನ್ನು ಸಾಕುವುದು ಅಪರೂಪ. ಒಂದು ಕಾಲದಲ್ಲಿ ಮಾಂಸಾಹಾರವನ್ನು ಮನೆಯಲ್ಲಿ ಮಣ್ಣಿನ ಮಡಿಕೆಯಲ್ಲಿ ಮಾಡುತ್ತಿದ್ದರು. ಇಂದು ಪಾತ್ರೆಗಳಲ್ಲಿ ಮಾಡುತ್ತಾರೆ. ಮಾಂಸಾಹಾರದ ದಿನ ಮದ್ಯಪಾನ ಸೇವನೆ ಸರ್ವೇ ಸಾಮಾನ್ಯವಾಗಿರುತ್ತದೆ.

### ೨. ಸಸ್ಯಾಹಾರ

ಸಸ್ಯಾಹಾರವು ಗೊಂದಲಿಗರ ನಿತ್ಯದ ಆಹಾರ. ಕಲಾ ವೃತ್ತಿಯ ಅಡಿಯಲ್ಲಿ ಪಡೆದುಕೊಳ್ಳುವ ಭಿಕ್ಷೆಯು ಸಾಮಾನ್ಯವಾಗಿ ಸಿದ್ಧಪಡಿಸಿದ ಆಹಾರವನ್ನು ಸ್ವೀಕರಿಸದೇ ಆಹಾರ ಧ್ಯಾನಗಳನ್ನು ಪಡೆದುಕೊಳ್ಳುವುದರಿಂದ ಸಸ್ಯಾಹಾರವು ಸರ್ವೇ ಸಾಮಾನ್ಯವಾಗಿದೆ. ಆಹಾರ ಧಾನ್ಯಗಳಲ್ಲಿ ಮುಖ್ಯವಾಗಿ ತಾವು ನೆಲೆಯೂರಿದ ಸ್ಥಳಗಳಲ್ಲಿ ಸಿಗುವ ಜೋಳ, ಗೋದಿ, ಅಕ್ಕಿ, ಸಜ್ಜೆ, ಬೇಳೆಕಾಳು, ಕಾಯಿಪಲ್ಲೆಗಳನ್ನು ಹೆಚ್ಚಾಗಿ ಉಪಯೋಗಿಸುವರು. ವಿಶೇಷವಾಗಿ ಹೆಸರು, ಅಲಸಂದಿ ಕಾಳುಗಳು ಇವರಿಗೆ ಅಚ್ಚುಮೆಚ್ಚು. ರೊಟ್ಟಿ, ಅನ್ನ, ಪಲ್ಯ, ಇವರ ನಿತ್ಯದ ಆಹಾರ. ಗೋದಿಯನ್ನು ವಿಶೇಷವಾದ ಆಹಾರವಾಗಿ ಹಬ್ಬ ಹುಣ್ಣಿಮೆಗಳಲ್ಲಿ ಊಟಕ್ಕೆ ಬಳಸುತ್ತಾರೆ. ಹೀಗೆ ಮನೆಯಲ್ಲಿ ಅನ್ನ, ರೊಟ್ಟಿ, ಮುದ್ದೆ, ರಾಗಿ, ಅಂಬಲಿ, ನುಚ್ಚು, ಮುಂತಾದವುಗಳನ್ನು ಸೇವಿಸುತ್ತಿದ್ದಾರೆ.

**ಹಬ್ಬ-ಜಾತ್ರೆ-ಉತ್ಸವ ಹಾಗೂ ಗೊಂದಲ ಪೂಜೆಯ ಆಚರಣೆಯಲ್ಲಿಯ ಆಹಾರ ಪದ್ಧತಿ**

ಹಬ್ಬ ಹುಣ್ಣಿಮೆಗಳಲ್ಲಿ ಸಿಹಿ ಪದಾರ್ಥಗಳಾದ ಪಾಯಸ, ಹೋಳಿಗೆ, ಕರಿಗಡುಬುಗಳನ್ನು ಸೇವಿಸುತ್ತಾರೆ. ದಸರಾ ಹಬ್ಬ ಹಾಗೂ ಆಷಾಢದಲ್ಲಿ ನಡೆಸುವ ದುರ್ಗವ್ವನ ಜಾತ್ರೆಯ ಸಂದರ್ಭದಲ್ಲಿ ಸಿಹಿ ಆಹಾರ ತಯಾರಿಸುವುದರ ಜೊತೆಗೆ ಕುರಿ-ಕೋಳಿಯನ್ನು ಬಲಿ ಕೊಟ್ಟು ಅದನ್ನು ಸೇವಿಸುತ್ತಿರುವುದನ್ನು ಕಾಣುತ್ತೇವೆ. ಇನ್ನುಳಿದ ಹಬ್ಬಗಳಲ್ಲಂತೂ ಸಾಮಾನ್ಯವಾಗಿ ಹೋಳಿಗೆ ಅಥವಾ ಕರಿಗಡಬುಗಳನ್ನು ತಯಾರಿಸಿ ಸೇವಿಸುತ್ತಾರೆ.

ಗೊಂದಲ ಪೂಜೆಯ ಸಂದರ್ಭದಲ್ಲಿ ದೇವಿಗೆ ಕಡ್ಡಾಯವಾಗಿ ಹೋಳಿಗೆ, ಕರಿಗಡಬು, ಬೆಲ್ಲದ ನೀರು ಇದನ್ನು ನೈವೇದ್ಯವಾಗಿ ಮಾಡಲೇಬೇಕು. ಇನ್ನು ಕೆಲವು ಮನೆತನದವರು ಈ ಸಂದರ್ಭದಲ್ಲಿ ಆಳ್ವಾ ಎನ್ನುವ ಕೊಬ್ಬರಿ, ಬೆಲ್ಲ, ದ್ರಾಕ್ಷಿ-ಗೋಡಂಬಿಯಿಂದ ತಯಾರಿಸಿದ ದೊಡ್ಡದಾದ ಉಂಡಿಯನ್ನು ಮಾಡಿ ನೈವೇದ್ಯ ಮಾಡುವರು. ಇದನ್ನು ಮನೆಯ ಗಂಡುಮಕ್ಕಳು ಇಲ್ಲವೇ ಮನೆಯ ಸೊಸೆಯರು ಮಾತ್ರ ಸೇವನೆ ಮಾಡಬೇಕು. ವಿವಾಹದ ಸಂದರ್ಭದಲ್ಲಿ ಇತರ ಸಮುದಾಯದವರನ್ನು ಆಹ್ವಾನಿಸುತ್ತಿರುವುದರಿಂದ ಮಾಂಸಾಹಾರ ತಯಾರಿಸುವದನ್ನು ಬಿಟ್ಟು ಸಸ್ಯಾಹಾರವನ್ನು ಸಿದ್ಧಪಡಿಸುತ್ತಿರುವುದು ಸಾಮಾನ್ಯವಾಗಿ ಕಂಡು ಬರುತ್ತದೆ.

## ೩.೭ ಉಡುಗೆ ತೊಡುಗೆ

ಮಾನವ ಸಮೂಹ ಜೀವಿ, ಸಂಘ ಜೀವಿ, ಸಮೂಹದ ಅಡಿಯಲ್ಲಿಯೇ ಬದುಕನ್ನು ಸೃಷ್ಟಿಸಿಕೊಂಡಿರುವನು. ಬದುಕನ್ನು ಕಳೆಯುವನು. ಸಮುದಾಯದಲ್ಲಿ ಹೇಗೂ ಇರಲು ಸಾಧ್ಯವಿಲ್ಲ. ಉಡುಗೆಯು ಮಾನವನ ಮರ್ಯಾದೆಯನ್ನು ಕಾಪಾಡಿದರೆ, ತೊಡುಗೆಗಳು ಮಾನವ ಸೌಂದರ್ಯವನ್ನು ವರ್ಧಿಸಲು ಸಹಾಯಕವಾಗಿದೆ. ಮಾನವನು ತನ್ನ ಅಂಗಾಂಗಗಳ ಮುಚ್ಚುವಿಕೆಯ ಮೂಲಕ ಮರ್ಯಾದೆಯನ್ನು ಕಾಪಾಡಿಕೊಳ್ಳುತ್ತಾನೆ. ಇಂತಹ ಮಾನ ಮುಚ್ಚಲು ಉಡಿಗೆಯ ಬಗೆಗೆ ಪ್ರತಿಯೊಂದು

ಸಮುದಾಯವು ತನ್ನದೇ ಆದ ವೈಶಿಷ್ಟತೆಯನ್ನು ರೂಢಿಸಿಕೊಂಡು ಬಂದಿದೆ. ಭಾರತದಲ್ಲಿಯ ಹಲವಾರು ಬುಡಕಟ್ಟು ಸಮುದಾಯಗಳು ತಮ್ಮದೆಯಾದ ವೇಷ-ಭೂಷಣಗಳನ್ನು ಹೊಂದಿರುತ್ತಾರೆ. ಆಯಾ ಬುಡಕಟ್ಟು ಸಮುದಾಯಗಳು ಹಾಕಿ ಕೊಳ್ಳುವ ವೇಷ-ಭೂಷಣಗಳು ಆ ಸಮುದಾಯದ ಸಂಸ್ಕೃತಿಯನ್ನು ಅನುಸರಿಸುವ ಆಚರಣಾ ಕ್ರಮಗಳ ಜೊತೆಗೆ ನಿರ್ವಹಿಸುವ ವೃತ್ತಿಯನ್ನು ಸೂಚಿಸುತ್ತದೆ.

ಗೊಂದಲಿಗರು ಪರಿಸರಕ್ಕೆ ಹೊಂದಿಕೊಳ್ಳುವರು. ಆಚಾರ-ವಿಚಾರಗಳಲ್ಲಿ, ವೇಷ-ಭೂಷಣಗಳಲ್ಲಿ, ನಡೆ-ನುಡಿಗಳಲ್ಲಿ, ಎಲ್ಲಾ ಬಗೆಯಲ್ಲಿಯೂ ತಾವು ವಾಸಿಸುವ ಪ್ರದೇಶ ಪರಿಸರಗಳಿಗೆ ಹೊಂದಿ ಬದುಕುವ ಮನೋಭಾವದವರು. ಅಲೆಮಾರಿತನದ ಬದುಕನ್ನು ಕಳೆಯುತ್ತಾ ಬಂದ ಗೊಂದಲಿಗರು ಆಡಂಬರದ ಜೀವನಕ್ಕೆ ಮನಸೋಲದೆ ಸರಳ ಬದುಕಿಗೆ ಅಂಟಿಕೊಂಡವರು.

**ಪುರುಷರ ವೇಷ-ಭೂಷಣಗಳು**

ಸಾಮಾನ್ಯವಾಗಿ ಗಂಡಸರು ಧೋತರ, ಉದ್ದ ತೋಳಿನ ಅಂಗಿ, ರುಮಾಲು ಅಥವಾ ಟೊಪ್ಪಿಗೆ ಧರಿಸುತ್ತಾರೆ. ಹಾಡುವ ಮತ್ತು ಕಥೆ ಹೇಳುವ ಗೊಂದಲಿಗ ಕಲಾವಿದರು, ಬುಡಬುಡಕೆಯವರು, ತಮ್ಮ ಆಯಾ ಕಾಯಕದ ಸಂದರ್ಭದಲ್ಲಿ ಧೋತರ, ತಲೆಗೆ ಜರದ ರುಮಾಲು, ಅಂಗಿ ಮೇಲೆ ಕೋಟು ಧರಿಸಿ, ಮೇಲೊಂದು ಧಡಿ ಒಲ್ಲಿಯನ್ನು ಹಾಕಿಕೊಂಡಿರುವರು. ಕೋಟು ಧರಿಸುವುದೆಂದರೆ ಇವರಿಗೆ ಹೆಮ್ಮೆಯ ಸಂಗತಿಯಾಗಿರುತ್ತದೆ. ಈಗಲೂ ಸಹ ಧಾರ್ಮಿಕ ಭಿಕ್ಷಾಟನೆ, ಜೋತಿಷ್ಯ, ಬುಡಬುಡಿಕೆ ಹಾಗೂ ಗೊಂದಲ ಹಾಕುವ ಸಂದರ್ಭದಲ್ಲಿ ತಲೆಗೆ ಯಾವಾಗಲೂ ಪೇಠಾ, ಬಿಳಿ ಅಂಗಿ, ಬಿಳಿ ಧೋತರ, ಕೋಟು ಹಾಕಿಕೊಳ್ಳುವ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಇಂದಿನ ಆಧುನಿಕ ಕಾಲದಲ್ಲಿ ಅಧಿಕಾರಿಗಳು ಪ್ರೋಫೆಸರ್‌ಗಳೆ ಕೋಟುಗಳನ್ನು ಹಾಕಿಕೊಳ್ಳುವುದನ್ನು ಬಿಟ್ಟಿದ್ದರೂ, ನಮ್ಮ ಗೊಂದಲಿಗ ಕಲಾವಿದರು, ಬುಡಬುಡಿಕೆಯವರು ಮಾತ್ರ ತಮ್ಮ ವೃತ್ತಿಯ ಸಂದರ್ಭದಲ್ಲಿ ಈ ರೀತಿ ಉಡುಗೆಗಳನ್ನು ಹಾಕಿಕೊಳ್ಳುವದನ್ನು ಮಾತ್ರ ಬಿಟ್ಟಿಲ್ಲ. ಇದ್ದುದನ್ನೇ ಹಾಕಿಕೊಂಡು ಪ್ರದರ್ಶನ ಮಾಡುತ್ತಾರೆ. ಜೊತೆಗೆ ಕೋಟಿನ ಎದೆಯ ಮೇಲ್ಭಾಗದಲ್ಲಿ ತಮಗೆ ಬಂದ ಪ್ರಶಸ್ತಿ ಪದಕಗಳನ್ನು ಸಿಕ್ಕಿಸಿಕೊಂಡಿರುತ್ತಾರೆ.

**ಸ್ತ್ರೀಯರ ವೇಷ-ಭೂಷಣಗಳು**

ಗೊಂದಲಿಗರ ಸ್ತ್ರೀಯರು ಸಾಮಾನ್ಯವಾಗಿ ಸೀರೆ-ಕುಪ್ಪಸವನ್ನು ಹಾಕಿಕೊಳ್ಳುವರು. (ಹಿರಿಯ ಮಹಿಳೆಯರು ಮರಾಠಿ ಶೈಲಿಯಲ್ಲಿ ಕಚ್ಚೆ ಸೀರೆಯನ್ನು ಹಾಕಿಕೊಳ್ಳುವರು) ಇದು ರೂಢಿಗತವಾಗಿ ಬಂದಿರುವ ಉಡುಗೆ. ಗೊಂದಲಿಗರ ಹುಡಗಿಯರು ಋತುಮತಿಯರಾಗುವವರೆಗೂ ಲಂಗ-ಪರಕಾರ, ಜಂಪರ ಹಾಕಿಕೊಳ್ಳುತ್ತಾರೆ. ನಂತರ ಸೀರೆ ರವಿಕೆಯನ್ನು ತೊಡಬೇಕು. ವಿವಾಹಿತ ಸ್ತ್ರೀಯರು ಕಡ್ಡಾಯವಾಗಿ ಸೀರೆ ರವಿಕೆ/ಬ್ಲೌಜ ಧರಿಸುವರು. ಶ್ರೀಮಂತ ವರ್ಗದಲ್ಲಿರುವ ಮಹಿಳೆಯರು ಮಾತ್ರ ರೇಶ್ಮೆ ಸೀರೆ ಕುಪ್ಪಸ ಧರಿಸುತ್ತಾರೆ. ಮದ್ಯಮ ವರ್ಗದ ಮಹಿಳೆಯರು ಮಾತ್ರ ಸಾಧಾರಣ ಸೀರೆ ಜಂಪರ ತೊಡುತ್ತಾರೆ. ಇವರಲ್ಲಿ ಬೆರಳಣಿಕೆಯಷ್ಟು ಮಾತ್ರ ಸೀರೆಗಳನ್ನು ಹೊಂದಿರುತ್ತಾರೆ. ಇದಕ್ಕೆ

ವ್ಯತಿರಿಕ್ತವಾಗಿ ಬಡತನ ರೇಖೆಯಲ್ಲಿರುವ, ಸಣ್ಣಮಟ್ಟ ವ್ಯಾಪಾರದಲ್ಲಿ ತೊಡಗಿರುವ ಮಹಿಳೆಯರು ಧಾರುಣ ಪರಿಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಏಕೆಂದರೆ ಇವರು ಹರಿದ ಸೀರೆಯನ್ನಾಗಲಿ ಅಥವಾ ಇನ್ನೊಬ್ಬರು ಉಟ್ಟು ಬಿಟ್ಟ ಸೀರೆಯನ್ನು ತೊಟ್ಟುಕೊಳ್ಳುವರು. ವಯಸ್ಸಾದ ಮಹಿಳೆಯರು-ಮುದುಕಿಯರು ಸಹ ಇದೆ ಸ್ಥಿತಿಯಲ್ಲಿ ತಮ್ಮ ಜೀವನವನ್ನು ಕಳೆಯುವುದನ್ನು ಕಾಣಬಹುದು.

ಗೊಂದಲಿಗ ಮಹಿಳೆಯರು ತಮ್ಮ ಆರ್ಥಿಕ ಅನುಕೂಲತೆಗನುಗುಣವಾಗಿ ಆಭರಣಗಳನ್ನು ಧರಿಸುತ್ತಿದ್ದು, ವಿವಾಹಿತ ಮಧ್ಯವಯಸ್ಸಿನ ಸ್ತ್ರೀಯರು ನಡಕ್ಕೆ ಬೆಳ್ಳಿಯ ಪಟ್ಟಿಯನ್ನು, ಮುತ್ತೈದೆಯರು ಮಂಗಳ ಸೂತ್ರ, ಗುಂಡಿನ ಸರ, ಬೋರಮಳ ಇತ್ಯಾದಿಗಳನ್ನು ಕೊರಳಲ್ಲಿ ಧರಿಸುತ್ತಾರೆ. ಕೈಯಲ್ಲಿ ಬಳೆ ಮೂಗಿನಲ್ಲಿ ನತ್ತು, ಕಿವಿಯಲ್ಲಿ ಬುಗುಡಿ, ಹೂವ(ಓಲೆ), ಗಜರಗಳನ್ನು ಧರಿಸುತ್ತಾರೆ. ಇವುಗಳ ಜೊತೆಗೆ ಗುಂಡಿನ ಸರ, ಪುತ್ಥಳಿ ಸರ, ಕಾಸಿನ ಸರ, ವಜ್ರ ಟಿಕ್ಕಿ, ಗೆಜ್ಜೆಟಿಕ್ಕಿ, ತೊಳ್ಬಂದಿ, ಪಾಟ್ಲಿ-ಬಿಲ್ವಾರ, ಬಳೆ, ಉಂಗುರ. ಸೊಂಟಕ್ಕೆ ಡಾಬು, ತೊಡೆ ಮುಂತಾದ ಆಭರಣಗಳನ್ನು ಧರಿಸುತ್ತಾರೆ. ಸಾಮಾನ್ಯವಾಗಿ ಗೊಂದಲಿಗ ಸ್ತ್ರೀಯರು ಉದ್ದನೆಯ ಕೂದಲಗಳನ್ನು ಹೊಂದಿದ್ದು, ತುರುಬ ಕಟ್ಟಿ ಕೊಳ್ಳುತ್ತಾರೆ. ಹಬ್ಬ-ಜಾತ್ರೆ-ಉತ್ಸವಗಳ ಸಂದರ್ಭದಲ್ಲಿ ಹೊಸ ಊಡುಗೆಗಳೊಂದಿಗೆ ಆಭರಣಗಳನ್ನು ಧರಿಸುತ್ತಾರೆ.

ಬದಲಾಗಿರುವ ಇಂದಿನ ಆಧುನಿಕ ಕಾಲದಲ್ಲಿ ಒಂದು ರೀತಿಯಲ್ಲಿ ಮಾಯಾ ಪ್ರಪಂಚವನ್ನು ಸೃಷ್ಟಿಮಾಡಿರುವ ಪ್ಯಾಶನ್‌ಲೋಕದ ಮೋಡಿಗೆ ಒಳಗಾಗದವರೇ ಇಲ್ಲ. ಆಧುನಿಕರು, ಮುಂದುವರೆದವರು ಎನ್ನುವದನ್ನು ಗುರುತಿಸಿಕೊಳ್ಳಲು ಪ್ರತಿಯೊಬ್ಬರು ಪ್ಯಾಶನ್‌ಲೋಕದ ಭ್ರಮೆಗೆ ಒಳಗಾಗುತ್ತಿದ್ದಾರೆ. ನಾಗರೀಕತೆಯ ನಾಗಾಲೋಟದಲ್ಲಿ ಯುವ ಜನಾಂಗದವರು ಅಪ್ಪಿಕೊಂಡಿರುವ ವೇಷ-ಭೂಷಣಗಳು ಒಂದು ರೀತಿ ಸುಸಂಸ್ಕೃತಿಗೆ ನಾಚಿಕೆಯಾಗುವ ಸ್ಥಿತಿಯಲ್ಲಿ ಅಂದರೆ ವಿಭಿನ್ನ ತೆರನಾದ ಪಾರದರ್ಶಕವಾದ ರೀತಿಯ ಬಟ್ಟೆಗಳನ್ನು ಹಾಕಿಕೊಳ್ಳುತ್ತಿರುವುದು ಕಂಡು ಬರುತ್ತಿದೆ ಎಂದರೆ ತಪ್ಪಾಗಲಾರದು. ಈ ರೀತಿಯ ವೇಷಭೂಷಣದಲ್ಲಿ ಕಂಡು ಬಂದಿರುವ ಬದಲಾವಣೆಗೆ ಗೊಂದಲಿಗ ಸಮುದಾಯದಲ್ಲಿಯ ಬಹುಸಂಖ್ಯಾತ ಯುವ ಜನಾಂಗದವರು ಸಂಪೂರ್ಣವಾಗಿ ಅಲ್ಲದಿದ್ದರೂ ಬದಲಾವಣೆಯನ್ನು ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಿದ್ದಾರೆ.

ಯುವಕರು ಬಳಕೆಯಲ್ಲಿ ಇರುವ, ಪ್ಯಾಂಟು-ಶರ್ಟುಗಳನ್ನು ಧರಿಸುತ್ತಾರೆ. ಮದುವೆಯಂತಹ ಸಂದರ್ಭದಲ್ಲಿ ವರನಾದವನು, ಕೋಟು-ಪ್ಯಾಂಟು ಧರಿಸುತ್ತಾರೆ. ಹಬ್ಬ, ಹರಿದಿನ, ಜಾತ್ರೆ ಸಂದರ್ಭದಲ್ಲಿ ಹೊಸ ಬಟ್ಟೆಗಳನ್ನು ಹಾಕಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಸ್ತ್ರೀಯರ ವೇಷ-ಭೂಷಣಗಳಿಗೆ ಸಂಬಂಧಪಟ್ಟಂತೆ, ಗೊಂದಲಿಗರಲ್ಲಿ ಬೆಳೆದು ಬಂದ ನಿರ್ಬಂಧಗಳು ಸಡಿಲಗೊಂಡಿವೆ. ಶಾಲಾ ಕಾಲೇಜುಗಳಿಗೆ ಹೋಗುತ್ತಿರುವ ಅನೇಕ ಯುವತಿಯರು, ಚೂಡಿದಾರ ಗಾಗ್ರಾ, ಮಿಡಿ, ಸ್ಕರ್ಟ್, ಫ್ರಾಕ್‌ಗಳನ್ನು ಧರಿಸುತ್ತಾರೆ. ವೇಷ-ಭೂಷಣಗಳಿಗೆ ಸಂಬಂಧಪಟ್ಟಂತೆ ಗೊಂದಲಿಗರ ಯುವಜನಾಂಗ ದವರು ಆಧುನಿಕತೆಯ ಸ್ಪರ್ಶಕ್ಕೆ ಒಳಗಾಗುತ್ತಿದ್ದಾರೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

## ೨.೮ ವೈದ್ಯ ಪದ್ಧತಿ

ಮನುಷ್ಯನಿಗೆ ಆಹಾರದಷ್ಟೆ ಆರೋಗ್ಯವು ಬಹು ಮುಖ್ಯವಾಗಿರುವುದು. ದೈಹಿಕವಾಗಿ ಯಾವುದೇ ರೀತಿಯ ತೊಂದರೆಗಳು ಅಥವಾ ಅನಾರೋಗ್ಯಕ್ಕೆ ಒಳಗಾದಾಗ, ಪ್ರಕೃತಿಯಲ್ಲಿ ಲಭ್ಯವಿರುವ ಸಸ್ಯಜನ್ಯ ವಸ್ತುಗಳನ್ನು ಔಷಧಿಯ ರೂಪದಲ್ಲಿ ಬಳಸುತ್ತಾ ಬಂದಿದ್ದಾನೆ. ರೋಗ ನಿವಾರಣೆಗೆ ಬಳಸುವ ಈ ರೀತಿಯ ಔಷಧಿಗಳು ವೈಜ್ಞಾನಿಕತೆಯಿಂದ ಕೂಡಿವೆ ಎಂದು ಹೇಳುವದು ಕಷ್ಟಕರವಾದರೂ, ಇವು ನಿರುಪಯುಕ್ತ ಔಷಧಿಗಳು ಎಂದು ವಾದಿಸುವುದು ಕಷ್ಟ. ಈ ಹಿನ್ನೆಲೆಯಲ್ಲಿಯೇ ಅನೇಕ ಬುಡಕಟ್ಟು ಸಮುದಾಯಗಳು ತಲೆ-ತಲಾಂತರಗಳಿಂದಲೂ ಪಾರಂಪರಿಕ ನಾಟಿ ವೈದ್ಯಪದ್ಧತಿಯನ್ನು ಮುಂದುವರೆಸಿ ಕೊಂಡು ಬಂದಿರುವುದನ್ನು ಕಾಣಬಹುದು.

ಗೊಂದಲಿಗರು ಪ್ರಕೃತಿ ಆರಾಧಕರು. ಇವರು, ಮಾಂತ್ರಿಕ ಶಕ್ತಿಗಳನ್ನು ಅಳವಡಿಸಿ ಕೊಂಡವರು. ಪ್ರಾರಂಭದಿಂದಲೂ "ಪ್ರತಿಯೊಂದು ಅನಾರೋಗ್ಯವು ದೆವ್ವದ ಆಕ್ರಮಣವಾಗಿದ್ದು, ಬಲಿಕೊಡಬೇಕೆಂಬ ನಂಬಿಕೆ ಈ ಜನರಲ್ಲಿ ಸಾಮಾನ್ಯವಾಗಿದೆ. ಸಿಡುಬು ಕಾಲರಾದಂತಹ ಸಾಂಕ್ರಾಮಿಕ ರೋಗದ ಕಾಲದಲ್ಲಿ ಪ್ರಾಣಿ ಬಲಿಯೊಂದಿಗೆ ನರ್ತಿಸುವ ಸಮಾರಂಭವನ್ನು ನಡೆಸುತ್ತಾರೆ. ಸತ್ತ ಆತ್ಮಗಳನ್ನು ಶಾಂತಗೊಳಿಸಲು, ಶವಸಂಸ್ಕಾರ ನರ್ತನಗಳನ್ನು ನಡೆಸಿ, ಆತ್ಮಗಳ ಆರ್ಶೀವಾದ ಬಯಸುತ್ತಾರೆ".[೧೯] ಈ ಹಿನ್ನೆಲೆಯಲ್ಲಿ, ಗೊಂದಲಿಗರಲ್ಲಿ ಮಾಟ, ಮಾಂತ್ರಿಕತೆಯ ಬಗ್ಗೆ ನಂಬಿಕೆ ಹೊಂದಿದ್ದಾರೆ. ಕುಟುಂಬ ದಲ್ಲಿ ಯಾರಿಗಾದರೂ ಹಾಗೂ ಸಾಕಿರುವ ಪ್ರಾಣಿಗಳಿಗೆ ಕಾಡಾಟ, ತೊಂದರೆಗಳು ನಿರಂತರವಾಗಿ ಕಂಡುಬಂದಲ್ಲಿ ನಮಗಾಗದವರು ಯಾರೋ ಮಾಟ-ಮಂತ್ರ ಮಾಡಿಸಿದ್ದಾರೆಂದು ನಂಬುತ್ತಾರೆ. ಅದರ ಉಪಶಮನಕ್ಕಾಗಿ ಮಾಂತ್ರಿಕನನ್ನು ಸಂಪರ್ಕಿಸಿ ಅವನು ಹೇಳಿದಂತೆ ದೇವರಿಗೆ ನಡೆದುಕೊಳ್ಳುವ, ಪ್ರಾಣಿ ಬಲಿ ಕೊಡುವದನ್ನು ಮಾಡುತ್ತಾರೆ. ಇದಕ್ಕೆ ಅನುಗುಣವಾಗಿ ಜನಪದ ವೈದ್ಯಪದ್ಧತಿ, ಗೌಟಿ ಔಷಧಿಯ ಬಳಕೆಯನ್ನು ಕಾಣುತ್ತೇವೆ. ಆಧುನಿಕ ವೈದ್ಯಪದ್ಧತಿಗೆ, ಜನಪದ ವೈದ್ಯಪದ್ಧತಿ ತಾಯಿ ಬೇರು. ಈ ಪದ್ಧತಿಯು ಆಯಾ ಪರಿಸರ ಸಮೂಹ, ಬುಡಕಟ್ಟು ಸಮುದಾಯಗಳಲ್ಲಿ, ಭಿನ್ನ ಭಿನ್ನವಾದ ರೀತಿಯಲ್ಲಿಯೇ ಬಳಕೆಯಲ್ಲಿ ಬಂದಿದೆ. ಆದರೂ ಅವುಗಳ ಮೂಲ ಉದ್ದೇಶ, ರೋಗ ರುಜಿನಗಳನ್ನು ಹೊಡೆದೋಡಿಸುವುದಾಗಿದೆ.



ಗೊಂದಲಿಗರು ಸಾಮಾನ್ಯವಾಗಿ ಕಂಡುಬರುವ ಶಾರೀರಕ ಭಾದೆ, ಜ್ವರ, ತಲೆ ನೋವು, ಮೈಕೈ ನೋವುಗಳು, ಬಂದಲ್ಲಿ ಪಾರಂಪರಿಕ ಗಿಡಮೂಲಿಕೆಗಳ ಔಷದಿಗಳಿಂದಲೇ ಶಮನ ಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ. ನಾಯಿ ಕಚ್ಚಿದಾಗ ನಂಜು ಆಗುತ್ತದೆ ಎಂದು ತಿಳಿದು ನೋವು ಮತ್ತು ನಂಜು ನಿವಾರಣೆ ಆಗಬೇಕಾದರೆ ಉತ್ತರಾಣಿ ಗಿಡದ ತಪ್ಪಲು ಪ್ರತಿ ದಿನ ಬೆಳಗ್ಗೆ ಮತ್ತು ಸಂಜೆ ತಿಂದರೆ ೭ ದಿನಗಳಲ್ಲಿ ನೋವು-ನಂಜು ಉಪಶಮನವಾಗುತ್ತದೆ. ತಲೆ ನೋವು ಬಂದರೆ, ಬಳ್ಳೊಳ್ಳಿ ಅರೆದು ಹಣೆಯ ಬಲಗಡೆಯ ಭಾಗ ಹಾಗೂ ಎಡಗಡೆಯ ಭಾಗಕ್ಕೂ ಹಚ್ಚಿ ಕೊಳ್ಳಬೇಕು ಇದನ್ನು ದಿನಕ್ಕೆ ೩ ಸಲ ಹಚ್ಚಿಕೊಂಡರೆ ತಲೆ ನೋವು ಮಾಯವಾಗುತ್ತದೆ. ಹೊಟ್ಟೆ ನೋವು ಬಂದಾಗ ವೀಳ್ಯದೆಲೆ

ಮತ್ತು ಸ್ವಲ್ಪ ಉಪ್ಪನ್ನು ಕೂಡಿಸಿ ಬಾಯಲ್ಲಿ ಸುರಿಸಿ ತಿಂದರ ಹೊಟ್ಟೆ ನೋವು ಕಡಿಮೆಯಾಗುತ್ತದೆ. ಕಾಲಿಗೆ ಅಥವಾ ಕೈಗೆ ಪೆಟ್ಟಾಗಿ ಬಾವು ಬಂದರೆ ಅರಿಶಿಣದ ಕೊಂಬನ್ನು ತೇಯ್ದು, ಅದಕ್ಕೆ ಹಚ್ಚಿದರೆ ನೋವು, ಗಾಯ ಕಡಿಮೆಯಾಗುತ್ತದೆ. ಈ ರೀತಿಯ ಜನಪದ ವೈದ್ಯ ವಿಧಾನವನ್ನು ಈಗಲೂ ಹಿರಿಯ ತಲೆಮಾರಿನ ಜನರು ಅದನ್ನೇ ಅನುಸರಿಸುತ್ತಾರೆ.

ಆಧುನಿಕ ಶೈಲಿಯ ಇಂದಿನ ಕಾಲದಲ್ಲಿ, ವಿಭಿನ್ನ ರೀತಿಯ ರೋಗ ರುಜಿನಗಳು ಕಂಡುಬರುತ್ತಿರುವು ದರಿಂದ ಈ ರೋಗಗಳ ಪರಿಹಾರಕ್ಕಾಗಿ ಪಾರಂಪರಿಕ ಔಷಧಿಗೆ ಮೊರೆಹೋಗದೇ ಮತ್ತು ಅದರ ಗೋಜಿಗೂ ಹೋಗದೆ, ಆಧುನಿಕ ವೈದ್ಯಕೀಯ ಸೌಲಭ್ಯಗಳನ್ನು ಹಾಗೂ ಚಿಕಿತ್ಸೆಯನ್ನು ಪಡೆದು ಕೊಳ್ಳುತ್ತಿದ್ದಾರೆ. ಹೆರಿಗೆಯ ಸಂದರ್ಭದಲ್ಲಂತೂ, ಯಾವದೇ ರೀತಿ ಸಮುದಾಯದಲ್ಲಿರ ಬಹುದಾದ ಸೂಲಗಿತ್ತಿಯರ ಸಹಾಯ ಪಡೆದುಕೊಳ್ಳದೇ, ನೇರವಾಗಿ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಳ್ಳುತ್ತಾರೆ. ಪ್ರಮುಖವಾಗಿ ಹೆರಿಗೆಗಿಂತ ಪೂರ್ವದಲ್ಲಿ ಅಂದರೆ ಗರ್ಭಿಣಿಯಾದ ದಿನದಿಂದಲೇ ಸ್ತ್ರೀರೋಗ ತಜ್ಞ ವೈದ್ಯರನ್ನು ಸಂಪರ್ಕಿಸಿ ಅವರಿಂದ ಸಲಹೆಗಳನ್ನು ಪಡೆದುಕೊಳ್ಳುತ್ತಿರುವುದು, ಹೆರಿಗೆಯ ಅವಧಿಯವರೆಗೂ ವೈದ್ಯರಿಂದ ತಿಂಗಳು-ತಿಂಗಳು ಚಿಕಿತ್ಸೆಯನ್ನು ಪಡೆದುಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಆದರೆ ಈ ರೀತಿಯ ವಿಧಾನದಲ್ಲಿಯ ಚಿಕಿತ್ಸೆಯನ್ನು ಕೇವಲ ಮುಂದುವರೆದ ಹಾಗೂ ಸುಶಿಕ್ಷಿತ ಜನಸಮೂಹ ದಲ್ಲಿ ಮಾತ್ರ ಕಾಣುತ್ತೇವೆ. ಹೀಗೆ ಗೊಂದಲಿಗರು ಆಧುನಿಕ ಕಾಲದಲ್ಲಿ ಆಧುನಿಕ ವೈದ್ಯ ಪದ್ಧತಿಗೆ ಒಳಗಾಗಿದ್ದಾರೆಂದೇ ಹೇಳಬೇಕು.

### ೩.೯ ಜಾತಿ ಪಂಚಾಯತಿ

ಪ್ರತಿಯೊಂದು ಸಮುದಾಯಕ್ಕೆ ತನ್ನದೇ ಆದ ಕಾನೂನು ಕಟ್ಟಳೆಗಳು ಇರುತ್ತವೆ. ಅವುಗಲನ್ನೆಲ್ಲ ಸಮುದಾಯದ ಜನರು ಕಟ್ಟುನಿಟ್ಟನಿಂದ ಪಾಲಿಸಬೇಕಾಗುತ್ತದೆ. ಆಯಾ ಸಮುದಾಯದ ಹಿರಿಯರನ್ನು ಕೂಡಿಸಿ ಸಮುದಾಯದ ಅಂತರಿಕ ಹಾಗೂ ಬಾಹ್ಯ ಭದ್ರತೆ, ನ್ಯಾಯ ವ್ಯವಸ್ಥೆ ಕಾಪಾಡಲು ಸಮೀತಿ ಯನ್ನು ರಚಿಸಿರುತ್ತಾರೆ. ಅದನ್ನೇ ಕುಲಪಂಚಾಯತಿ ಎಂದು ಕರೆಯುತ್ತಾರೆ. ತಮ್ಮ ತಮ್ಮ ಅಂದರೆ ಸಮುದಾಯದ ಪರಿಶುದ್ಧತೆಯನ್ನು ಕಾಪಾಡಲು, ಸದಸ್ಯರುಗಳ ಮಧ್ಯದಲ್ಲಿಯ ಭಿನ್ನಾಭಿಪ್ರಾಯಗಳನ್ನು ಪರಿಹರಿಸಲು, ಜಾತಿಯ ಅಡಿಯಲ್ಲಿ ಕೈಗೊಳ್ಳುವ ಕಾರ್ಯಕ್ರಮಗಳ ಮೇಲ್ವಿಚಾರಣೆ ಮುಂತಾದ ಕಾರ್ಯಗಳಿಗಾಗಿ ಕುಲಪಂಚಾಯಿತಿಯನ್ನು ಹೊಂದಿರುತ್ತದೆ.

ಗೊಂದಲಿಗರ ಸಮುದಾಯದಲ್ಲಿಯೂ ಯಾವುದೇ ರೀತಿಯ ತಪ್ಪು ನಡುವಳಿಕೆಗಳು, ಕುಲಕ್ಕೆ ಸಂಬಂಧಪಟ್ಟಂತ ಆಚರಣೆಗಳು, ಸಾಂಪ್ರದಾಯಿಕ ಆಚರಣೆಗಳು, ಪದ್ಧತಿ-ಪರಂಪರೆಯ ಬಗ್ಗೆ, ಕಂಡುಬರುವ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸುವ ಸಲುವಾಗಿ, ಕುಲ ಪಂಚಾಯತ ವ್ಯವಸ್ಥೆ ಇರುವುದನ್ನು ಕಂಡುಬರುತ್ತದೆ. ಗೊಂದಲಿಗರಲ್ಲಿರುವ ಉಪಪಂಗಡಗಳಾದ, ಗೊಂದಲ ವೃತ್ತಿಗಾಯಕರು, ಭೂತೇಯರು, ಸಿಂಗದವರು, ಬುಡಬುಡಕೆಯವರು, ವಾಸುದೇವ, ಜ್ಯೋತಿಷಿಗಳು ಮೇಲ್ನೋಟದಲ್ಲಿ

ಬೇರೆ-ಬೇರೆಯಾಗಿ ಕಂಡರೂ, ಸಾಂಸ್ಕೃತಿಕವಾಗಿ ಇವರೆಲ್ಲರೂ ಒಂದೇ. ಇವರು ಊರೂರು ಅಲೆಯುತ್ತಿದ್ದರೂ ಪ್ರಾದೇಶಿಕವಾಗಿ ಒಂದೊಂದು ನಿರ್ದಿಷ್ಟ ಮೂಲ ನೆಲೆಯಲ್ಲಿ ನೆಲೆ ಕಂಡುಕೊಂಡಿರುವುದನ್ನು ಕಾಣುತ್ತೇವೆ. ಅಷ್ಟೇ ಅಲ್ಲ ಒಂದು ಊರಿನಲ್ಲಿ ನೆಲೆ ಕಂಡುಕೊಳ್ಳುತ್ತಿರುವ ಗೊಂದಲಿಗರು ಚದುರಿದ ರೀತಿಯಲ್ಲಿ ವಾಸಿಸದೇ ಊರಿನ ನಿರ್ದಿಷ್ಟ ಭಾಗದಲ್ಲಿ ಒಟ್ಟಾಗಿ ನೆಲೆಸಿರುವುದರಿಂದ, ಅವರು ಇರುವ ಪ್ರದೇಶವನ್ನು ಗೊಂದಲಿ ಗಲ್ಲಿ, ಗೊಂದಲಿ ಓಣಿ ಎಂದು ಕರೆಯಲಾಗುತ್ತಿದ್ದು, ಇಂತಹ ನೆಲೆಗಳಲ್ಲಿ ಕುಲ ಪಂಚಾಯತ ಅಸ್ತಿತ್ವದಲ್ಲಿ ಇರುವುದು ಕಂಡುಬರುತ್ತದೆ. ಗೊಂದಲಿಗರಲ್ಲಿ ಕಂಡುಬರುವ ಬೆಡಗುಗಳನ್ನು ಗಮನಿಸಿದಾಗ, ಅವರಲ್ಲಿ ಕೆಲವರು ಮಾನದಾರರು, ಇನ್ನುಳಿದವರು ಗೋತಾ ಅಂತಾ ವರ್ಗೀಕರಿಸುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿಯೇ ಕುಲ ಪಂಚಾಯಿತಿ ರಚಿಸಿರುವುದನ್ನು ಕಾಣುತ್ತೇವೆ. ಈ ವ್ಯವಸ್ಥೆಯಲ್ಲಿ ನಾಯಕ(ಗೌಡ) ಪಾಯಿಕ್(ಚೇರಮನ್) ಗೋತಾ(ವಾಲೀಕಾರರು) ಇರುವರು. ಜೊತೆಗೆ ಸಮುದಾಯದ ಹಿರಿಯರನ್ನು ಪಂಚರೆಂದು ನೇಮಿಸುತ್ತಾರೆ. ಸಮುದಾಯದ ತಂಟೆ-ತಕರಾರುಗಳನ್ನು ಬಗೆಹರಿಸುವದು, ಗೊಂದಲ, ವಿವಾಹ, ಜಾತ್ರೆ, ಹೆಣ್ಣು ನಿಶ್ಚಯ ಮಾಡುವುದು, ಹಬ್ಬ-ಹುಣ್ಣಿಮೆ, ಹುಟ್ಟು-ಸಾವು ಪ್ರತಿಯೊಂದು ಕಾರ್ಯಗಳನ್ನು ಈ ಮುಖಂಡರ ಮುಂದಾಳತ್ವದಲ್ಲಿಯೆ ನಡೆಯುತ್ತವೆ. ಅಂದರೆ ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಕಾರ್ಯಗಳೆಲ್ಲ ಇವರ ಮುಂದಾಳತ್ವ ಮತ್ತು ಮಾರ್ಗದರ್ಶನದಲ್ಲಿಯೇ ನಡೆಯುತ್ತವೆ. ನಿಗದಿಪಡಿಸಿದ ದಿನದಂದು ನಡೆಯಬೇಕಿರುವ ನ್ಯಾಯ ಪಂಚಾಯಿತಿ ಬಗ್ಗೆ ಸಮುದಾಯದ ಎಲ್ಲರಿಗೂ ವಾಲೀಕಾರನು ತಿಳಿಸುತ್ತಾನೆ. ಎಲ್ಲರೂ ಸೇರಿದ ನಂತರ, ನ್ಯಾಯ ಪಂಚಾಯಿತಿ ಪ್ರಾರಂಭಗೊಳ್ಳುತ್ತವೆ. ಇಲ್ಲಿ ನೀಡುವ ತೀರ್ಮಾನಕ್ಕೆ ಎಲ್ಲರೂ ಬದ್ಧರಾಗಿರಬೇಕು.

ಸಮುದಾಯದ ಹಿಂದಿನ ಹಿರಿಯರ ಕುಲಪದ್ಧತಿ ಪರಂಪರೆಗಳನ್ನು ಎಲ್ಲರೂ ಪಾಲಿಸಿಕೊಂಡು ಬರುವುದರ ಜೊತೆಗೆ, ಸಮುದಾಯದ ಗೌರವ, ಮಾನ-ಮಾರ್ಯದೆ ಕಾಪಾಡಿಕೊಂಡು, ಸಮುದಾಯದ ನಿಯಮಗಳನ್ನು ಪಾಲಿಸಿಕೊಂಡು ಹೋಗುವಂತೆ, ಕುಲ ಪಂಚಾಯಿತಿಯು ನೋಡಿಕೊಳ್ಳುತ್ತದೆ. ಸಮುದಾಯದ ದೈವ ಸಂಬಂಧಿ ಆಚರಣೆಗಳನ್ನು ಕ್ರಮಬದ್ಧವಾಗಿ ಆಚಾರಿಸುವಂತೆ ಮತ್ತು ಅಂತಹ ದೈವೀಸಂಬಂಧಿ ಆಚರಣೆಗಳಿಗೆ, ಜಾತ್ರೆಗೆ, ಸಮುದಾಯದ ಎಲ್ಲರೂ ಪಾಲ್ಗೊಳ್ಳುವಂತೆ ಕುಲ ಪಂಚಾಯಿತಿ ನೋಡಿಕೊಳ್ಳುತ್ತದೆ. ಸಮುದಾಯದಲ್ಲಿಯ ಜನರು ಯಾವುದೇ ರೀತಿ ಸಮಾಜ ಬಾಹಿರವಾದ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದರೆ ಅಂಥವರನ್ನು ಪಂಚಾಯತಿಗೆ ಕರೆಯಿಸಿ ಶಿಕ್ಷೆ/ದಂಡ ವಿಧಿಸುವುದರ ಜೊತೆಗೆ ಕುಲದಿಂದ ಬಹಿಷ್ಕಾರ ಹಾಕುವ ಅಧಿಕಾರವನ್ನು ಈ ಕುಲಪಂಚಾಯಿತಿ ಹೊಂದಿದೆ.

ಆಧುನಿಕತೆಯ ಪ್ರಭಾವದಿಂದ ಇಂದು ಗೊಂದಲಿಗರ ಕುಲಪಂಚಾಯತಿಗಳು ಕ್ಷೀಣಿಸುತ್ತಿದ್ದುದು ಕಂಡುಬರುತ್ತಿದೆ. ನ್ಯಾಯಗಳನ್ನು ಕೋರ್ಟ್ ಕಛೇರಿ, ಪೋಲಿಸರ್ ಹತ್ತಿರ ತೆಗೆದುಕೊಂಡು ಹೋಗುತ್ತಿರುವುದು ಕಂಡುಬರುತ್ತಿದೆ. ನಗರ ಪ್ರದೇಶಗಳಿಗೆ ಸಮೀಪದಲ್ಲಿರುವ ಗೊಂದಲಿಗರು ಆಧುನಿಕ

ನ್ಯಾಯ ಪದ್ಧತಿಗೆ (ನ್ಯಾಯಾಲಯಗಳಿಗೆ) ಮೊರೆ ಹೋಗುತ್ತಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿರುವವರು ಮಾತ್ರ ತಮ್ಮ ವ್ಯಾಜ್ಯಗಳನ್ನು ತಮ್ಮ ಕುಲಪಂಚಾಯಿತಿಯಲ್ಲಿಯೇ ಬಗೆ ಹರಿಸಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಒಂದು ಕಾಲದಲ್ಲಿ ಅತ್ಯಂತ ಬಿಗಿಯಾಗಿದ್ದ ಗೊಂದಲಿಗರ ಕುಲಪಂಚಾಯಿತಿ ವ್ಯವಸ್ಥೆ ಇಂದು ಸಡಿಲವಾಗುತ್ತಿರುವುದನ್ನು ಕಾಣುತ್ತಿದ್ದೇವೆ.

## ೩.೧೦ ನ್ಯಾಯ ಪದ್ಧತಿ

ಸಮುದಾಯದೊಳಗಿನ ಕುಟುಂಬಗಳಲ್ಲಿ ಸಣ್ಣ-ಪುಟ್ಟ ವಿಚಾರಗಳಿಗೆ ಒಂದಲ್ಲಾ ಒಂದು ಭಿನ್ನಾಭಿಪ್ರಾಯ, ತಂಟೆ ತಕರಾರುಗಳು ಕಂಡುಬರುವುದು ಸಹಜ. ಕೆಲವರು ತಮ್ಮ ತಮ್ಮಲ್ಲಿಯೇ ಕುಲಪಂಚಾಯತಿಗಳ ಮೂಲಕ ನ್ಯಾಯಗಳನ್ನು ಬಗೆಹರಿಸಲು ಪ್ರಯತ್ನಿಸಿದರೆ, ಇನ್ನೂ ಕೆಲವು ನ್ಯಾಯಗಳು ಬಗೆಹರಿಯದೇ ಕೊರ್ಟು ಕಛೇರಿಗಳ ಮೆಟ್ಟಿಲೇರಿರುವುದು ಉಂಟು. ಪರಂಪರೆಯ ಹಿನ್ನೆಲೆಯಲ್ಲಿ ಬೆಳೆದು ಬಂದ ಬುಡಕಟ್ಟು ಸಮುದಾಯಗಳಲ್ಲಿ ಎಂತಹದೇ ಭಿನ್ನಾಭಿಪ್ರಾಯಗಳಿರಲಿ, ತಂಟೆ-ತಕರಾರುಗಳಿರಲಿ ಅವುಗಳನ್ನು ತಮ್ಮದೇ ಆದ ನ್ಯಾಯ ನೀತಿಯ ಮೂಲಕ ಬಗೆಹರಿಸಿ ಕೊಳ್ಳುವುದನ್ನು ಕಾಣುತ್ತೇವೆ. ಆದರೆ ಇಂದು ಆ ಸ್ಥಿತಿಯನ್ನು ಬುಡಕಟ್ಟು ಸಮುದಾಯಗಳಲ್ಲಿ ಕಾಣಲು ಸಾಧ್ಯವಾಗುತ್ತಿಲ್ಲ.

"ಒಂದು ಜನ ಸಮುದಾಯ ನಂಬಿಕೆ, ಆಚರಣೆ, ಆದರ್ಶ ಮೌಲ್ಯಗಳು, ನ್ಯಾಯ ನಿರ್ಣಯಗಳ ಪದ್ಧತಿಗಳನ್ನು ರೂಪಿಸುತ್ತವೆ".[೮] ಈ ಹಿನ್ನೆಲೆಯಲ್ಲಿ ಭಾರತೀಯ ಸಮಾಜದಲ್ಲಿ ಬೆಳೆದು ಬಂದ ಜಾತಿ ಪದ್ಧತಿಯಲ್ಲಿ, ಜಾತಿ ಪಂಚಾಯಿತಿಯು, ನ್ಯಾಯ ಪಂಚಾಯಿತಿಯ ಕಾರ್ಯಗಳನ್ನು ಮಾಡುತ್ತಾ ಬಂದಿರುವುದು ಇತಿಹಾಸ. ಬುಡಕಟ್ಟು ಸಮುದಾಯಗಳಲ್ಲಿ ನ್ಯಾಯಪದ್ಧತಿ ಅತ್ಯಂತ ಗೌರವ ಮತ್ತು ನಿಷ್ಠೆಯಿಂದ ನಡೆಯಲ್ಪಡುತ್ತದೆ. 'ಪ್ರಾಣಕ್ಕಿಂತ ಮಾನವೇ ಹೆಚ್ಚು' ಎಂಬ ಸಿದ್ಧಾಂತಕ್ಕೆ ಅಂಟಿಕೊಂಡ ಬುಡಕಟ್ಟು ಸಮುದಾಯಗಳಲ್ಲಿಯ ನ್ಯಾಯ ಪದ್ಧತಿಯು ಒಂದು ಕಾಲಕ್ಕೆ ಆಯಾ ಸಮುದಾಯಗಳ ಸಂಘಟನಾ ವ್ಯವಸ್ಥೆಯ ಹಿನ್ನೆಲೆಯಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿತ್ತು.

ಗೊಂದಲಿಗರ ಸಮುದಾಯದಲ್ಲಿಯೂ ಕೂಡಾ ತನ್ನದೇ ಆದ ಕಟ್ಟುನಿಟ್ಟಿನಿಂದ ಕೂಡಿದ ನ್ಯಾಯ ಪದ್ಧತಿ ಕ್ರಮ ಅನುಸರಿಸುತ್ತಿದ್ದು, ಕರ್ನಾಟಕ ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿ, ಇವರ ನ್ಯಾಯ ನಿರ್ಣಯಗಳು ಒಂದೇ ತೆರನಾಗಿವೆ. ಇವರು ಎಂತಹದೇ ಸಮಸ್ಯೆಗಳಿದ್ದರೂ, ಕೊರ್ಟು-ಕಛೇರಿ, ಪೋಲಿಸ್ ಸ್ಟೇಶನ್‌ಗಳಿಗೆ ತೆಗೆದುಕೊಂಡು ಹೋಗದೆ, ಸಮುದಾಯದ ಪಂಚರ ಮೂಲಕ ಬಗೆಹರಿಸಿಕೊಳ್ಳುತ್ತಾರೆ. ನ್ಯಾಯ ನಿರ್ಣಯದಲ್ಲಿ ತಪ್ಪಿತಸ್ಥರು ಎಂದು ಖಚಿತವಾದ ನಂತರ ಪಂಚರ ಹೇಳಿಕೆಗಳನ್ನು ಅವರು ಕಡ್ಡಾಯವಾಗಿ ಒಪ್ಪಿ ಕೊಳ್ಳಬೇಕಾಗುತ್ತದೆ. ಆಕಸ್ಮಿಕವಾಗಿ ನಿರ್ಣಯವನ್ನು ಒಪ್ಪದಿದ್ದರೆ, ಮುಂದಿನ ಮನೆ, ಅಂದರೆ ತಮಗಿಂತಲೂ ಗೊಂದಲಿಗರ ದೊಡ್ಡ ಸಮಾಜವಿರುವ ಬೇರೆ ಊರಿನ ಹಿರಿಯರನ್ನು ಕರೆಯಿಸುತ್ತಾರೆ. ಹಾಗೆಯೇ ನ್ಯಾಯ ಹೇಳಲು ಬಂದ ಹಿರಿಯರಿಗೆ ಬರುವ-ಹೋಗುವ ವೆಚ್ಚವನ್ನು, ಊಟದ ಖರ್ಚು-ವೆಚ್ಚವನ್ನು ತಪ್ಪಿತಸ್ಥರೇ ಕೊಡಬೇಕಾಗುತ್ತದೆ.

"ಸಮಾಜದ ಪ್ರತಿಷ್ಠೆಗೆ ಧಕ್ಕೆ ತರುವಂತಹ ಅಪರಾಧ ಮಾಡಿದ್ದಲ್ಲಿ ಅಂಥಹವರಿಗೆ ಸಮಾಜದ ಬಳಕೆ ಮಾಡದೆ, ಸಮಾಜದಿಂದ ದೂರ ಇಡುವ ಅಧಿಕಾರವನ್ನು ಕುಲ ಪಂಚಾಯಿತಿಯವರು ನಿರ್ಣಯ ತೆಗೆದುಕೊಳ್ಳಬಹುದು. ಸಮಾಜದಲ್ಲಿ ಯಾರಿಗಾದರೂ ಹೊಡೆದು ಹಲ್ಲು ಮುರಿದಲ್ಲಿ, ಬಾಯಿಂದ ಕಚ್ಚಿದಲ್ಲಿ ಮತ್ತು ಮಾರಕಾಸ್ತ್ರಗಳಿಂದ ಹೊಡೆದಲ್ಲಿ, ಅಂತಹ ತಪ್ಪಿತಸ್ಥರಿಗೆ ಮದುವೆ ಮುಹೂರ್ತ ಕಾರ್ಯಗಳಲ್ಲಿ ಭಾಗವಹಿಸದಂತೆ ನಿರ್ಬಂಧಿಸಿ, ಶಿಕ್ಷೆ ಕೊಡುವಂತೆ ನ್ಯಾಯ ನಿರ್ಣಯ ಮಾಡಬಹುದು".[೧೫] ಪಂಚರು ಕೊಟ್ಟ ನಿರ್ಣಯಕ್ಕೆ ತಪ್ಪಿತಸ್ಥರು ಮನ್ನಣೆ ಕೊಡದಿದ್ದರೆ, ಸಮಾಜ ಬಾಹಿರ ಎಂದು ಪರಿಗಣಿಸಿ, ಕುಲದ ಹೊರಗೆ ಇಡಲು ಸೂಚಿಸುತ್ತಾರೆ. ಸಮಾಜದಿಂದ ಇವರಿಗೆ ಯಾವದೇ ಸಹಾಯ ಸಹಕಾರಗಳು ಸಿಗುವದಿಲ್ಲ. ಮಾತು-ಕಥೆ, ಕೊಡುಕೊಳ್ಳುವಿಕೆ, ಸಾವು-ನೋವು ಯಾವುದೇ ಕೆಲಸಗಳಿಗೂ ಇವರನ್ನು ಸೇರಿಸಿಕೊಳ್ಳುವುದಿಲ್ಲ. ಆದರೆ ತಪ್ಪಿತಸ್ಥರು, ಪಂಚರು ಹೇಳುವ ದಂಡ ನೀಡಿ ಕ್ಷಮೆ ಕೇಳಿದ ನಂತರವೇ ಸಮುದಾಯದ ಒಳಗೆ ಪ್ರವೇಶ ದೊರೆಯುತ್ತದೆ. ಕುಲದ ಒಳಗೆ ಸೇರಿಸಿಕೊಳ್ಳುವ ವಿಷಯವನ್ನು ಸಮಾಜದವರೆದುರಿಗೆ ಹೇಳಬೇಕಾದುದು ಪಂಚರ ಕರ್ತವ್ಯವಾಗಿದೆ.

ಗೊಂದಲಿಗ ಸಮುದಾಯದಲ್ಲಿ ಯಾವುದೇ ನ್ಯಾಯ-ನಿರ್ಣಯಗಳನ್ನು ಹಿರಿಯರೆಲ್ಲ ಗುಡಿಕಟ್ಟೆ, ಬಯಲು ಅಥವಾ ಗುಡಿಸಲು ಮುಂದೆ ಸೇರಿ, ಆ ಜಾಗವನ್ನು ನ್ಯಾಯಲಯವನ್ನಾಗಿ ಮಾಡಿಕೊಳ್ಳುತ್ತಾರೆ. ಇಂತಹ ಸಂದರ್ಭದಲ್ಲಿ ಸಮುದಾಯದ ಇತರರು ನೆಲದ ಮೇಲೆ ಕುಳಿತುಕೊಳ್ಳಬೇಕು. ದೇವಸ್ಥಾನವೆಂದರೆ ಪವಿತ್ರ ಸ್ಥಾನ, ನ್ಯಾಯ-ನಿರ್ಣಯದ ತಾಣ. ಹೀಗಾಗಿ ಅದರ ಪಾವಿತ್ರತೆ ಅಷ್ಟೇ ಮುಖ್ಯ. ಈ ಕುರಿತಂತೆ ಮುಂಡರಗಿಯ ಗೊಂದಳಿ ಓಣಿಯಲ್ಲಿ ಇರುವ ಶ್ರೀ ಫಂಡರಾಪುರ-ದುರ್ಗಾದೇವಿ ದೇವಸ್ಥಾನದ ಮುಂಭಾಗದಲ್ಲಿ ಬರೆದಿರುವ ಸೂಚನಾ ಫಲಕದಲ್ಲಿ ಈ ಕೆಳಗಿನ ಅಂಶಗಳನ್ನು ಸೂಚಿಸಿರುವುದನ್ನು ಕಾಣುತ್ತೇವೆ.

| ಅ.ಸಂ | ವಿಷಯಗಳು | ದಂಡ ರೂ. |
|---|---|---|
| ೧ | ಮಂದಿರದ ಒಳಗಡೆ ಬೀಡಿ ಸಿಗರೇಟು ಸೇದಿದರೆ | ೫೧.೦೦ |
| ೨ | ಸರಾಯಿ ಕುಡಿದು ಮಂದಿರದ ಒಳಗಡೆ ಬಂದರೆ | ೧೦೧.೦೦ |
| ೩ | ಸರಾಯಿ ಕುಡಿದು ದಬಾಯಿಗಿರಿಯಿಂದ ಒಳಗಡೆ ಬಂದರೆ | ೨೦೧.೦೦ |
| ೪ | ಸರಾಯಿ ಕುಡಿದು ಪಾದಗಟ್ಟೆ ಅಥವಾ ಕಟ್ಟೆ ಮುಟ್ಟಿದರೆ | ೫೧.೦೦ |
| ೫ | ದೈವದವರು ಗುಡಿಯಲ್ಲಿ ಕೂಡಿದಾಗ ಪ್ರತಿಯೊಂದು ಕೆಲಸ ವಿದ್ದಾಗ, ನ್ಯಾಯ ನಡೆದಾಗ ಕಟ್ಟೆಯ ಮೇಲೆ ಅಥವಾ ಗುಡಿಯ ಎದುರಿನ ಮನೆಗಳ ಕಟ್ಟೆಯ ಮೇಲೆ ಕುಳಿತುಕೊಂಡರೆ | ೨೫.೦೦ |

ಈ ರೀತಿ ದೈವದ ಪ್ರಭಾವ ಹಾಗೂ ದಂಡ ವಿಧಿಸುವ ವ್ಯವಸ್ಥೆ ಗೊಂದಲಿಗ ಸಮುದಾಯದಲ್ಲಿ ಕಟ್ಟುನಿಟ್ಟಾಗಿ ಬೆಳೆದು ಬಂದಿರುವುದನ್ನು ಕಾಣಬಹುದು.

ಗೊಂದಲಿಗ ಸಮುದಾಯದವರು ನ್ಯಾಯ ನಿರ್ಣಯಗಳನ್ನು ನಾಲ್ಕು ಬಗೆಯ ನಿರ್ಣಯಗಳ ಮೂಲಕ ನ್ಯಾಯವನ್ನು ಬಗೆಹರಿಸಿಕೊಳ್ಳುವ ಪದ್ಧತಿ ಬಳಕೆಯಲ್ಲಿ ಇದೆ.

**ನ್ಯಾಯ ಪದ್ಧತಿ :** ೧. ಬೇವಿನ ಕಡ್ಡಿ ನ್ಯಾಯ ೨. ಕವಡೆ ನ್ಯಾಯ
೩. ಅಡಕೆ ನ್ಯಾಯ ೪. ಮೀಸೆ ನ್ಯಾಯ

ಗೊಂದಲಿಗರ ಸಮುದಾಯದಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ಇಲ್ಲವೇ ಅವನ ಕುಟುಂಬಕ್ಕೆ ಅನ್ಯಾಯ ಮಾಡಿದರೆ, ಅನ್ಯಾಯಕ್ಕೆ ಈಡಾದವರು ಒಂದು ಬೇವಿನ ಕಡ್ಡಿಯನ್ನು ತೆಗೆದುಕೊಂಡು ಹಿರಿಯರ ಹತ್ತಿರ ಹೋಗಿ ತಮಗಾದ ಅನ್ಯಾಯ ತೊಂದರೆಯನ್ನು ನಿವೇದನೆ ಮಾಡಿ ಉಂಗುರ ಆಕಾರ ಸುಳ್ಳಿ ಸುತ್ತಿ ಕೊಟ್ಟು ಬರುತ್ತಾರೆ. ಇದನ್ನು '**ಬೇವಿನ ಕಡ್ಡಿ ನ್ಯಾಯ**' ಎನ್ನುತ್ತಾರೆ. ಆದಷ್ಟು ಬೇಗ ನ್ಯಾಯ ನಿರ್ಣಯಿಸಲು ಇದರಿಂದ ಸಾಧ್ಯವಾಗುತ್ತದೆ. ನ್ಯಾಯದ ಸ್ವರೂಪ ಅಥವಾ ತೀವ್ರತೆಯನ್ನು ಹಿರಿಯರು ಗಮನಿಸಿ ನ್ಯಾಯ ನಿರ್ಣಯವನ್ನು ಯಾವ ಸಂದರ್ಭದಲ್ಲಿ ಮತ್ತು ಯಾವ ಕಾಲದಲ್ಲಿ ಇತ್ಯರ್ಥಗೊಳಿಸಬೇಕು ಎಂಬುದರ ಬಗ್ಗೆ ತೀರ್ಮಾನಿಸುತ್ತಾರೆ. ಕೆಲ ಸಂದರ್ಭಗಳಲ್ಲಿ ಕೆಲ ನ್ಯಾಯಗಳ ಬಗ್ಗೆ ಅಥವಾ ಆಷಾಢ ಮಾಸದಲ್ಲಿ ನಿರ್ಣಯಿಸುವುದನ್ನು ಗೊತ್ತು ಮಾಡುತ್ತಾರೆ. ಈ ನ್ಯಾಯ ಪದ್ಧತಿಗಳ ವೈಶಿಷ್ಟವೆಂದರೆ ಬೇವಿನಕಡ್ಡಿಯ ಬದಲಾಗಿ ಕವಡೆಯನ್ನು ಇಟ್ಟರೆ '**ಕವಡೆ ನ್ಯಾಯ**', ಅಡಕೆಯನ್ನು ಇಟ್ಟರೆ '**ಅಡಕೆ ನ್ಯಾಯ**'. ಕೆಲವು ಸಂದರ್ಭದಲ್ಲಿ ಗಂಡಸುತನದ ಪ್ರಶ್ನೆ ಬಂದಾಗ ಮೀಸೆಯನ್ನು ಕಿತ್ತು, ಗಂಟು ಕಟ್ಟಿ, ಹಿರಿಯರ ಕೈಗೆ ಹಾಕುವದನ್ನು '**ಮೀಸೆ ನ್ಯಾಯ**' ಎಂದು ಕರೆಯುವರು.

"ನ್ಯಾಯ ನಿರ್ಣಯಕ್ಕಾಗಿ ಹಿರಿಯರು ದೇವಸ್ಥಾನದ ಎದುರಿಗಿರುವ ಬಯಲು ಕಟ್ಟೆ ಅಥವಾ ಗುಡಿಸಲುಗಳ ಮುಂದೆ ಸೇರಿ ಅದನ್ನೇ ನ್ಯಾಯ ಸ್ಥಳವೆಂದು ಗುರುತಿಸಿಕೊಳ್ಳುತ್ತಾರೆ. ಇವರಿಗೆ ಸ್ಥಿರವಾದ ನ್ಯಾಯಾಲಯವಿರುವುದಿಲ್ಲ. ವಾದಿ-ಪ್ರತಿವಾದಿಗಳನ್ನು ನ್ಯಾಯ ಸ್ಥಳಕ್ಕೆ ಕರೆಯಿಸುತ್ತಾರೆ. ಇಲ್ಲಿ ಗಂಡಸರ ಸರಿ ಸಮಾನವಾಗಿ ಹೆಂಗಸರು ಕುಳಿತುಕೊಳುವಂತಿಲ್ಲ, ಆದರೆ ಸಾಕ್ಷಿ ಹೇಳಬಹುದು. ಸಾಕ್ಷಿ ಹೇಳುವ ಹೆಂಗಸರು, ಹಿರಿಯರ ಎದುರಿಗಿಟ್ಟ ಬೇವಿನ ಕಡ್ಡಿ, ಅಡಕೆ ಅಥವಾ ಕವಡೆ ಮುಟ್ಟಿ, ಇಲ್ಲವೇ ಶಕ್ತಿ ದೇವತೆಗಳ ಮೇಲೆ ಆಣೆ ಮಾಡಿ ಸಾಕ್ಷಿ ಹೇಳಬೇಕಾಗುತ್ತದೆ. ವಾದಿ-ಪ್ರತಿವಾದಿಗಳ ಮತ್ತು ಸಾಕ್ಷಿದಾರರ ವಿಚಾರಣೆಯ ನಂತರ ತಪ್ಪಿತಸ್ಥರು ಯಾರು ಎಂಬುದು ಸಾಬೀತು ಆಗುತ್ತದೆ. ಇದನ್ನು ಹಿರಿಯರಲ್ಲಿಯೇ ಮುಖ್ಯಸ್ಥನಾದವನು ತಪ್ಪಿತಸ್ಥನ ತಪ್ಪುಗಳನ್ನು ಸಾರಿ ಹೇಳುತ್ತಾನೆ. ನಂತರದಲ್ಲಿ ಆತ ನೀಡುವ ನಿರ್ಣಯಗಳನ್ನು ತಪ್ಪಿತಸ್ಥರು ಒಪ್ಪಿ ಕೊಳ್ಳಲೇಬೇಕಾಗುತ್ತದೆ."[೨೪]

"ಹೆಂಡತಿ ಗಂಡನಿಗೆ ಅನ್ಯಾಯ ಮಾಡಿದ್ದರೆ ಅವಳ ಕೊರಳಲ್ಲಿ ಸಣ್ಣ ಕಲ್ಲು ಕಟ್ಟಿ ಗುಡಿ ಸುತ್ತಿಸುವದು. ಗಂಡ ಹೆಂಡತಿಗೆ ಅನ್ಯಾಯ ಮಾಡುತ್ತಿದ್ದರೆ, ಸುಮ್ಮ-ಸುಮ್ಮನೆ ಕಿರುಕುಳ ಕೊಡುತ್ತಿದ್ದರೆ, ಅಂತಹ ವ್ಯಕ್ತಿಗೆ ಬೆನ್ನಿನ ಮೇಲೆ ಕಲ್ಲು ಹೊರಿಸಿ ನಿಲ್ಲಿಸಿ ಕ್ಷಮೆ ಬೇಡಿಸುತ್ತಾರೆ. ಇನ್ನೊಮ್ಮೆ ಈ

ರೀತಿಯ ತಪ್ಪು ಮಾಡುವುದಿಲ್ಲವೆಂದು ಪ್ರಮಾಣ ಮಾಡಬೇಕಾಗುತ್ತದೆ. ಬಳಿಕ ಹಿರಿಯರು ನೀಡಿದ ದಂಡವನ್ನು ಕೊಡಬೇಕಾಗುತ್ತದೆ. ತಪ್ಪಿತಸ್ಥನಿಂದ ಪಡೆದ ದಂಡವನ್ನು ಸಮಾಜದ ಕಾರ್ಯಗಳಿಗೆ ಬಳಸುತ್ತಾರೆ.” ಸಾಮಾನ್ಯವಾಗಿ ನಿರ್ದಿಷ್ಟ ಪಡಿಸುವ ದಂಡವು ಇಂತಿಷ್ಟೆ ಇರಬೇಕೆಂಬ ನಿಯಮವೇನೂ ಇಲ್ಲ. ಅದು ೫ ರೂಪಾಯಿ ಇಂದ ೧೦೦೦ ರೂ. ಗಳವರೆಗೂ, ಅದು ಒಮ್ಮೊಮ್ಮೆ ೧೦೦೦೦ ರೂ.ಗಳವರೆಗೂ ದಂಡ ವಿಧಿಸುತ್ತಿರುವುದನ್ನು ಕಾಣುತ್ತವೆ. “ಪಂಚಾಯಿತಿಯ ತೀರ್ಮಾನದಂತೆ ತಪ್ಪು ಮಾಡಿದವರಿಗೆ ೨೦೦೦, ೫೦೦೦ ಇಲ್ಲವೇ ೧೦೦೦೦ ರೂ.ಗಳವರೆಗೂ ದಂಡವನ್ನು ವಿಧಿಸುತ್ತಾರೆ. ತಪ್ಪು ಮುಂದುವರೆದರೆ ಬಹಿಷ್ಕಾರ. ಇಲ್ಲಿ ನೀಡಿದ ತೀರ್ಮಾನವೇ ಅಂತಿಮ” ಎನ್ನುವ ವಿಷಯ ಪ್ರಸ್ತಾಪಿಸುತ್ತಾರೆ.

ಆಧುನಿಕತೆಯ ಪ್ರಭಾವದಿಂದ ಸಮುದಾಯದಲ್ಲಿ ತಂಟೆ ತಕರಾರುಗಳ ಪ್ರಮಾಣ ಕಡಿಮೆಯಾಗುತ್ತಿವೆ. ಏಕಂದರೆ ತಂಟೆ-ತಕರಾರುಗಳಿಂದ ಸುಸೂತ್ರ ಜೀವನ ನಡೆಸಲು ಸಾಧ್ಯವಾಗದು. ಸುಸಂಸ್ಕೃತತೆ, ತಿಳುವಳಿಕೆ, ನಿಗದಿತ ವೃತ್ತಿಯಲ್ಲಿ ಸಕ್ರೀಯವಾಗಿರುವುದು ಮುಂತಾದ ಅಂಶಗಳಿಂದ ತಂಟೆ ತಕರಾರು ಗಳು ಕಡಿಮೆಯಾಗಲು ಕಾರಣವಾಗಿವೆ. ಅನಿವಾರ್ಯವಾದಾಗ ಮಾತ್ರ ನ್ಯಾಯಪಂಚಾಯಿತಿಗೆ ಅಹವಾಲನ್ನು ತೆಗೆದುಕೊಂಡು ಹೋಗುವದು, ಅಲ್ಲಿಯೇ ನ್ಯಾಯ ಪಡೆದು ಕೊಳ್ಳುವದು ಈಗಲೂ ಮುಂದುವರೆದಿದೆ.

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಸಮುದಾಯದ ಬೇರುಗಳು ಬಹಳ ಆಳವಾಗಿ ಇಳಿದಿದ್ದರೂ, ಆಧುನಿಕ ಕಾಲದಲ್ಲಿ ಸಮಯ ಸಂದರ್ಭಗಳ ಗಾಳಿ-ದಾಳಿಗೆ ಸಿಲುಕಿ ಅದರಲ್ಲಿ ಪರಿವರ್ತನೆಗಳು ಆಗುತ್ತಲೇ ಇವೆ. ಪ್ರಜಾಪ್ರಭುತ್ವದ ಮೌಲ್ಯಗಳು, ಮತಾತೀಕರಣದ ಪರಿಕಲ್ಪನೆಗಳ ಪ್ರಭಾವಗಳ ಹಿನ್ನೆಲೆಯಲ್ಲಿ ಜಾತಿ ವ್ಯವಸ್ಥೆಯು ಸಂಪೂರ್ಣವಾಗಿ ಬದಲಾವಣೆಯಾಗಿಲ್ಲವಾದರೂ, ಅದರಲ್ಲಿಯೂ ಪ್ರಮುಖ ಘಟಕಾಂಶಗಳು ಬದಲಾವಣೆ ಯಾಗಿವೆ. ಪ್ರಮುಖವಾಗಿ ಕುಲ ಪಂಚಾಯತಿ ವ್ಯವಸ್ಥೆಯಂತೂ ಕಣ್ಮರೆಯಾಗಿದೆ ಎನ್ನುವ ಸನ್ನಿವೇಶದಲ್ಲಿ ಗೊಂದಲಿಗ ಸಮುದಾಯದಲ್ಲಿ ಕುಲ ಪಂಚಾಯತಿ ಅದರ ಅಡಿಯಲ್ಲಿ ನ್ಯಾಯ ಪಂಚಾಯತಿ ವ್ಯವಸ್ಥೆಯು ಮುಂದುವರೆಯುತ್ತಿರುವದನ್ನು ಈಗಲೂ ಕಾಣುತ್ತೇವೆ. ಕಾರಣ ಗೊಂದಲಿಗರಲ್ಲಿಯ ನ್ಯಾಯನಿರ್ಣಯ ಪದ್ಧತಿ ವೈಶಿಷ್ಟ್ಯ ಪೂರ್ಣವಾಗಿದ್ದು ಇತರ ಮುಂದು ವರೆದ ಸಮಾಜಕ್ಕೂ ಮಾದರಿಯಾಗಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

### ೩.೧೧ ನಂಬಿಕೆ-ನಿಷೇಧಗಳು

ಪ್ರತಿಯೊಂದು ಸಮುದಾಯದಲ್ಲಿ ಪರಂಪರಾನುಗತವಾಗಿ ಬಂದಿರುವ ನಂಬಿಕೆ-ಆಚರಣೆ, ವಿಧಿ-ವಿಧಾನಗಳು. ಇವುಗಳಿಗೆ ಬದ್ಧವಾದ ಮನಸ್ಸುಗಳು ನಂಬಿಕೆ, ಆಚರಣೆ, ವಿಧಿ-ವಿಧಾನಗಳನ್ನು ಅನುಸರಿಸುತ್ತಾ ಬಂದಿದ್ದು, ವೈಯಕ್ತಿಕ ಹಾಗೂ ಸಾಮೂಹಿಕ ಜೀವನ ವಿಧಾನದ ಮೇಲೆ ಒಂದಿಲ್ಲಾ ಒಂದು ರೀತಿಯಲ್ಲಿ ಪ್ರಭಾವ ಬೀರುತ್ತಾ ಬಂದಿರುವುದು ಕಂಡುಬರುತ್ತದೆ. ಪ್ರತಿಯೊಂದು ಸಮುದಾಯ

ದಲ್ಲಿ ನಂಬಿಕೆ, ಆಚರಣೆಗಳು ಪ್ರಾಚೀನ ಕಾಲದಿಂದ ಬೆಳೆದುಬಂದಿವೆ. ಅವುಗಳನ್ನು ಕಟ್ಟುನಿಟ್ಟನಿಂದ ಆಚರಿಸುತ್ತಲೂ ಬಂದಿದ್ದಾರೆ. ಅವು ಪ್ರತ್ಯಕ್ಷ ಅನುಭವದ ದೃಷ್ಟಿಯಿಂದ ಸತ್ಯವಿರಬಹುದು ಅಥವಾ ಅಸತ್ಯವಿರಬಹುದು. ಅವುಗಳನ್ನು ಪರೀಕ್ಷಿಸಲು ಸಾಧ್ಯವಾಗಬಹುದಾದ ಅಥವಾ ಆಗದೇ ಇರುವ ಎಲ್ಲಾ ಬಗೆಯ ನಂಬಿಕೆಗಳು ಒಂದು ದೃಷ್ಟಿಯಲ್ಲಿ ಸಂಸ್ಕೃತಿಯ ಮೂಲಾಂಶಗಳಾಗಿವೆ. ಸಮುದಾಯದ ಜನರು ಅನೇಕ ಸಂಗತಿಗಳ ಕುರಿತು ಪ್ರಶ್ನಾತೀತವಾದ ನಂಬಿಕೆ-ನಿಷೇಧಗಳನ್ನು ಹೊಂದಿದವರಾಗಿದ್ದಾರೆ.

ಬುಡಕಟ್ಟು ಸಮುದಾಯಗಳಲ್ಲಿ ದೇವರು, ದೈವತ್ವದ ಬಗ್ಗೆ ಬಲವಾದ ನಂಬಿಕೆ ಹೊಂದಿದ್ದಾರೆ. ಜೊತೆಗೆ ಶುಭ-ಅಶುಭ, ಒಳ್ಳೆಯದು-ಕೆಟ್ಟದ್ದೂ ಎನ್ನುವ ವಿಷಯಕ್ಕೂ ಸಂಬಂಧಪಟ್ಟಂತೆ ಹಲವಾರು ನಂಬಿಕೆ, ವಿಧಿ ನಿಷೇಧಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ನಂಬಿಕೆ-ಮೂಢನಂಬಿಕೆಗಳ ಅಂಧಶ್ರದ್ಧೆಯ ಬಗ್ಗೆ ಬಲವಾದ ನಂಬಿಕೆಯನ್ನು ಪಾರಂಪರಿಕವಾಗಿ ಬೆಳೆಸಿಕೊಂಡು ಬಂದಿದ್ದು, ದೈನಂದಿನ ಬದುಕಿನ ಉದ್ದಕ್ಕೂ ಅವುಗಳ ಪ್ರಭಾವಕ್ಕೆ ಒಳಗಾಗಿರುತ್ತಾರೆ, ಎಂದರೆ ತಪ್ಪಾಗಲಾರದು. ಗೊಂದಲಿಗರು ಪಾರಂಪರಿಕವಾಗಿ ಹಲವಾರು ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿದ್ದು ಅವುಗಳನ್ನು ೩ ಭಾಗಗಳಲ್ಲಿ ವಿಂಗಡಿಸಲಾಗಿದೆ.

೧ ಧಾರ್ಮಿಕ ನಂಬಿಕೆಗಳು

೨ ಸಾಂಸ್ಕೃತಿಕ ನಂಬಿಕೆಗಳು

೩. ಮೂಢನಂಬಿಕೆಗಳು

**೧. ಧಾರ್ಮಿಕ ನಂಬಿಕೆಗಳು :** ಮೂಲತಃ ಶಕ್ತಿದೇವತೆಯ ಉಪಾಸಕರಾಗಿರುವ ಗೊಂದಲಿಗರು ಆ ಹಿನ್ನೆಲೆಯಲ್ಲಿ ಕೆಲವು ಧಾರ್ಮಿಕ ನಂಬಿಕೆಗಳನ್ನು ಬೆಳೆಸಿಕೊಂಡಿದ್ದಾರೆ. ಅಷ್ಟೇ ಅಲ್ಲ ತಮ್ಮ ತಮ್ಮ ಮೂಲ ಸ್ಥಳಗಳಲ್ಲಿ ಶಕ್ತಿದೇವತೆಯ ದೇವಸ್ಥಾನಗಳನ್ನು ನಿರ್ಮಿಸಿಕೊಂಡು ಬಂದಿರುವುದು ಕಂಡು ಬರುತ್ತದೆ.

- ಶಕ್ತಿ ದೇವಿಯನ್ನು ಆರಾಧಿಸಬೇಕು.
- ದೈವವನ್ನು ನಂಬಬೇಕು.
- ಪ್ರಾಣಿಬಲಿಯ ಹರಕೆಯನ್ನು ಹೊತ್ತರೆ, ದೇವಿಗೆ ಪ್ರಾಣಿ ಬಲಿ ಕೊಡಬೇಕು.
- ಎಲ್ಲಿಯೇ ಹೋಗಿರಲಿ ವರ್ಷದ ಆಷಾಢ ಮಾಸದಲ್ಲಿ ಮೂಲ ಊರಿಗೆ ಬರಬೇಕು. ಆ ಸಂದರ್ಭದಲ್ಲಿ ವಿವಾಹದ ಮಾತು-ಕತೆ ಮಾಡಬೇಕು.
- ಆಷಾಢಮಾಸದಲ್ಲಿಯೇ ದೇವಿ ಆರಾಧನೆ-ಜಾತ್ರೆ, ಗೊಂದಲ ಹಾಕುವ ಕಾರ್ಯವನ್ನು ಮಾಡಬೇಕು.
- ದೇವಿ ಪೂಜೆಗೆ ಬರಿಗಾಲಿನಿಂದ ಹೋಗಬೇಕು.
- ಗಣಪತಿ ಎಡೆ(ಪ್ರಸಾದ) ಹೆಣ್ಣು ಮಕ್ಕಳು ತಿನ್ನಬೇಕು.
- ಮದುವೆಯ ಮುನ್ನ ದೇವರಿಗೆ ಮಾಡಬೇಕು.

**೨. ಸಾಂಸ್ಕೃತಿಕ ನಂಬಿಕೆಗಳು :** ಬುಡಕಟ್ಟು ಸಮುದಾಯಗಳು 'ದೇಹಕ್ಕೆ ತಲೆ ಮನೆಗೆ ಒಲೆ ಜೀವನಕ್ಕೆ ಕಥೆ', ಅತ್ಯವಶ್ಯ ಎನ್ನುವದನ್ನು ನಂಬಿದವರುಂಟು. ಈ ಪರಂಪರೆಯ ಹಿನ್ನೆಲೆಯಲ್ಲಿ ಗುರುತಿಸಿಕೊಂಡ ಗೊಂದಲಿಗರು ತಮ್ಮ ಸಂಸ್ಕೃತಿ ಪರಂಪರೆಗೆ ಪೂರಕವಾಗಿ ಹಲವಾರು ನಂಬಿಕೆಗಳನ್ನು ಬೆಳೆಸಿಕೊಂಡು ಬಂದಿದ್ದಾರೆ.

- ಸಮುದಾಯದೊಳಗೆ ತಮ್ಮ-ತಮ್ಮೊಳಗೆ ಯಾವುದೇ ರೀತಿ ವಾಜ್ಯಗಳು ಉಂಟಾದರೆ, ಅವರ ದೈವವನ್ನು ಕೂಡಿಸಿ ಬಗೆಹರಿಸಿಕೊಳ್ಳಬೇಕು.
- ನ್ಯಾಯ ನಿರ್ಣಯಗಳು ದೇವಿಯ ಕಟ್ಟೆ ಅಥವಾ ಗುಡಿಯ ಒಳಗೆ ನಡೆಯಬೇಕು.
- ದೇವಿಯ ಮುಂದೆ ಮಾಡಿದ ತಪ್ಪುಗಳನ್ನು ಒಪ್ಪಿಕೊಳ್ಳಬೇಕು.
- ಆತ್ಮ ಸಾಕ್ಷಿಯಾಗಿ ಆಣೆ ಮಾಡುವುದು.
- ಶುಕ್ರವಾರ ಸೊಸೆ ಕಳಿಸಬಾರದು. ಮಂಗಳವಾರ ಮಗಳನ್ನು ಕಳಿಸಬಾರದು.
- ತುಳಿಸಿ ಪೂಜೆ ಮಾಡಿದರೆ ಒಳ್ಳೆಯ ಗಂಡ ಸಿಗುತ್ತಾನೆ.

ಮುಂತಾದ ಬಲವಾದ ನಂಬಿಕೆಗಳು ಈ ಜನರಲ್ಲಿ ಇವೆ.

**೩. ಮೂಢನಂಬಿಕೆಗಳು :** ಯಾವುದೇ ಸಂದರ್ಭದಲ್ಲಿ ಆಗಿರುವ ಒಳ್ಳೆಯ ಪರಿಣಾಮ ಹಾಗೂ ಕೆಟ್ಟ ಪರಿಣಾಮಗಳ ಹಿನ್ನೆಲೆಯಲ್ಲಿ ಹಲವಾರು ನಂಬಿಕೆ-ಮೂಢನಂಬಿಕೆಗಳು ಬೆಳೆದುಬಂದಿವೆ. ಇಂತಹ ಮೂಢನಂಬಿಕೆಗಳು ಯಾವೊಂದು ಸಮುದಾಯಕ್ಕೆ ಸೀಮಿತವಾಗಿರದೆ ಪ್ರತಿಯೊಂದು ಸಮಾಜದಲ್ಲಿ ಕಂಡುಬರುತ್ತದೆ. ನಮ್ಮ ದೈನಂದಿನ ಬದುಕಿನ ಪ್ರತಿ ಕ್ಷಣಗಳಲ್ಲಿಯೂ ಅವುಗಳ ಪ್ರಭಾವವನ್ನು ಕಾಣುತ್ತೇವೆ. ಗೊಂದಲಿಗರು ದೇವತಾ ಕಾರ್ಯ, ಒಳ್ಳೆಯ ಕಾರ್ಯ, ಶುಭಕಾರ್ಯ, ಊರಿಗೆ ಹೋಗುವ, ಮದುವೆ ಮುಂಜಿವೆ ಮಾಡುವ, ಪೂಜೆ ಮತ್ತು ನ್ಯಾಯನಿರ್ಣಯ ಮಾಡುತ್ತಿರುವ ಸಂದರ್ಭದಲ್ಲಿ ಅಸಹಜವಾಗಿ ಕಂಡುಬರುವ ಅನಪೇಕ್ಷಿತ ಘಟನೆಗಳಿಂದ ಶುಭ-ಅಶುಭ ಪರಿಣಾಮ ಆಗುತ್ತವೆ ಎಂಬ ದೃಢವಾದ ನಂಬಿಕೆಗಳು ಬೆಳೆದು ಬಂದಿವೆ.

- ಒಂಟಿ ಸೀನಿಗಿಂತ ಎರಡು ಬಾರಿ ಸೀನಿದರೆ ಅದು ಶುಭ ಸೂಚಕ.
- ಬೆಳಿಗ್ಗೆ ರತ್ನ ಪಕ್ಷಿಯನ್ನು ನೋಡಿದರೆ ಅಂದು ಒಳ್ಳೆಯದಾಗುತ್ತದೆ.
- ದೇವರ ಬಲಗಡೆಯಿಂದ ಹೂ ಬಿದ್ದರೆ ಒಳ್ಳೆದಾಗುತ್ತದೆ.
- ತುಂಬಿದ ಕೊಡ ಎದುರಿಗೆ ಬಂದರೆ ಹೋಗುವ ಕೆಲಸ ಯಶಸ್ವಿಯಾಗುತ್ತದೆ.
- ಮುತ್ತೈದೆಯರು ಎದುರಿಗೆ ಬಂದರೆ, ಆಕಳು ಎದುರಿಗೆ ಬಂದರೆ ಶುಭವಾಗುತ್ತದೆ.
- ಒಲೆ ಊದಿದರೆ ಅತಿಥಿಗಳು ಬರುತ್ತಾರೆ.

ಇವುಗಳಿಗೆ ವ್ಯತಿರಿಕ್ತವಾಗಿ ಕೆಲವು ಮೂಢ ನಂಬಿಕೆಗಳು ಬೆಳೆದು ಬಂದಿದ್ದು, ಅವು

- ಹಲ್ಲಿ ಒಂದು ಸಲ ಲೋಚಗೂಡಿದರೆ ಅದು ಅಪಶಕುನ.
- ಬೆಕ್ಕು ಅಡ್ಡಬಂದರೆ ಅಪಶಕುನ.
- ಕೆಲಸದಲ್ಲಿ ತೊಡಗಿರುವಾಗ ಆಗಲೀ ಊರಿಗೆ ಹೊಗುವ ಸಂದರ್ಭದಲ್ಲಿ ಎಲ್ಲಿ ಹೊಗುತ್ತೀರಿ ಎಂಬ ಪ್ರಶ್ನೆ ಮಾಡುವುದಾಗಲಿ ಒಂಟಿ ಸೀನು ಸೀನುವದಾಗಲಿ ಅದು ಅಪಶಕುನ.
- ಖಾಲಿಕೊಡ ಎದುರಿಗೆ ಬರಬಾರದು.
- ಎಲ್ಲೆ ಹೋಗುವಾಗ ಕ್ಷೌರಿಕರೂ ಎದುರಿಗೆ ಬರಬಾರದು.
- ಊರಿಗೆ ಹೋದ ಒಂಬತ್ತನೇ ದಿನಕ್ಕೆ ಮನಿಗೆ ಬರಬಾರದು.
- ಕನಸಿನ್ಯಾಗ ಊಟ ಮಾಡಬಾರದು.

ಈ ರೀತಿಯಾಗಿ ಕಂಡು ಬರುವ ಅನಿರೀಕ್ಷಿತ ಸಂದರ್ಭದಲ್ಲಿ ಅಪಶಕುನವೆಂದು ಹೋದ ಕಾರ್ಯ ಯಶಸ್ವಿಯಾಗುವದಿಲ್ಲ ಎಂದು ನಂಬಿಕೆ ಬೆಳೆದು ಬಂದಿದೆ. ಗೊಂದಲಿಗರಲ್ಲಿ ಈ ರೀತಿಯ ನಂಬಿಕೆಗಳು ಬೆಳೆದು ಬರಲು ದೇವರು, ಪೂರ್ವ ಜನ್ಮದ ಪಾಪ, ದೇವತೆಯ ಶಾಪ, ಕರ್ಮದ ಕಲ್ಪನೆ ಮುಂತಾದ ಕಾರಣವಾಗಿದೆ. ಗೊಂದಲಿಗರು ಇಂದು ಸಹ ನಂಬಿಕೆಗಳ ಬಗ್ಗೆ ಅಪಾರವಾದ ವಿಶ್ವಾಸ ಹೊಂದಿರುವುದನ್ನು ಕಾಣುತ್ತೇವೆ. ಗೊಂದಲಿಗರಲ್ಲಿಯ ಸುಶಿಕ್ಷಿತರು / ವಿದ್ಯಾವಂತರೂ ಸಹ ನಂಬಿಕೆ ಅದು ಮೂಢನಂಬಿಕೆಯಾಗಿದ್ದರೂ ಅದನ್ನು ಪಾಲಿಸುತ್ತಿರುವುದನ್ನು ಕಾಣುತ್ತೇವೆ.

### ೩.೧೨ ಭಾಷೆ

ಸಂಸ್ಕೃತಿ ಎಂಬ ಪ್ರಪಂಚಕ್ಕೆ ಭಾಷೆ ಎಂಬುದು ಕೀಲಿ ಕೈ ಇದ್ದ ಹಾಗೆ. ಮಾನವ ಭಾಷೆಯ ಮೂಲಕ ಪರಸ್ಪರ ಸಂವಹನ ನಡೆಸುತ್ತಾನೆ. ಪ್ರಾಣಿಗಳಿಗೆ ಈ ಸಾಮರ್ಥ್ಯವಿಲ್ಲ. ಜೆ.ಜೆ. ಮ್ಯುಸಿಯೊನಿಸ್ ಅವರು "ಭಾಷೆ ಎಂಬುದು ಸಂಕೇತಗಳ ಒಂದು ವ್ಯವಸ್ಥೆಯಾಗಿದ್ದು ಅದರ ಮೂಲಕ ಜನರು ಒಬ್ಬರೊಡನ್ನೊಬ್ಬರು ಸಂವಹನ ನಡೆಸುವರು"[೭೬] ಈ ಹಿನ್ನೆಲೆಯಲ್ಲಿ "ಭಾಷೆಯನ್ನು ಶತಮಾನಗಳಿಂದಲೂ ಸಂಗ್ರಹಿತವಾದ ಜ್ಞಾನ ಭಂಡಾರದ ರಹಸ್ಯವನ್ನು ಬೇಧಿಸುವ ಕೀಲಿ ಕೈಯಿದ್ದಂತೆ" ಎನ್ನಲಾಗುತ್ತದೆ. ಭಾಷೆಯ ಮೂಲಕ ನಾವು ಸಮಾಜವೊಂದರ ಅಥವಾ ಸಮುದಾಯವೊಂದರ ಸಂಸ್ಕೃತಿಯನ್ನು ಮತ್ತು ಅದರ ವೈಶಿಷ್ಟ್ಯಗಳನ್ನು ಮತ್ತು ವೈವಿಧ್ಯತೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದು.

ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಭಾಷೆ ಇರುತ್ತದೆ. ಹಾಗೆಯೇ ಬುಡಕಟ್ಟುಗಳು ಸಹ ತಮ್ಮದೇ ಆದ ಭಾಷೆಯನ್ನು ಹೊಂದಿದ್ದು, ಅದರಿಂದಲೇ ವೈವಿಧ್ಯತೆಯನ್ನು ಪಡೆದುಕೊಂಡಿರುತ್ತಾರೆ. "ಅಲೆಮಾರಿ-ಅರೆಅಲೆಮಾರಿ ಬುಡಕಟ್ಟು ಸಮುದಾಯಗಳ ಸಂಸ್ಕೃತಿ, ಶಿಕ್ಷಣ, ಆರ್ಥಿಕ ಸ್ಥಿತಿಗತಿಗಳು, ಸಾಹಿತ್ಯ, ಕಲೆ ಮುಂತಾದವುಗಳ ಅಧ್ಯಯನ ಎಷ್ಟು ಮುಖ್ಯವಾಗಿರುತ್ತದೆಯೋ, ಅವರು ಬಳಸುವ

ಭಾಷೆಯ ಅಧ್ಯಯನವು ಅಷ್ಟೇ ಮುಖ್ಯವಾಗಿರುತ್ತದೆ. ಬುಡಕಟ್ಟುಗಳ ಲಕ್ಷಣಗಳನ್ನು ಗುರುತಿಸುವಾಗ ಅವರ ಭಾಷೆಯನ್ನು ಮುಖ್ಯವಾದ ಸಂಗತಿಯಾಗಿ ಪರಿಗಣಿಸಬೇಕಾಗುತ್ತದೆ".[೨೫] ಈ ಹಿನ್ನೆಲೆಯಲ್ಲಿ ಗೊಂದಲಿಗರ ಭಾಷೆಯ ಕುರಿತು ನೋಡಲಾಗಿ ನಿಂಗಣ್ಣ ಸಣ್ಣಕ್ಕಿಯವರು ತಮ್ಮ 'ಗೊಂದಲಿಗರ ಸಂಸ್ಕೃತಿ' ಎಂಬ ಗ್ರಂಥದಲ್ಲಿ 'ಕನ್ನಡ ಅವರ ಪ್ರಮುಖ ಸಾಹಿತ್ಯಿಕ ಮತ್ತು ವ್ಯವಹಾರಿಕ ಭಾಷೆಯಾಗಿದೆ. ಮನೆಯಲ್ಲಿ ಹರಕು-ಮುರಕು ಮರಾಠಿಯನ್ನು ಮಾತನಾಡುವರು' ಎಂದಿದ್ದಾರೆ. ಆದರೆ ಬಹುಪಾಲು ಗೊಂದಲಿಗರು ತಾವು ಮೂಲತಃ ಮರಾಠಿ ಭಾಷಿಕರು ಎಂದು ಗುರುತಿಸುತ್ತಾರೆ. ಮರಾಠಿ ಭಾಷೆಯ ಜೊತೆಗೆ ತಾವು ಇರುವ ಪ್ರದೇಶದಲ್ಲಿಯ ಭಾಷೆಯನ್ನು ಅರ್ಥೈಸಿಕೊಂಡು ಅದರಲ್ಲಿಯೇ ವ್ಯವಹರಿಸುತ್ತಾರೆ. ಜ್ಯೋತಿಷ್ಯ, ಹಸ್ತ ಸಾಮುದ್ರಿಕ ವೃತ್ತಿಯಲ್ಲಿ ಇರುವಂತವರು ಸಾಮಾನ್ಯವಾಗಿ ಸ್ಥಳೀಯ ಭಾಷೆ ಅಂದರೆ ಕನ್ನಡ ಮತ್ತು ಮರಾಠಿ ಭಾಷೆಯ ಜೊತೆಗೆ ಏನಿಲ್ಲವೆಂದರೂ, ಎರಡು ಮೂರು ಇತರ ಭಾಷೆಗಳನ್ನು ಬಲ್ಲವರಾಗಿದ್ದು, ಮಾತನಾಡುವ ಶೈಲಿಯಂತೂ ಅತ್ಯಂತ ನಾಜೂಕಿನ ಸುಸಂಸ್ಕೃತ ಭಾಷೆಯ ರೂಪದಲ್ಲಿ ಕಂಡುಬರುತ್ತದೆ. ಕೇಳುವವರು ತಲೆ ಅಲ್ಲಾಡಿಸುವಂತೆ ಮಾಡುವ ಜಾಣ್ಮೆ ಇವರಲ್ಲಿದೆ.

ಗೊಂದಲಿಗರು ಮಾತನಾಡುವ ಭಾಷೆಯನ್ನು ಸಾಮಾನ್ಯವಾಗಿ ಮರಾಠಿ ಭಾಷೆ ಎಂದು ಹೇಳುತ್ತಾ ಬಂದಿದ್ದಾರೆ. ಮರಾಠಿಯ ಭಾಷೆಯ ಜೊತೆಗೆ ಗೊಂದಲಿಗರು ತಮ್ಮದೇ ಆದ ಉಪ ಭಾಷೆಯನ್ನು ಮಾತನಾಡುತ್ತಿದ್ದು, ಈ ಭಾಷೆಯನ್ನು 'ಖಿವಾರಿ ಭಾಷೆ' ಎಂದು ಕರೆಯುತ್ತಾರೆ. ಖಿವಾರಿ ಭಾಷೆಗೆ ಲಿಪಿ ಇಲ್ಲ. ಇದು ಆಡುಭಾಷೆಯಲ್ಲಿಯೇ ಉಳಿದುಕೊಂಡಿದೆ. ಖಿವಾರಿ ಮತ್ತು ಮರಾಠಿ ಭಾಷೆಯ ಧ್ವನಿಗಳು ಒಂದೇ ರೀತಿಯಾಗಿರುವುದನ್ನು ಕಾಣಬಹುದಾಗಿದೆ.

ಖಿವಾರಿ ಭಾಷೆಗೆ ಸಂಬಂಧಪಟ್ಟಂತೆ ಗೊಂದಲಿಗ ಹಿರಿಯರು - ಶಿವಾಜಿ ಮಹಾರಾಜರ ಕಾಲದಲ್ಲಿ ಗುಪ್ತಚಾರ ಕೆಲಸದಲ್ಲಿ ತೊಡಗಿಸಿಕೊಂಡ ಗೊಂದಲಿಗರು ತಮ್ಮ-ತಮ್ಮೊಳಗೆ ವಿಚಾರ ವಿನಿಮಯ ಮಾಡಿಕೊಳ್ಳುವ ಸಲುವಾಗಿ ತಮಗಷ್ಟೇ ಅರ್ಥವಾಗುವ ಕೋಡ್‌ವರ್ಡ್ಸ್‌ಗಳಿಂದ ಕೂಡಿರುವ ಭಾಷೆಯನ್ನು ತಿಳಿದುಕೊಂಡಿದ್ದರು ಅದೇ ಖಿವಾರಿ ಭಾಷೆ. ಗುಪ್ತವಾದ ವಿಷಯ ಚರ್ಚಿಸುವಾಗ ಈಗಲೂ ಆ ಭಾಷೆಯನ್ನು ಉಪಯೋಗ ಮಾಡಲಾಗುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಡಾ. ಗಂಗಾಧರ ದೈವಜ್ಞರವರು ತಮ್ಮ 'ಗೊಂದಲಿಗರು' ಎಂಬ ಕೃತಿಯಲ್ಲಿ 'ಗೊಂದಲಿಗರು ಮಾತನಾಡುವ ಖಿವಾರಿ ಭಾಷೆ ಒಂದು ಪ್ರತ್ಯೇಕ ಬುಡಕಟ್ಟಿನ ಭಾಷೆಯಾಗಿದ್ದು, ಬುಡಕಟ್ಟು ಭಾಷೆಯ ಎಲ್ಲ ಲಕ್ಷಣಗಳನ್ನು ಹೊಂದಿರುವುದು ಕಂಡುಬರುತ್ತದೆ' ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಇತ್ತೀಚಿನ ಅವಧಿಯಲ್ಲಿ ಖಿವಾರಿ ಭಾಷೆಯು ಕೇವಲ ಆಡುಭಾಷೆ ಆಗಿದ್ದರಿಂದ ಅದು ಮರಾಠಿ ಭಾಷೆಯಲ್ಲಿ ಬೆರೆತು ಹೋಗಿದೆ ಎಂದರೆ ತಪ್ಪಾಗಲಾರದು. ಈ ಖಿವಾರಿ ಭಾಷೆಯ ಮೇಲೆ ಮರಾಠಿಯು ತೀವ್ರವಾದ ಪ್ರಭಾವ ಬೀರಿದ್ದರಿಂದ ಅದು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು

ಸಾಧ್ಯವಾಗುತ್ತಿಲ್ಲ ಮತ್ತು ಗೊಂದಲಿಗರಲ್ಲಿಯೇ ಮುಂದುವರೆದಂತವರು ಈ ಭಾಷೆಯ ಬಗ್ಗೆ ಅಷ್ಟು ಆಸಕ್ತಿಯನ್ನು ತೋರಿಸುತ್ತಿಲ್ಲ. ಕಾರಣ ಈ ಖಿವಾರಿ ಭಾಷೆಯನ್ನು ಕೇವಲ ಬೆರಳೆಣಿಕೆಯಷ್ಟು ಜನರು ಮಾತ್ರ ಮಾತನಾಡುವುದು ಕಂಡು ಬರುತ್ತದೆ. ಖಿವಾರಿ ಭಾಷೆಗೆ ಸಮಾನಾಂತರವಾಗಿ ಮರಾಠಿ, ಕನ್ನಡ ಭಾಷೆಯಲ್ಲಿ ಬಳಸುವ ಪದಗಳಿಗೆ ಸಂಬಂಧಪಟ್ಟಂತೆ ಶ್ರೀ ಶಿವಾನಂದ ಪಾಚಂಗಿಯವರು ತಮ್ಮ 'ಗೋಂದಳಿ' ಎನ್ನುವ ಗ್ರಂಥದಲ್ಲಿ ಮಾಹಿತಿಯನ್ನು ನೀಡಿದ್ದಾರೆ.

**ಕೋಷ್ಟಕ ೩.೩. ಖಿವಾರಿ ಭಾಷೆಗೆ ಸಮಾನಾಂತರವಾಗಿ ಮರಾಠಿ, ಕನ್ನಡ ಭಾಷೆಗಳು**

| ಕ್ರಸಂ | ಖಿವಾರಿ | ಮರಾಠಿ | ಕನ್ನಡ |
|---|---|---|---|
| ೧ | ಮಾನವ ಗಾಸಗಲಾ | ಪೋಲಿಸ ಆಲ | ಪೋಲಿಸ ಬಂದಾ |
| ೨ | ತಿತಚತಾಲ | ತಿತಚ ತಾಮ | ಅಲ್ಲಿಯೇ ನಿಂತಕೊ |
| ೩ | ಗಾವಂಡಿ ಗ್ಯಾಚಿ | ಪರಜಾತಿ ಚೆ ಮೂಲಗಿ | ಪರಜಾತಿ ಹೆಣ್ಣು |
| | ಮಾನವಿ ಗಾಸಗಿಲಿ | ಎ ತಾಹೆ | ಮಗಳು ಬರುತ್ತಿದ್ದಾಳೆ |
| ೪ | ಚಿಬಾವೊನ ಚಲಾವ | ಗಾಬರೂನ ತಾಲೈಲಾ ಪಾಯಜೆ | ಹೆದರಿ ನಡೆಯಬೇಕು |
| ೫ | ಖಾಪಾ | ಫೈಸಾ, ಧನ | ಹಣ |
| ೬ | ನಾಚಾಲ ನಿಬಳ | ಗರಿ ಬಾವು ಯಾ | ಮನೆಗೆ ಹೋಗು |
| ೭ | ಕವಳ | ಪಳ | ಓಡು |
| ೮ | ಭೈರ ಬಾಸ್ವಾಡ | ಬಾಹೇರ ಫಾಲ | ಹೊರಗೆ ಹಾಕು |
| ೯ | ಸಂಖೈಲಗು | ಡೊಳೆ ಮಾರ | ಕಣ್ಣಸನ್ನೆ ಮಾಡು |
| ೧೦ | ಕಿಸಬ್ | ಗಪ್ ಬಸ್ | ಸುಮ್ಮನಿರು |
| ೧೧ | ಮೆಕೆಳ್ಯಾ | ಮಾಸೋಳಿ ಮಾಸ | ಸುಮ್ಮನಿರು |
| ೧೨ | ಚುವಾನಿ | ಚಹಾ | ಚಹಾ/ಪಾನಿ |
| ೧೩ | ಕೊಯ್ತು | ಜೇವನ ಕರ್ | ತಿನ್ನು/ಊಟಮಾಡು |
| ೧೪ | ನೇಮಾನ | ಮಟನ್ | ಮಟನ್ |
| ೧೫ | ಗುಗ್ಗರ್‍ಯಾ ನಿಜಲೆ | ಸಮಜತೆ | ಅರ್ಥ ಆಗುತ್ತದೆ |
| ೧೬ | ನೆಕಳಿ | ದಾಳಬಾಜಿ ವರಣ್ | ಸಾರ |
| ೧೭ | ಖನ್ನ | ಬಾತ | ಅನ್ನ |
| ೧೮ | ಟಿಪ್ಯಾ ಚೋಲ | ಬಾಕರಿ ದ್ಯಯಿಲಾಸಾಂಗ | ರೊಟ್ಟಿ ಕೊಡುವಂತೆಹೇಳು |
| ೧೯ | ಏಕ ಭಂಗಿ | ಏಕ ರುಪಯಾ | ಒಂದು ರೂಪಾಯಿ |
| ೨೦ | ಫತ್ರೆ | ಅಂಡಾ | ತತ್ತಿ |
| ೨೧ | ಮಕರೆ | ತಾಂದೂಳ್ | ಅಕ್ಕಿ |

| ಕ್ರಸಂ | ಖಿವಾರಿ | ಮರಾಠಿ | ಕನ್ನಡ |
|---|---|---|---|
| ೨೨ | ಟೆಡಕ | ಬಗ | ನೋಡು |
| ೨೩ | ತಿಜಾ ನರಗಾ | ತಿಚಾ ನವರಾ | ಆಕೆಯ ಗಂಡ |
| ೨೪ | ತಿಜಾ ನರಗಿ | ತ್ಯೇಚಿ ಬಾಯಿಕೊ | ಅವನ ಹೆಂಡತಿ |
| ೨೫ | ಖೊಂಬಡ | ತೊಂಡ/ಚಹರಾ | ಮುಖ |
| ೨೬ | ಕಾಳಕಿ | ದಾರು | ಶೆರೆ |
| ೨೭ | ಜುಂಗರ | ಮುಲಗಾ ಮುಲಗಿ | ಮಕ್ಕಳು |
| ೨೮ | ಕೆಪಡ್ಲ | ಕಾಲಿ ಪಡ್ಲ | ಕೆಳಗೆ ಬಿದ್ದಿತು |
| ೨೯ | ಚೋಲ | ಬೋಲ | ಹೇಳು |
| ೩೦ | ಖಂಗಳ | ಏಡಾ/ವೇಡಾ | ಅರಹುಚ್ಚು |
| ೩೧ | ಖೈಕ | ಐಕ್ | ಕೇಳು |
| ೩೨ | ಮಕಾಟ | ತೊಂಡ | ಮುಖ |
| ೩೩ | ಧಾಗಾಳಿಕರ | ತಾಲಿಸ | ಮಸಗಾಮಾಡು |
| ೩೪ | ಖಡಿಗ್ಯಾಚೆ | ಮಾಡರ್ | ವಡ್ಡರು |
| ೩೫ | ಖಮ್ರಾಚಿ | ಮರಾಠಿ | ಮರಾಠಿ |

ಅನೇಕ ಸಂದರ್ಭಗಳಲ್ಲಿ ಬೇರೆ-ಬೇರೆ ಭಾಗದಲ್ಲಿಯ ಗೊಂದಲಿಗ ಜನರು ಒಂದು ಕಡೆ ಸೇರಿದಾಗ, ಅವನು ನಮ್ಮ ಸಮುದಾಯದವರು ಎಂಬುದನ್ನು ಗುರುತಿಸಲು, ಹಾಗೂ ತಮ್ಮ ಸಮುದಾಯದವರ ಜೊತೆಗಿನ ವ್ಯಾಪಾರ, ವ್ಯವಹಾರದ ಸಂದರ್ಭದಲ್ಲಿ ಈ ಭಾಷೆಯನ್ನು ಬಳಸುತ್ತಾ ಬಂದಿದ್ದಾರೆ. ಈ ದೃಷ್ಟಿಯಲ್ಲಿ ಖಿವಾರಿ ಭಾಷೆಯು ಗೊಂದಲಿಗ ಸಮುದಾಯದ ಅನನ್ಯತೆಯ ಪ್ರತೀಕವಾಗಿದೆ.

ಗೊಂದಲಿಗರಲ್ಲಿರುವ ಖಿವಾರಿ ಭಾಷೆಯ ಅಧ್ಯಯನ ನಡೆಯಬೇಕಾಗಿದೆ. ಖಿವಾರಿ ಭಾಷೆಗೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಅಧ್ಯಯನಗಳು ನಡೆದಿಲ್ಲ. ಅನೇಕ ಗೊಂದಲಿಗರಿಗೆ ಮತ್ತು ಯುವಕರಿಗೆ ಖಿವಾರಿ ಭಾಷೆಯ ಅರಿವು ಇಲ್ಲವೆಂದೇ ಹೇಳಬೇಕಾಗುತ್ತದೆ. ಗೊಂದಲಿಗರಲ್ಲಿಯ ಈ ಭಾಷೆ ಪೂರ್ಣವಾಗಿ ಮಾಯವಾಗುವುದಕ್ಕಿಂತ ಮೊದಲು ಅದರ ಅಧ್ಯಯನ ನಡೆಯಬೇಕಾದುದು ಅವಶ್ಯಕ.

## ಅಡಿಟಿಪ್ಪಣಿಗಳು

೧. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು, ಪು. ೬೧, ೨೦೧೧-೧೨
೨. ಅದೇ, ಪು. ೬೨.
೩. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು ಮತ್ತು ಸಾಮಾಜಿಕ ಸಂಸ್ಥೆಗಳು ಮತ್ತು ಸಮೂಹಗಳ ಅಧ್ಯಯನ, ಪು. ೬೭, ೨೦೦೬
೪. ಅದೇ, ಪು. ೬೮
೫. ಅದೇ, ಪು. ೬೮.
೬. ಅದೇ, ಪು. ೬೮.
೭. ರಾಮಣ್ಣ ಕ್ಯಾತನಹಳ್ಳಿ., ಗೊಂದಲಿಗರು : ಒಂದು ಅಧ್ಯಯನ, ಪು. ೪, ೧೯೮೨
೮. ಬೈರಪ್ಪ ಕೆ., ಸಮಗ್ರ ಭಾರತೀಯ ಸಮಾಜ, ಪು. ೩೭೪, ೨೦೦೮
೯. ಅದೇ, ಪು. ೩೭೫.
೧೦. ಯರ‍್ರಪ್ಪ. ಡಿ., ಅಲೆಮಾರಿ ಕುರುಬ, ಪು. ೩೯, ೨೦೦೮,
11. Subhdra channa (Ed), Encyclopaedia of Indian Tribes and Castes, Vol-7, 2004, P. 1982.
೧೨. ಕುಮಾರ್ ಆರ್.ಬಿ., ಕರ್ನಾಟಕ ಮುದ್ದೆ ಕುಂಬಾರರು, (ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಪು. ೪೯, ೨೦೦೦
೧೩. ಶಿವಾನಂದ ಪಾಚಂಗಿ, ಗೋಂದಳಿ ಪು. ೪೫, ೨೦೦೮
೧೪. ಶ್ರೀ ಕೃಷ್ಣಪ್ಪ ಮುಖ್ಯೆ, ಮುಂಡರಗಿ ಸಂದರ್ಶನದಲ್ಲಿ ಹೇಳಿರುವ ಮಾಹಿತಿ.
೧೫. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ ಪು. ೭೨-೭೩, ೧೯೯೩
೧೬. ಕಿಶನ್‌ರಾವ್ ಕುಲಕರ್ಣಿ, ಬೆಳಗಿದೆ ನೋಡಾ ಬುಡಬುಡಿಕೆ ಬದುಕು, ತರಂಗ ವಾರಪತ್ರಿಕೆ, ಮೇ ೨೮, ೨೦೦೯.
೧೭. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು, ಪು. ೧೯೪, ೨೦೧೧-೧೨
೧೮. ಗಂಗಾಧರ ದೈವಜ್ಞ, ಗೊಂದಲಿಗರು, ಪು. ೫೧, ೨೦೧೦

ಅಧ್ಯಾಯ - ೪

# ಗೊಂದಲಿಗ ಸಮುದಾಯದ ಜೀವನಾವರ್ತನ ವಾರ್ಷಿಕಾವರ್ತನ ಆಚರಣೆಗಳು

## ೪.೧. ಜೀವನಾವರ್ತನ ಆಚರಣೆಗಳು

೪.೧.೧. ಜನನ
೪.೧.೨ ನಾಮಕರಣ
೪.೧.೩ ಜವುಳ
೪.೧.೪ ಋತುಮತಿಶಾಸ್ತ್ರ
೪.೧.೫ ವಿವಾಹ
೪.೧.೬ ಸೀಮಂತ
೪.೧.೭ ಸಾವು/ಮರಣ

## ೪.೨. ವಾರ್ಷಿಕಾವರ್ತನ ಆಚರಣೆಗಳು

೪.೨.೧ ಗೊಂದಲಿಗರ ಹಬ್ಬಗಳು
೪.೨.೨ ಜಾತ್ರೆಗಳು
೪.೨.೩. ಇತರೆ ಹಬ್ಬಗಳು
೪.೨.೪. ದೈವಗಳು
೪.೨.೫. ಗೊಂದಲ ಪೂಜೆ

# ಅಧ್ಯಾಯ ನಾಲ್ಕು

# ಗೊಂದಲಿಗ ಸಮುದಾಯದ ಆಚರಣೆಗಳು

ಸಂಸ್ಕೃತಿಯು ಮಾನವನ ಅನುಪಮವಾದ ಮತ್ತು ವಿಶಿಷ್ಟವಾದ ಆಸ್ತಿ. ಮಾನವನು ಸಮೂಹ ಜೀವಿಯಾಗಿ ಇತರರೊಂದಿಗೆ ಸಮರಸಗೊಂಡು ಜೀವಿಸುವಂತಹ ಪರಿಸರವನ್ನು ನಿರ್ಮಿಸುವುದು ಸಂಸ್ಕೃತಿ. ಮಾನವನು ಸಂಘಜೀವಿ ಮಾತ್ರವಲ್ಲ ಸಾಂಸ್ಕೃತಿಕ ಜೀವಿಯೂ ಹೌದು. ಆತನ ವ್ಯಕ್ತಿತ್ವವು ಬೆಳವಣಿಗೆ ಹೊಂದುವುದು ಕೂಡ ಸಾಂಸ್ಕೃತಿಕ ಪರಿಸರದಲ್ಲಿ. ಆತನ ಆಂತರಿಕ ಶಕ್ತಿ-ಸಾಮರ್ಥ್ಯಗಳು ಬಹಿರಂಗವಾಗಿ ಪ್ರಕಟವಾಗಲೂ ವೇದಿಕೆಯನ್ನು ನಿರ್ಮಿಸಿ ಕೊಡುವುದೇ ಸಂಸ್ಕೃತಿ.

ಸಂಸ್ಕೃತಿಯು ಮಾನವನ ಜೀವನ ವಿಧಾನದ ಪ್ರತೀಕ ಅಥವಾ ಜೀವಿತ ಕ್ರಮದ ಒರೆಗಲ್ಲು. ಸಂಸ್ಕೃತಿಯು ನಮ್ಮ ನಡತೆಯನ್ನು, ನಮ್ಮ ದರ್ಶನ ಹಾಗೂ ನೈತಿಕತೆಯನ್ನು, ನಮ್ಮ ರೂಢಿ ಸಂಪ್ರದಾಯಗಳನ್ನು, ನಂಬಿಕೆ-ಆಚರಣೆಗಳನ್ನು, ಮೌಲ್ಯಾದರ್ಶಗಳನ್ನು, ನಮ್ಮ ಧಾರ್ಮಿಕ, ರಾಜಕೀಯ, ಆರ್ಥಿಕ ಮೊದಲಾದ ಚಟುವಟಿಕೆಗಳನ್ನು ಒಳಗೊಂಡಿದೆ. ತನ್ನ ವ್ಯಕ್ತಿಗತ ಮತ್ತು ಸಾಮಾಜಿಕ ಜೀವನದಲ್ಲಿ ಮಾನವನು ಸಂಪಾದಿಸಿರುವ ಎಲ್ಲಾ ಅಂಶಗಳನ್ನು ಸಂಸ್ಕೃತಿಯು ಒಳಗೊಂಡಿರುವುದು. ಮೆಕೈವರ್ ಮತ್ತು ಪೇಜ್ ಅವರು "ಸಂಸ್ಕೃತಿಯು ನಮ್ಮ ಜೀವನ ಶೈಲಿಯ, ಮೌಲ್ಯಗಳ, ಭಾವನಾತ್ಮಕ ಬಂಧನಗಳ ಹಾಗೂ ಬೌದ್ಧಿಕ ಸಾಧನಗಳ ಪ್ರಪಂಚವೇ ಆಗಿದ್ದು, ಮಾನವನು ತನ್ನ ಸಮಾಜದಿಂದ ಪಡೆದಿರುವ ಸಾಮಾಜಿಕ ಪರಂಪರೆಯಾಗಿದೆ".[೧] ಎಂದು ಹೇಳುತ್ತಾರೆ.

"ಸಂಸ್ಕೃತಿಯೆಂದರೆ ಮನುಷ್ಯರ ಅನ್ಯೋನ್ಯ ಸಂಬಂಧಗಳಲ್ಲಿ ನಯ-ವಿನಯಗಳಲ್ಲಿ, ಸೊಬಗು-ಸ್ವಗುಣ, ಪರಗುಣಗಳ ಸಮ್ಮಿಶ್ರಿತ ಕಾಂತಿ. ಈ ಸಂಸ್ಕೃತಿ ಮೂಲದಲ್ಲಿ ನಮ್ಮ ಅಂತರಂಗ ಜೀವನಕ್ಕೆ

ಸಂಬಂಧಪಟ್ಟದ್ದು. ಅದು ನಮ್ಮ ಒಳ ಸಂಪತ್ತು. ಅದರ ಜಾಗ ಮನಸ್ಸು ಮತ್ತು ಹೃದಯ".[೨] ಈ ಹಿನ್ನೆಲೆಯಲ್ಲಿ ಸಂಸ್ಕೃತಿಯು ಮಾನವನ ಸಮಗ್ರ ಸಾಧನೆಯ ಪ್ರತಿರೂಪವಿದ್ದಂತೆ. ಸಂಸ್ಕೃತಿಯ ಹೊರತಾಗಿ ಬದುಕನ್ನು/ಜೀವನವನ್ನು ಕಳೆಯುವುದು ಅಸಾಧ್ಯ. ಮಾನವನನ್ನು ಇತರ ಪ್ರಾಣಿವರ್ಗದಿಂದ ಬೇರ್ಪಡಿಸುವಲ್ಲಿ ಕೂಡ ಸಂಸ್ಕೃತಿಯು ಮುಖ್ಯ ಮಾನದಂಡವಾಗಿರುತ್ತದೆ. ಅಂದರೆ ಮಾನವ ಮಾನವ ರನ್ನಾಗಿ ಮಾಡುವುದೇ ಸಂಸ್ಕೃತಿ.

ರಾಲ್ಫ ಲಿಂಟನ್ ಅವರು – "ಒಂದು ನಿರ್ದಿಷ್ಟ ಸಮಾಜದ ಸದಸ್ಯರು ಹಂಚಿಕೊಳ್ಳುವ ಹಾಗೂ ಪ್ರಸಾರ ಮಾಡುವ ಜ್ಞಾನ ದೃಷ್ಟಿಕೋನ ಮತ್ತು ಸ್ವಾಭಾವಿಕ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿ".[೩]

ಇ.ಬಿ. ಟೇಲರ್ – "ಸಂಸ್ಕೃತಿಯು ಜ್ಞಾನ ನಂಬುಗೆ, ಕಲೆ, ನೈತಿಕನಿಯಮ, ಕಾನೂನು, ರೂಢಿ ಮತ್ತು ಮಾನವನು ತನ್ನ ಸಮಾಜದ ಸದಸ್ಯನಾಗಿದ್ದುಕೊಂಡು ಸಾಧಿಸಿದ ಇನ್ನುಳಿದ ಸಾಮರ್ಥ್ಯಗಳನ್ನೂ, ನೈಪುಣ್ಯಗಳನ್ನು ಒಳಗೊಂಡಿರುವ ಅಖಂಡವಾದ ಒಂದು ಸಂಕೀರ್ಣ ವ್ಯವಸ್ಥೆ".[೪]

ಗ್ರಹಾಂ ವಲ್ಲಾಸ್ – "ಸಂಸ್ಕೃತಿಯು ಸಂಪ್ರದಾಯಿಕವಾಗಿ ಬಂದ ಪದ್ಧತಿಗಳ ಜೀವನದ ಮೌಲ್ಯಗಳ ಮತ್ತು ಆದರ್ಶಗಳ ಸಂಗ್ರಹ. ಈ ಸಾಮಾಜಿಕ ಪರಂಪರೆಯನ್ನು ನಾವು ಹಿಂದಿನ ತಲೆಮಾರುಗಳಿಂದ ಮತ್ತು ಜ್ಞಾನಾರ್ಜನೆಯಿಂದ ಪಡೆದುಕೊಂಡಿರುತ್ತೇವೆ".[೫]

ಈ ಹಿನ್ನೆಲೆಯಲ್ಲಿ ಸಮಾಜದ ಆಸ್ತಿ, ವ್ಯಕ್ತಿಯ ಅಂತರಂಗದ ಸಂಸ್ಕಾರ ಅಂತರಂಗದಲ್ಲಿ ಅರಳುವ ಪರಿಮಳವೇ ಸಂಸ್ಕೃತಿ. ವ್ಯಕ್ತಿಯ ತನ್ನ ಜೀವನವನ್ನು ರೂಪಿಸಿಕೊಳ್ಳಲು ಸಂಸ್ಕೃತಿಯು ಮೂಲ ವಸ್ತುಗಳನ್ನು ಒದಗಿಸುತ್ತದೆ. ವ್ಯಕ್ತಿಯ ವ್ಯಕ್ತಿತ್ವ ಇದ್ದಕ್ಕಿದ್ದಂತೆ ರೂಪಗೊಳ್ಳುವದಿಲ್ಲ, ಮನುಷ್ಯ ಸ್ವಭಾವ ಲಕ್ಷಣಗಳನ್ನು ನಿರ್ದಿಷ್ಟ ರೂಪದಲ್ಲಿ ವಿನ್ಯಾಸಗೊಳಿಸುವಲ್ಲಿ ಅಥವಾ ಬೆಳೆಸುವಲ್ಲಿ ಹಂತ ಹಂತವಾಗಿ ಪಡೆದುಕೊಳ್ಳುವ ಸಮಾಜದಡಿಯಲ್ಲಿಯ ಸಾಂಸ್ಕೃತಿಕ ಪರಂಪರೆಯಿಂದ ಎಂದು ಹೇಳಲೇ ಬೇಕು. ವ್ಯಕ್ತಿಯ ವ್ಯಕ್ತಿತ್ವ ತಾನು ಬದುಕುತ್ತಿರುವ ಸಮಾಜ ಮತ್ತು ಸಂಸ್ಕೃತಿಯಿಂದ ಪ್ರೇರಿತವಾಗಿರುತ್ತದೆ. ಏಕೆಂದರೆ ವ್ಯಕ್ತಿ, ಸಮಾಜ ಮತ್ತು ಸಂಸ್ಕೃತಿಯ ಸಂಬಂಧ ತುಂಬಾ ಗಾಢವಾದುದು. ಈ ಹಿನ್ನೆಲೆ ಯಲ್ಲಿ ಎಸ್.ಎಫ್. ನಾಡೆಲ್‌ರವರ– "ಸಮೂಹ ಮತ್ತು ಸಂಬಂಧಗಳ ಆಯಾಮದಲ್ಲಿ ಪ್ರಕಟಗೊಳ್ಳುವ ಸಾಮಾಜಿಕ ಸತ್ಯಗಳ ಮೊತ್ತವೇ ಸಮಾಜ, ಇದೇ ಮೊತ್ತದ ಆಯಾಮವೇ ಸಂಸ್ಕೃತಿ".[೬] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಹರ್‍ಸಕೊವಿಟ್‌ರು ಹೇಳುವಂತೆ "ಜನರ ಜೀವನ ವಿಧಾನವೇ ಸಂಸ್ಕೃತಿ. ಜನ ಯಾರಾದರೂ ಆಗಿರಬಹುದು, ಎಲ್ಲಾದರೂ ವಾಸಿಸಬಹುದು, ಜನರಿದ್ದ ಕಡೆ ಸಂಸ್ಕೃತಿ ಇದ್ದೇ ಇರುತ್ತದೆ. ಆದರೆ ಹೀಗೆ ಇರುವ ಸಂಸ್ಕೃತಿ ಒಂದೇ ತೆರನಾದುದಲ್ಲ ಒಂದೇ ವಿನ್ಯಾಸದ್ದಲ್ಲ. ಒಂದೊಂದು ಪ್ರದೇಶದಲ್ಲಿ ಒಂದೊಂದು ಜನಾಂಗಕ್ಕೆ ಒಂದೊಂದು ರೀತಿಯ ಸಂಸ್ಕೃತಿ ಇರಲು ಸಾಧ್ಯ. 'ಒಂದು ಸಂಸ್ಕೃತಿ' ಎಂಬ ಪರಿಕಲ್ಪನೆ ಹುಟ್ಟುವದು, ಪ್ರಚಲಿತವಾಗುವುದು ಈ ನೆಲೆಯಲ್ಲೇ. ಒಟ್ಟು ಮನುಷ್ಯ 'ಸಂಸ್ಕೃತಿ'ಯಲ್ಲಿ 'ಒಂದು ಸಂಸ್ಕೃತಿ' ಉಸಿರಾಡುತ್ತಲೇ ಇರುವದು".[೭]

ಉಪಸಂಸ್ಕೃತಿಯ ಪರಿಕಲ್ಪನೆಯು ಕಂಡುಬರುವದು ಈ ನೆಲೆಯಲ್ಲಿ, ಮಾನವ ತನ್ನ ವಿಭಜಿತ ನೆಲೆಗಳಿಗನುಗುಣವಾಗಿ ವಿಭಿನ್ನ ಸಂಸ್ಕೃತಿಗಳನ್ನು ರೂಪಿಸಿಕೊಳ್ಳುತ್ತಾ ಬಂದಿದ್ದಾನೆ. ಅಂದರೆ ಪ್ರಧಾನ ಸಂಸ್ಕೃತಿಯಡಿಯಲ್ಲಿ ಉಪಸಂಸ್ಕೃತಿಗಳು ಬೆಳೆದು ಬಂದಿವೆ ಎಂಬುದನ್ನು ಗಮನಿಸಬಹುದಾಗಿದೆ. ಏಕತ್ರ ಸಮಾಜದಲ್ಲಿ ಕಂಡುಬರುವ ವಿವಿಧ ಜನಾಂಗ, ಸಮುದಾಯಗಳನ್ನು ತಮ್ಮದೇ ಆದ ಸಂಸ್ಕೃತಿ ಪರಂಪರೆಯನ್ನು ಹೊಂದಿದ್ದು, ಅವುಗಳನ್ನು ಉಪಸಂಸ್ಕೃತಿಯಡಿಯಲ್ಲಿಯೇ ಗುರುತಿಸಲಾಗುತ್ತದೆ.

ಸಮಾಜದಡಿಯಲ್ಲಿ ಕಂಡುಬರುವ ವಿವಿಧ ಜನಾಂಗ, ಸಮುದಾಯಗಳು ಶತಶತಮಾನಗಳಿಂದಲೂ ಪ್ರಧಾನ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ನಿರ್ಲಕ್ಷಿತವಾಗುತ್ತಾ ಬಂದಿರುವುದು ವಿಷಾದನೀಯವಾದುದು. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಅಕಾಡೆಮಿಯವರು ಉಪಸಂಸ್ಕೃತಿಯ ಮಾಲೆಯಲ್ಲಿ ಪ್ರಕಟಿಸಿರುವ ಗ್ರಂಥಗಳ ಪ್ರಸ್ತಾವನೆಯಲ್ಲಿ ಬರಗೂರು ರಾಮಚಂದ್ರಪ್ಪನವರು– "ಬದಲಾಗದ ಭೂತಕ್ಕೆ ತಳ್ಳಲ್ಪಟ್ಟ ಉಪಸಂಸ್ಕೃತಿಯು ಪ್ರಧಾನ ಅಥವಾ ಯಜಮಾನ ನೆಲೆಗೆ ಬರುವ ಮೂಲಕ ಸಮಾನ ಸಮಾಜದ ಆಶಯಕ್ಕೆ ಪೂರಕವಾಗುವ ಪ್ರಕ್ರಿಯೆ ಮುಖ್ಯವಾದುದು. ಈ ಪ್ರಕ್ರಿಯೆಯಲ್ಲಿ ಉಪಸಂಸ್ಕೃತಿಗಳ ಜೀವನ ವಿಧಾನ ವರ್ತಮಾನದ ಹೊಸಬಣ್ಣ ಪಡೆದು ಪ್ರಧಾನವಾಗಬೇಕು. ಇದ್ದ ಹಾಗೆಯೇ ಭೂತದ ಬದುಕನ್ನು ಪ್ರತಿಷ್ಠಾಪಿಸಬಾರದು. ಪ್ರಧಾನ ಸಂಸ್ಕೃತಿಯ ನೆಲೆಗಳನ್ನು ತುಂಬುತ್ತಾ ಮತ್ತೆ ನಿರ್ಲಕ್ಷಿತ ನೆಲೆಗಳನ್ನು ಹುಟ್ಟುಹಾಕಬಾರದು. ಬಹು–ಸಂಸ್ಕೃತಿಗಳ ಸಮಾನ ಅಸ್ತಿತ್ವದಲ್ಲಿ ಅಧಿಕಾರ ಹಂಚಿಕೊಳ್ಳಬೇಕು. ಸಂಸ್ಕೃತಿಯೆನ್ನುವದು ಒಂದೇ ಅಲ್ಲ, ಧರ್ಮ ಎನ್ನುವದು ಒಂದೇ ಅಲ್ಲ, ಏಕ–ಸಂಸ್ಕೃತಿ–ಧರ್ಮಗಳ ಯಜಮಾನ್ಯದಲ್ಲಿ ನಿರ್ಲಕ್ಷಿಸುತ್ತಲೇ ಬಂದ ನೂರೆಂಟು ಸಂಸ್ಕೃತಿಗಳು ನಮ್ಮ ಕಣ್ಣೆದುರಿಗೆ ಇವೆ. ಊರಾಚೆಯ ಅಂಚಿನಲ್ಲಿ, ಕಾಡಿನ ಒಡಲಲ್ಲಿ ಜೀವ ಹಿಡಿದುಕೊಂಡಿದೆ". ಎಂಬ ಅಭಿಪ್ರಾಯದ ಹಿನ್ನೆಲೆಯಲ್ಲಿ ಅಲೆಮಾರಿ–ಬುಡಕಟ್ಟು ಸಮುದಾಯಗಳ ಸಂಸ್ಕೃತಿಯು ಯಾವ ರೀತಿ ನಿರ್ಲಕ್ಷಕ್ಕೆ ಒಳಗಾಗುತ್ತಾ ಬಂದಿದೆ. ಮತ್ತು ಪ್ರಸ್ತುತ ಸ್ಥಿತಿಯಲ್ಲಿ ಅಂಥ ಉಪಸಂಸ್ಕೃತಿಗಳು ಯಾವ ರೀತಿ ಪ್ರಾಧಾನ್ಯತೆಯನ್ನು ಪಡೆದುಕೊಳ್ಳಬೇಕಾಗಿದೆ ಎಂಬುದು ವೇದ್ಯವಾಗುತ್ತದೆ.

ಪ್ರತಿಯೊಂದು ಅಲೆಮಾರಿ ಬುಡಕಟ್ಟು ಸಮುದಾಯ ಪರಂಪರಾಗತವಾಗಿ ತನ್ನದೇ ಆದ ಆಚಾರ–ವಿಚಾರ, ಪದ್ಧತಿ–ಪರಂಪರೆ, ಜೀವನ ವಿಧಾನವನ್ನು ಹೊಂದಿದೆ. ಒಂದು ರೀತಿ ಮೂಲ ಸಮಾಜದ ಸಂಸ್ಕೃತಿಗಿಂತಲೂ ಅವರು ವಿಭಿನ್ನವಾದ ಸಂಸ್ಕೃತಿಯನ್ನು ಹೊಂದಿದ್ದಾರೆ. ಅವರ ಸಾಮಾಜಿಕ ಹಾಗೂ ವ್ಯಕ್ತಿಗತ ಬದುಕು ವ್ಯಾಪಿಸಿ ಕೊಂಡಿರುವುದು, ಅವರು ಬೆಳೆಸಿಕೊಂಡು ಬಂದ ಸಾಂಸ್ಕೃತಿಕ ಪರಂಪರೆಯ ಚೌಕಟ್ಟಿನಲ್ಲಿಯೇ ಎಂದು ಹೇಳಬಹುದು. ಒಂದು ಸಮುದಾಯದ ಆಚಾರ–ವಿಚಾರ, ನಂಬಿಕೆ, ಪದ್ಧತಿ, ಅವರು ಬದುಕುವ ರೀತಿ–ನೀತಿ, ಉಡುವ ವಸ್ತ್ರ, ಆಹಾರ ಪದ್ಧತಿ, ಮುಂತಾದವುಗಳನ್ನು ಹಾಗೂ ಅವರಿಗೆ ಸಂಬಂಧಿಸಿದ ಈ ಎಲ್ಲಾ ವಿಷಯಗಳನ್ನು ಅಧ್ಯಯನಕ್ಕೆ ಅಳವಡಿಸಿದಾಗ ಅದನ್ನು ಆ ಸಮುದಾಯದ ಸಂಸ್ಕೃತಿಯ ಅಧ್ಯಯನ ಎಂದು ಹೇಳುತ್ತೇವೆ. ಅಲೆಮಾರಿ ಬುಡಕಟ್ಟು ಸಮುದಾಯವಾದ ಗೊಂದಲಿಗರು ಸಹ ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಅನುಸರಿಸಿಕೊಂಡು ಬಂದಿದ್ದಾರೆ.

ಗೊಂದಲಿಗರು ಅನುಸರಿಸುತ್ತಾ ಬಂದಿರುವ ಆಚರಣೆಗಳನ್ನು ಎರಡು ಭಾಗಗಳಲ್ಲಿ ವಿಂಗಡಿಸಲಾಗಿದೆ.

೧. ಜೀವನಾವರ್ತನ ಆಚರಣೆಗಳು

೨. ವಾರ್ಷಿಕಾವರ್ತನ ಆಚರಣೆಗಳು

## ೪.೧. ಜೀವನಾವರ್ತನ ಆಚರಣೆಗಳು

ಸದ್ಗುಣ ಸಂಪತ್ತಿನ ಸಾಮರಸ್ಯವೇ ಸಂಸ್ಕೃತಿ, ಸದ್ಗುಣ ಸಾಮರಸ್ಯವೇ ಸಂಸ್ಕೃತಿ. ಒಂದು ಸುಂದರ ಜೀವನದ ಭಾವನೆ ಮತ್ತು ಅದಕ್ಕನುಸಾರವಾಗಿ ಮನುಷ್ಯ ಸ್ವಭಾವದ ಸರ್ವತೋಮುಖವಾದ ಗುಣಸಂಪಾದನೆಯೇ ಸಂಸ್ಕೃತಿಯ ಪ್ರಮುಖ ತತ್ವವಾಗಿದ್ದು ಜೀವನ ವಿಧಾನದ ಪ್ರತಿಬಿಂಬವಾಗಿದೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಸಮಾಜವು ತನ್ನದೇ ಆದ ಸಂಸ್ಕೃತಿಯಲ್ಲಿ ಕಂಡುಬರುವ ವಿಭಿನ್ನ ಸಮುದಾಯಗಳು, ಅಲೆಮಾರಿ ಬುಡಕಟ್ಟು ಸಮುದಾಯಗಳು ಸಹ ತಮ್ಮದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದು, ಅದನ್ನು ಅರ್ಥೈಸಿಕೊಳ್ಳಲು ಆ ಸಮುದಾಯದಲ್ಲಿಯ ವ್ಯಕ್ತಿ ಜೀವನದಲ್ಲಿ ಹುಟ್ಟಿನಿಂದ ಸಾವಿನವರೆಗೆ ವ್ಯಾಪಿಸಿರುವ ಆಚರಣಾ ಕ್ರಮಗಳನ್ನು ತಿಳಿದುಕೊಳ್ಳುವುದು ಅವಶ್ಯಕ. ಅವುಗಳನ್ನು ಒಂದು ರೀತಿ ಜೀವನಾವರ್ತನ ಆಚರಣೆಗಳು ಎಂದೂ ಹೇಳಬಹುದು.

ಜೀವನಾವರ್ತನ ಆಚರಣೆಗಳು ಯೋಗ್ಯವಾದ ನಿಶ್ಚಿತ ವಿಧಿಯಿಂದ ಸುಂದರವಾಗಿ ಮಾಡುವಂತಹ ಕ್ರಿಯಾರೂಪದ ಧರ್ಮ-ಕರ್ಮ ಆಚರಣಾ ಕ್ರಮಗಳು. ಅಂದರೆ ಕೆಲವು ನಿಶ್ಚಿತವಾದ ಕ್ರಮದ ಕರ್ಮದಿಂದ ಜೀವಿಯ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಉನ್ನತಿ ಅನುಕೂಲವಾಗುವಂತೆ ದೇಹವನ್ನು ಪವಿತ್ರಗೊಳಿಸುವ ಕ್ರಿಯೆಗಳೇ ಒಂದು ರೀತಿಯಲ್ಲಿ ಜೀವನಾವರ್ತನ ಆಚರಣೆಗಳು. ಇವುಗಳನ್ನು ಒಂದು ದೃಷ್ಟಿಯಲ್ಲಿ ಹಿಂದೂಧರ್ಮದಲ್ಲಿ ಬೆಳೆದು ಬಂದ 'ಸಂಸ್ಕಾರ' ಗಳ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ಪರಿಭಾವಿಸಬಹುದಾಗಿದೆ.

ಹಿಂದು ಧರ್ಮದಲ್ಲಿ ಸಂಸ್ಕಾರ ಎಂಬ ಪದವು "ದೇಹ ಮತ್ತು ಆತ್ಮದಲ್ಲಿ ನೆಲೆಸಿದೆ ಎನ್ನಲಾಗಿರುವ ಮತ್ತು ಶಾಸ್ತ್ರಗಳಲ್ಲಿ ವಿಧಿಸಲಾದ ಕ್ರಿಯಾ ವಿಧಿಗಳ ಆಚರಣೆಯಿಂದಾಗಿ ಇನ್ನೂ ಹೆಚ್ಚು ಪ್ರಚಲಿತವಾಗುವ ವಿಶಿಷ್ಟತಮವಾದ ಶ್ರೇಷ್ಠತೆಯನ್ನು ಸಂಸ್ಕಾರ ಎನ್ನುತ್ತೇವೆ. ಸಂಸ್ಕಾರಗಳು ವ್ಯಕ್ತಿಯನ್ನು ಸುಧಾರಿಸುವ ಮತ್ತು ಪಾಪ ವಿಮುಕ್ತನನ್ನಾಗಿ ಪವಿತ್ರಗೊಳಿಸುವ ದೃಷ್ಟಿಯಿಂದ ಮಹತ್ವವಾದವುಗಳು. ತಾಯಿಯ ಗರ್ಭದಲ್ಲಿರುವ ಸ್ಥಿತಿಯಿಂದ ಹಿಡಿದು ವ್ಯಕ್ತಿಯ ಹುಟ್ಟು ಮತ್ತು ಸಾವನ್ನು ಆಧರಿಸಿ ಸಾವಿನಾಚೆಗೂ ಕೂಡಾ ಅವು ಪ್ರಭಾವ ಬೀರುತ್ತವೆ. ತೊಟ್ಟಿಲಿನಿಂದ ಸ್ಮಶಾನದವರೆಗಿನ ಜೀವನ ಯಾತ್ರೆಯಲ್ಲಿ ಸಂಭವಿಸುವ ಪ್ರಮುಖ ಘಟನೆಗಳಿಗೆ ಆಧ್ಯಾತ್ಮಿಕತೆಯ ಲೇಪನವನ್ನು ಹಚ್ಚುವದೇ ಸಂಸ್ಕಾರಗಳ ಕಾರ್ಯವಾಗಿದೆ."[೮]

ಈ ಹಿನ್ನೆಲೆಯಲ್ಲಿ ಜೀವನಾವರ್ತನ ಆಚರಣೆಗಳು ಸಹ ಆಚರಣಾಕ್ರಮಗಳಾಗಿದ್ದು, ಪ್ರತಿಯೊಂದು ಸಮುದಾಯಗಳೂ ಸಹ ತನ್ನದೇ ಆದ ಸಂಸ್ಕೃತಿಯನ್ನಾಧರಿಸಿ ತನ್ನಲ್ಲಿನ ವ್ಯಕ್ತಿಗಳ ವ್ಯಕ್ತಿತ್ವವನ್ನು

ಸೂಕ್ತವಾದ ರೀತಿಯಲ್ಲಿ ರೂಪಿಸುವ ವ್ಯವಸ್ಥೆ ಮಾಡಿಕೊಂಡಿದ್ದು, ಅದಕ್ಕನುಗುಣವಾದ ಪ್ರಯತ್ನಗಳು ಹಾಗೂ ವ್ಯವಸ್ಥಾ ವಿಧಾನಗಳು ಬೆಳೆದು ಬಂದಿವೆ. ಅವುಗಳೇ ಜೀವನಾವರ್ತನ ಆಚರಣೆಗಳು. ಗೊಂದಲಿಗ ಸಮುದಾಯದಲ್ಲಿಯೂ ಕೂಡಾ ತನ್ನ ಸಂಸ್ಕೃತಿಗನುಗುಣವಾಗಿ ಸಾಮಾಜಿಕ ಪರಂಪರೆಯ ಹಿನ್ನೆಲೆಯಲ್ಲಿ ವ್ಯಕ್ತಿಯ ವ್ಯಕ್ತಿತ್ವ ರೂಪಗೊಳ್ಳಬೇಕು ಎನ್ನುವ ದಿಶೆಯಲ್ಲಿ ಹಲವಾರು ಜೀವನಾವರ್ತನ ಆಚರಣೆಗಳು ಬೆಳೆದು ಬಂದಿವೆ.

೪.೧.೧. ಜನನ

ಸಾಮಾನ್ಯವಾಗಿ ಸಂತಾನೋತ್ಪತ್ತಿಯು ಕೇವಲ ಶರೀರಕ್ಕೆ ಸಂಬಂಧಿಸಿದ ಸುಖದ ಸಂಗತಿಯಾಗಲೀ ಅಥವಾ ಅದೊಂದು ಸಹಜವಾದ ಶಾರೀರಿಕ ಕ್ರಿಯೆ ಎಂಬುದಾಗಲೀ ಅಷ್ಟೇ ಅಲ್ಲ. ಸಂತಾನೋತ್ಪತ್ತಿ ಪ್ರಕ್ರಿಯೆಗೆ ಪ್ರತಿಯೊಂದು ಸಮಾಜದಲ್ಲಿ ಸಾಂಸ್ಕೃತಿಕ ಹಿನ್ನೆಲೆಯನ್ನು ಕಾಣುತ್ತೇವೆ. ವಂಶಾಭಿವೃದ್ಧಿ, ಸಮಾಜದ ಮುಂದುವರೆವಿಕೆಯ ಮಹತ್ತರ ಉದ್ದೇಶವನ್ನು ಈ ಪ್ರಕ್ರಿಯೆಯಲ್ಲಿ ಗುರುತಿಸುತ್ತೇವೆ. ಭೂಮಿಗೆ ಬರುವ ಹೊಸ ಜೀವವೊಂದನ್ನು ಹೇಗೂ ಬರಮಾಡಿಕೊಳ್ಳುವುದಿಲ್ಲ. ಆ ಹೊಸ ಜೀವಕ್ಕಾಗಿ ತಪಸ್ಸನ್ನು ಗೈದಿರುವ ರೀತಿಯಲ್ಲಿ ೯ ತಿಂಗಳು ಪರಿಶ್ರಮ, ತೊಂದರೆ ಪಟ್ಟು ಬರುವ ಹೊಸ ಜೀವಿಯೊಂದಕ್ಕೆ ಪರಿತಪಿಸುತ್ತ, ಆ ಸಂತೋಷದ ಕ್ಷಣಗಳನ್ನು ಕಾತರದಿಂದ ಕಾಯುತ್ತಿರುವುದು. ಅದಕ್ಕೆ ಶಿಶು ಜನನದ ಆ ಸಂದರ್ಭದಲ್ಲಿ ಕುಟುಂಬದವರು, ಆಯಾ ಸಮುದಾಯದ ಇತರರು ಪಡುತ್ತಿರುವ ಸಂತೋಷವೇ ಸಾಕ್ಷಿಯಾಗಿದೆ. ಹುಟ್ಟಿರುವ ಈ ಶಿಶು ನಮ್ಮ ವಂಶದ ಕುಡಿ, ತಾಯ್ತನದ ಸಾರ್ಥಕತೆಯ ಫಲ, ಕುಟುಂಬದ ಆಶಾಕಿರಣ, ಆಶಾಜ್ಯೋತಿ ಎನ್ನುವ ಭಾವನೆ ಆ ಸಂದರ್ಭದಲ್ಲಿ ಸಹಜವಾಗಿ ಬರುವಂತಹದ್ದು. ಬುಡಕಟ್ಟು ಸಮುದಾಯಗಳಲ್ಲಂತೂ ಈ ಸಂದರ್ಭಕ್ಕೆ ಸಂಬಂಧಪಟ್ಟಂತೆ ಆಚರಣೆಗಳು ಹೆಣ್ಣು ಮಗಳ ಗರ್ಭಾವಸ್ಥೆಯಿಂದಲೇ ಪ್ರಾರಂಭವಾಗುತ್ತವೆ. ಹೆಣ್ಣು ಮಗು ಋತುಮತಿ ಯಾಗುವುದನ್ನು ಗರ್ಭಧರಿಸುವದನ್ನು ಅತ್ಯಂತ ಸಂತೋಷದಿಂದಲೇ ನಿರೀಕ್ಷಿಸುತ್ತಾರೆ.

ಅಲೆಮಾರಿ ಬುಡಕಟ್ಟು ಸಮುದಾಯವಾಗಿರುವ ಗೊಂದಲಿಗರಲ್ಲಿಯೂ ಜನನಕ್ಕೆ ಸಂಬಂಧಪಟ್ಟಂತೆ ಮತ್ತು ನಂತರದ ಅವಧಿಯಲ್ಲಿ ಆಚರಿಸುವ ಕ್ರಮಗಳು ಇತರ ಸಮುದಾಯಗಳಲ್ಲಿ ಆಚರಣೆಯಲ್ಲಿರುವಂತೆ ಕಂಡುಬರುತ್ತವೆ. ಯಾವಾಗಲೂ ಗಂಡನ ಜೊತೆ ಸಂಚಾರಿಯಾಗಿ ಅಲೆಯುವ ಹೆಂಡತಿಯು ಗರ್ಭವತಿ ಯಾದಾಗನಿಂದಲೂ ಆಕೆಯ ಆಸೆ, ಆಕಾಂಕ್ಷೆಗಳನ್ನು ಅಥವಾ ಬಯಕೆಗಳನ್ನು ಅಲ್ಲಲ್ಲಿ ಪೂರೈಸುತ್ತಲೇ ಇರುತ್ತಾನೆ. ಗರ್ಭವತಿಯಾದ ಹೆಣ್ಣಿಗೆ ಸೀಮಂತ ಕಾರ್ಯ ಮಾಡುವುದು ಸರ್ವೇಸಾಮಾನ್ಯ.

ಸಾಮಾನ್ಯವಾಗಿ ಮೊದಲ ಹೆರಿಗೆ ಹೆಣ್ಣಿನ ತವರು ಮನೆಯಲ್ಲಿಯೇ ಆಗಬೇಕು. ಗರ್ಭಿಣಿಗೆ ೯ ತಿಂಗಳು ತುಂಬುವುದಕ್ಕಿಂತ ಪೂರ್ವದಲ್ಲಿ ಉಡಿ ತುಂಬಿ ಹೊಸ ಸೀರೆಯನ್ನು ಉಡಿಸಿ ಹೆರಿಗೆಗಾಗಿ ತವರು ಮನೆಗೆ ಕಳಿಸುತ್ತಾರೆ. ತವರು ಮನೆಯವರು ಅಲೆಮಾರಿಗಳೇ ಅಗಿದ್ದರೆ ಅವಳನ್ನು ಎಲ್ಲಿಯೂ ತಿರುಗಾಡಲು ಬಿಡದೇ ತಮ್ಮ-ತಮ್ಮ ಮೂಲನೆಲೆಗಳಲ್ಲಿಯೇ ಇರಿಸುತ್ತಾರೆ. ಗೊಂದಲಿಗರಲ್ಲಿಯೂ ನುರಿತ ಸೂಲಗಿತ್ತಿಯರು ಇರುವುದರಿಂದ ಸಾಮಾನ್ಯವಾಗಿ ಹೆರಿಗೆಯು ಮನೆಯಲ್ಲಿಯೇ ಆಗುತ್ತದೆ.

"ಗರ್ಭಿಣಿ ಮಹಿಳೆಯ ಹೆರಿಗೆ ಆದ ನಂತರ ಮಾಸವನ್ನು ಮಡಿಕೆಯಲ್ಲಿ ಹಾಕಿ ಮನೆಯ ಮುಂಭಾಗ ಅಥವಾ ಹಿಂಬಾಗದಲ್ಲಿ ತಗ್ಗು ತೆಗೆದು, ಅದಕ್ಕೆ ಪೂಜೆ ಮಾಡಿ ಮಡಿಕೆಯನ್ನು ಮಣ್ಣಿನಲ್ಲಿ ಮುಚ್ಚುತ್ತಾರೆ. ಹೊಕ್ಕಳ ಹುರಿಯನ್ನು ಬೆಳ್ಳಿಯ ತಾಯತದಲ್ಲಿ ಹಾಕಿ ಮಗುವಿನ ಕೊರಳಲ್ಲಿ ಕಟ್ಟುತ್ತಾರೆ. ಬಾಣಂತಿ ಮತ್ತು ಮಗುವನ್ನು ಐದು ದಿನಗಳವರೆಗೂ ಅಲ್ಲಿಯೇ ಸ್ನಾನ ಮಾಡಿಸುತ್ತಾರೆ."[೨೯] ಜನನದ ವೇಳೆಯನ್ನು ಆಧಾರವಾಗಿಟ್ಟುಕೊಂಡು ಬ್ರಾಹ್ಮಣ ಪುರೋಹಿತರ ಹತ್ತಿರ ಜನನದ ಮುಹೂರ್ತದ ಬಗ್ಗೆ ಕೇಳುವರು. ಹುಟ್ಟಿದ ಮಹೂರ್ತವು ಒಳ್ಳೆಯದು ಇದ್ದರೆ ಯಾವದೇ ವಿಶಿಷ್ಟ ಆಚರಣೆಗಳಿಲ್ಲ. ಒಂದು ವೇಳೆ ಹುಟ್ಟಿದ ಮುಹೂರ್ತವು ಸೂತಕದಲ್ಲಿದ್ದರೆ, ಆ ಸೂತಕ ಕಳೆಯಲೂ ನವಗ್ರಹ ಪೂಜೆ, ಒಂಬತ್ತು ದವಸ ಧಾನ್ಯಗಳನ್ನು ದಾನ ಮಾಡುವುದು, ಆಕಳ ಅಥವಾ ಬಂಗಾರ-ಬೆಳ್ಳಿಯ ದಾನವನ್ನು ಕೊಡಬೇಕು ಎಂಬ ಇವರಲ್ಲಿದೆ. ಗೊಂದಲಿಗರು ಮಗುವಿನ ಹುಟ್ಟಿದ ಮೂಹೂರ್ತ, ತಿಳಿದುಕೊಳ್ಳುವ ಪರಂಪರೆ ಇತ್ತಿತ್ತಲಾಗಿ ಬೆಳೆದುಬಂದಿದೆ. ಮೊದಲಿಗೆ ಯಾವ ಪದ್ಧತಿಯನ್ನು ಅವರು ಅನುಸರಿಸುತ್ತಿರಲಿಲ್ಲ.

**ಐದೇಶಿ ಅಥವಾ ಪಾಚವಿ** : ಮಗು ಹುಟ್ಟಿದ ೫ನೇ ದಿನಕ್ಕೆ ಪಾಚವಿ ಅಥವಾ ಐದೇಶಿ ಹೆಸರಲ್ಲಿ ಬಚ್ಚಲು ಪೂಜೆ ಮಾಡುತ್ತಾರೆ. ಈ ಐದೇಶಿ ದಿನ ಶೆಟ್ಗೆವ್ವ (ಶೆಟಗವ್ವ/ಸೆಟವಿ) ಆ ಮಗುವಿನ ಹಣೆಬರಹ ಬರೆಯುತ್ತಾಳೆ ಎಂಬ ನಂಬಿಕೆ ಇದೆ. ಅಂದು ಹೊಸ ಮರವನ್ನು ತಂದು ಅದರ ಹಿಂಬದಿಗೆ ಹೆಣ್ಣು ದೇವತೆ ಶೆಟ್ಗೆವ್ವ ಚಿತ್ರ ತೆಗೆಯುವರು. ಕೆಲವರು ಶೆಟ್ಗವ್ವನ ಕಟ್ಟಿಗೆ ಮೂರ್ತಿಯನ್ನು ತೆಗೆದುಕೊಂಡು ಬರುತ್ತಾರೆ. ಶೆಟ್ಟೆವ್ವನ ಮೂರ್ತಿ ತೆಗೆದುಕೊಂಡು ಬಂದಿದ್ದರೆ ಅದನ್ನು ಹೊಸಮರದಲ್ಲಿ ಹೊಸ ಬಟ್ಟೆಯನ್ನು ಹಾಸಿ ಅದರಲ್ಲಿ ಕುಳ್ಳರಿಸುತ್ತಾರೆ. ಶೆಟ್ಟವ್ವನ ಚಿತ್ರ ಅಥವಾ ಮೂರ್ತಿಯನ್ನು ಜಗುಲಿಯ ಮೇಲಿಟ್ಟು ಕುಂಕುಮ; ಭಂಡಾರ ಹಚ್ಚಿ ಮುತ್ತೈದೆಯರು ದೀಪ ಬೆಳಗಿಸಿ ಪೂಜೆ ಮಾಡುತ್ತಾರೆ. ಅಂದು ಮನೆಯಲ್ಲಿ ಸಿಹಿ ಪದಾರ್ಥಗಳನ್ನು ತಯಾರಿಸಿ ದೇವಿಗೆ ನೈವೇದ್ಯ ಮಾಡುತ್ತಾರೆ. ಅಕ್ಕಪಕ್ಕದ ಮನೆಯ ಮುತ್ತೈದೆಯರನ್ನು, ಮಕ್ಕಳನ್ನು ಕರೆಯಿಸಿ ಊಟ ಮಾಡಿಸುತ್ತಾರೆ. ಈ ರೀತಿ ಶೆಟ್ಗೆವ್ವ ದೇವಿಯನ್ನು ಸಂತೋಷದಿಂದ ಪೂಜೆ ಮಾಡಿದರೆ ಆಕೆಯು ಸಂಪ್ರೀತಳಾಗಿ ಮಗುವಿನ ಹಣೆಬರಹವನ್ನು ಚೆನ್ನಾಗಿ ಬರೆಯುತ್ತಾಳೆಂಬ ನಂಬಿಕೆ ಇವರಲ್ಲಿ ಬಲವಾಗಿ ಬೆಳೆದು ಬಂದಿದೆ.

### ೪.೧.೨. ನಾಮಕರಣ

ಹೆಣ್ಣು ಮಗುವಿಗೆ ೧೨ನೇ ದಿನಕ್ಕೆ ಗಂಡು ಮಗುವಿಗೆ ಹನ್ನೊಂದು ಅಥವಾ ಹದಿಮೂರನೇ ದಿನಕ್ಕೆ ನಾಮಕರಣ ಮಾಡುವ ಪದ್ಧತಿಯನ್ನು ಇವರಲ್ಲಿ ಕಾಣುತ್ತೇವೆ. ಇದನ್ನು ತೊಟ್ಟಿಲಶಾಸ್ತ್ರ ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಬಾಣಂತಿಯ ಹಾಸಿಗೆ, ಬಟ್ಟೆಗಳನ್ನು ತೊಳೆದು ಮನೆಯನ್ನು ಸಾರಿಸಿ ಸ್ವಚ್ಛಮಾಡಿ ನಂತರ ಬಾಣಂತಿಯು ಗಂಗಾ ಪೂಜೆ ಮಾಡಿದ ಮೇಲೆ ಹೆರಿಗೆಯ ಸೂತಕವು ಕಳೆದಂತೆ ಎಂಬ ನಂಬಿಕೆ ಇದೆ. ಅಂದು ಸಮುದಾಯದ ಮುತ್ತೈದೆಯರೆಲ್ಲರನ್ನೂ ಕರೆಯಿಸುತ್ತಾರೆ. ಸೀರೆಯಿಂದ ಜೋಳಿಗೆ ತೊಟ್ಟಿಲು ಮಾಡಿ ಹೂಗಳಿಂದ ಅಲಂಕರಿಸುತ್ತಾರೆ. ಬಾಣಂತಿ ಮತ್ತು ಮಗುವನ್ನು ತಲೆ ಸ್ನಾನ ಮಾಡಿಸಿ ಹೊಸ ಬಟ್ಟೆಗಳನ್ನು ತೊಡಿಸುತ್ತಾರೆ. ಮಗುವಿನ ಹೆಸರನ್ನು

ಸೋದರತ್ತೆಯೇ ಇಡುವ ಪರಂಪರೆ ಇವರಲ್ಲಿದೆ. ಸೊದರತ್ತೆ ಇಲ್ಲದಿದ್ದರೆ ಮಗುವಿಗೆ ಅತ್ತೆಯಾಗುವವರು ಹೆಸರು ಇಡುತ್ತಾರೆ. ಇದಕ್ಕೆ ಸಂಬಂಧಪಟ್ಟಂತೆ ಪ್ರಾರಂಭದಲ್ಲಿಯೇ ಬ್ರಾಹ್ಮಣರ ಹತ್ತಿರ ನಾಮಕರಣದ ಬಗ್ಗೆ ಕೇಳುತ್ತಾರಲ್ಲದೇ ಮಗುವಿನ ಗೋತ್ರ, ನಕ್ಷತ್ರದ ಆಧಾರದ ಮೇಲೆ ಜನ್ಮನಾಮವನ್ನು ಹೇಳುವರು.

ಮುತ್ತೈದೆಯರು ಎಲ್ಲರೂ ಸೇರಿ ಅತ್ತೆಯಾದವಳು ಮಗುವನ್ನು ಎತ್ತಿಕೊಂಡು ಅಂಗಾತವಾಗಿ ಜೋಳಿಗೆ ಅಥವಾ ತೊಟ್ಟಿಲಲ್ಲಿ ಹಾಕಿ ಪ್ರಾರಂಭದಲ್ಲಿ ಐದು ದೇವರ ಹೆಸರು, ಹಿರಿಯರ ಹೆಸರುಗಳಿಂದ ಕಿವಿಯಲ್ಲಿ ಕರೆದು ನಾಮಕರಣ ಮಾಡಿ 'ಕುರ್ರ ಕುರ್ರ ಕುಟ್ಟಿಟ್ಟೈ ಕುರ್ರ' ಎಂದು ನಿಧಾನವಾಗಿ ಕೂಗುತ್ತಾಳೆ. ನಂತರ ಪ್ರೀತಿಯಿಂದ ಕರೆಯುವ ಹೆಸರನ್ನು ಕಿವಿಯಲ್ಲಿ ಕರೆದು ನಾಮಕರಣ ಮಾಡುವರು. ನಂತರ ಸೇರಿದ ಮುತ್ತೈದೆಯರೆಲ್ಲ, ಹೆಸರನ್ನು ಇಟ್ಟ ಸೊದರತ್ತೆಯ ಬೆನ್ನಿಗೆ ನಿಧಾನವಾಗಿ ಗುದ್ದುವರು. ಈ ಸಂದರ್ಭದಲ್ಲಿ ಎಲ್ಲರಿಗೂ ನೆನೆಸಿದ ಐದು ಧಾನ್ಯಗಳ ಗುಗ್ಗರಿಯನ್ನು ಹಂಚುತ್ತಾರೆ. ಮಗುವಿಗೆ ಮತ್ತು ತಾಯಿಗೆ ಹೆಸರಿಡಲು ಬಂದವರು ತಮ್ಮ ತಮ್ಮ ಯೊಗ್ಯತಾನುಸಾರ ಕಾಣಿಕೆಯನ್ನು ಕೊಡುತ್ತಾರೆ.

ನಾಮಕರಣದ ಈ ಶುಭ ಸಂದರ್ಭದಲ್ಲಿ ಬಂದಂತಹ ಎಲ್ಲರಿಗೂ ಊಟದ ವ್ಯವಸ್ಥೆಯನ್ನು ಮಾಡುವರು. ಅಂದು ಸಾಮಾನ್ಯವಾಗಿ ಸಿಹಿ ಅಡುಗೆಯನ್ನು ಮಾಡುತ್ತಾರೆ. ಜೊತೆಗೆ ಕೆಲವರು ಮಾಂಸಾಹಾರವನ್ನು ಮಾಡುವದು ರೂಢಿಯಲ್ಲಿದೆ.

ಆಧುನಿಕತೆಯ ಪ್ರಭಾವದಿಂದ ಗೊಂದಲಿಗರಲ್ಲಿ ಜನನಕ್ಕೆ ಸಂಬಂಧ ಪಟ್ಟ ಅಚರಣೆಗಳಲ್ಲಿ ಅಲ್ಪಸ್ವಲ್ಪ ಮಾರ್ಪಾಡುಗಳಾಗಿರುವುದನ್ನು ಗಮನಿಸಬಹುದಾಗಿದೆ. ಅಲೆಮಾರಿತನದ ಬದುಕಿನಿಂದ ಮುಕ್ತರಾಗಿ ಸ್ಥಿರ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನ ಮಾಡುತ್ತಿರುವ ಗೊಂದಲಿಗರಲ್ಲಿ ಅನೇಕರು ಅಲ್ಲಲ್ಲಿ ಗುಡಿಸಲು ಅಥವಾ ಜೋಪಡಿಗಳ ರೂಪದ ಮನೆಗಳಲ್ಲಿ ಬದುಕನ್ನು ಕಳೆಯುತ್ತಿದ್ದಾರೆ. ಆಧುನಿಕತೆಯ ಸ್ಪರ್ಶಕ್ಕೆ ಒಳಗಾಗಿರುವ ಗೊಂದಲಿಗರು ಸಾಮಾನ್ಯವಾಗಿ ಹೆರಿಗೆಯನ್ನು ಆಸ್ಪತ್ರೆಗಳಲ್ಲಿ ಮಾಡಿಸುತ್ತಿದ್ದಾರೆ. ನಂತರದ ಆಚರಣೆಗಳು ಪಾರಂಪರಿಕವಾಗಿ ನಡೆದುಕೊಂಡು ಬಂದಂತೆ ಆಚರಿಸುತ್ತಿದ್ದಾರೆ. ನಾಮಕರಣದ ಸಂದರ್ಭದಲ್ಲಿ ತಮ್ಮ ಸಮುದಾಯದರವಷ್ಟೆ ಅಲ್ಲ ಇನ್ನಿತರರನ್ನು ಆಹ್ವಾನಿಸುತ್ತಾರೆ. ಇಂಥ ಸಂದರ್ಭದಲ್ಲಿ ಸ್ಥಿತಿವಂತ ಕುಟುಂಬದವರು, ವಿಡಿಯೋ ಚಿತ್ರೀಕರಣ ಮಾಡಿಸಿ, ಫೋಟೋಗಳನ್ನು ತೆಗೆಸುತ್ತಾರೆ. ನಂತರ ಪ್ರತಿ ವರ್ಷ ಹುಟ್ಟಿದ ತಾರೀಖಿನಂದು ಜನ್ಮದಿನದ ಕಾರ್ಯಕ್ರಮಗಳನ್ನು ಆಚರಿಸುತ್ತಾ ಬರುತ್ತಿರುವುದು ಕಂಡುಬರುತ್ತದೆ.

೪.೧.೩. ಜವುಳ

ಕರ್ಣವೇದ ಸಂಸ್ಕಾರವು ಒಂದು ಮಗುವಿನ ಕಿವಿಯನ್ನು ಪ್ರಥಮ ಬಾರಿಗೆ ತೂತು ಮಾಡಿ ಆಭರಣ ತೊಡಿಸುವ ಸಂಸ್ಕಾರ ಕ್ರಿಯೆ ಇದಾಗಿದೆ. ಗೊಂದಲಿಗ ಸಮುದಾಯದಲ್ಲಿ ಮಗು ಹುಟ್ಟಿದ ಮೂರು ತಿಂಗಳ ಅಥವಾ ಐದು ತಿಂಗಳಿಗೆ ಕಿವಿ ಚುಚ್ಚುವ ಅಥವಾ ಮುರು ಚುಚ್ಚುವ ಕಾರ್ಯವನ್ನು ಮಾಡಲಾಗುವದು. ಆರೋಗ್ಯ ತತ್ವ ಮತ್ತು ಶೃಂಗಾರ ತತ್ವಗಳು ಈ ಕ್ರಿಯೆಯ ಹಿನ್ನೆಲೆಯಲ್ಲಿ ಇದೆ.

ಶುಶ್ರೂತ ಸಂಹಿತೆಯ ಪ್ರಕಾರ ಕಿವಿ ಚುಚ್ಚುವುದರಿಂದ ಅಂಡವಾಯು ಮತ್ತು ನೀರಿನಿಂದ ತುಂಬಿದ ಬಾವು ಇತ್ಯಾದಿ ಕೆಲವು ರೋಗಗಳು ಬರುವದಿಲ್ಲ ಎಂಬ ವಿವರಣೆ ಇದೆ.

ಮಗುವಿನ ತಲೆ ಕೂದಲುಗಳನ್ನು ಪ್ರಥಮ ಸಲ ಕತ್ತರಿಸುವಾಗ ಮಾಡುವ ಸಂಸ್ಕಾರವೇ ಚೂಡಾಕರ್ಮ ಅಥವಾ ಜವುಳ ಕಾರ್ಯ. ಹಿಂದೂ ಸಂಪ್ರದಾಯದಲ್ಲಿ ಆಚರಿಸುವ ಈ ಸಂಸ್ಕಾರವು ಸುದೀರ್ಘವಾದ ಆಯಸ್ಸು ಹಾಗೂ ಸೌಂದರ್ಯದ ದೃಷ್ಟಿಯಿಂದ ಈ ಕಾರ್ಯ ಮಹತ್ವಪೂರ್ಣ ವಾದುದು. ಚರಕ ಮತ್ತು ಶುಶ್ರೂತರು ಸಕಾಲದಲ್ಲಿ ತಲೆಕೂದಲನ್ನು ಮತ್ತು ಉಗುರುಗಳನ್ನು ತೆಗೆಯುವುದರಿಂದ ಮಗುವಿಗೆ ಧೈರ್ಯ, ತೇಜಸ್ಸು, ಸಂತಸ, ಮತ್ತು ಸಂಪತ್ತು ಪ್ರಾಪ್ತವಾಗುವದು ಎಂದು ಹೇಳಿದ್ದಾರೆ.

ಗೊಂದಲಿಗರ ಸಮುದಾಯದಲ್ಲಿಯೂ ಈ ಕಾರ್ಯವನ್ನು ಪದ್ಧತಿ-ಆಚರಣೆಯ ರೂಪದಲ್ಲಿ ಮಾಡುತ್ತಾರೆ. ಸಾಮಾನ್ಯವಾಗಿ ಈ ಸಮುದಾಯದಲ್ಲಿ ಮಗು ಹುಟ್ಟಿದ ಒಂದು ವರ್ಷದ ಒಳಗಾಗಿ ಜವುಳ ತೆಗೆಸುವ ಸಂಸ್ಕಾರವನ್ನು ಮಾಡಲಾಗುತ್ತದೆ. ಗಂಡು ಮಗುವಾದರೆ ಕಡ್ಡಾಯವಾಗಿ ತಮ್ಮ ಮನೆ ದೇವರಿಗೆ ಹೋಗಿ ಅಲ್ಲಿಯೇ ಜವುಳ ತೆಗೆಸುವ ಕಾರ್ಯವನ್ನು ಮಾಡಲಾಗುತ್ತದೆ. ಮೊದಲನೆಯ ಜವುಳವನ್ನು ಸೋದರಮಾವನೇ ತೆಗೆಯಬೇಕು. ಅಂದು ದೇವರ ಸಾನಿಧ್ಯದಲ್ಲಿ ಹೋಗಿ ಮಗುವನ್ನು ಸ್ನಾನ ಮಾಡಿಸಿ ತಾಯಿಯ ಮಡಿಲಲ್ಲಿ ಕುಳ್ಳಿರಿಸಿ ಮಗುವಿನ ಸೋದರ ಮಾವನು ಎರಡು ವಿಳ್ಯದೆಲೆ ಗಳನ್ನು ಕತ್ತರಿ ಆಕಾರದಲ್ಲಿ ಜೋಡಿಸಿ ಅದನ್ನು ಆ ಮಗುವಿನ ತಲೆಯ ಮೇಲೆ ಕತ್ತರಿಯಂತೆ ಆಡಿಸಿ ೪-೫ ಕೂದಲನ್ನು ತೆಗೆಯುವುದರ ಮೂಲಕ ಜವುಳ ಕಾರ್ಯವನ್ನು ನೇರವೇರಿಸುವನು. ಮಗುವಿನ ಕೂದಲು ತೆಗೆದ ಸೋದರ ಮಾವನಿಗೆ ತಮ್ಮ ಯೋಗ್ಯತಾನುಸಾರ ಉಡುಗೊರೆಯನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ತಮ್ಮ ಸಮುದಾಯದವರನ್ನು ಕರೆದುಕೊಂಡು ಹೋಗಿದ್ದರೆ ಅವರು ಸಹಜವಾಗಿ ಮಗುವಿಗೆ ಉಡುಗೊರೆಯನ್ನು ಕೊಟ್ಟು, ಅಂದು ಮಾಡಿರುವ ಸಿಹಿ ಅಡುಗೆಯನ್ನು ಊಟ ಮಾಡುತ್ತಾರೆ. ಹೆಣ್ಣು ಮಕ್ಕಳ ಮೊದಲನೆಯ ಜವುಳವನ್ನು ಸೋದರ ಮಾವನೇ ತೆಗೆಯಬೇಕು. ಆದರೆ ಸಾಮಾನ್ಯವಾಗಿ ಆ ಕಾರ್ಯವನ್ನು ಮನೆಯಲ್ಲಿಯೇ ಮಾಡುತ್ತಾರೆ.

**೪.೧.೪. ಋತುಮತಿಶಾಸ್ತ್ರ**

ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿ ಬಾಲೆಯು ಕನ್ಯೆಯಾಗುವ ಪ್ರಕ್ರಿಯೆಯನ್ನು ಅತಿ ಸಂಭ್ರಮದಿಂದ ಎದುರುಗೊಳ್ಳುತ್ತವೆ. ಬಾಲಿಕೆಯು ಋತುಮತಿ ಯಾಗುವ ಕ್ರಿಯೆಯು ಕೇವಲ ದೈಹಿಕ ಬೆಳವಣಿಗೆಯ ಸಂದರ್ಭದಲ್ಲಿ ಕಂಡು ಬರುವ ಒಂದು ಪ್ರಕ್ರಿಯೆ ಅಷ್ಟೇ ಅಲ್ಲ. ಒಂದು ಹೊಸ ಜನಾಂಗದ ಉದಯಕ್ಕೆ ಎಡೆಮಾಡಿಕೊಡುವ ಫಲವಂತಿಕೆಗೆ ಅಣಿಯಾಗಲು ಅನುವು ಮಾಡಿಕೊಡುವ ಮುನ್ನುಡಿಯಾಗಿದೆ ಎಂದರೆ ತಪ್ಪಾಗಲಾರದು. ಈ ದೃಷ್ಟಿಯಲ್ಲಿ ಪ್ರತಿಯೊಂದು ಸಮುದಾಯದಲ್ಲಿ ಬಾಲೆಯ ಋತುಮತಿಯಾಗುವ ಸಂದರ್ಭವನ್ನು ಒಂದು ವಿಶಿಷ್ಟ ಪದ್ಧತಿಯ ರೂಪದಲ್ಲಿ ಆಚರಣೆ ಮಾಡುತ್ತಾರೆ. ಕಾರಣ ಬಾಲೆ ಕನ್ಯೆಯಾಗುವ ಕ್ರಿಯೆ ಮನುಷ್ಯ ಬದುಕಿನ ಮಹತ್ವದ ಕ್ರಿಯೆಯಾಗಿರುತ್ತದೆ.

ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿ ಈ ಋತುಮತಿ ಶಾಸ್ತ್ರ/ ಪ್ರೌಢಸಂಸ್ಕಾರವನ್ನು ವಿಭಿನ್ನ ರೀತಿಯಲ್ಲಿ ಆಚರಿಸುವುದನ್ನು ಕಾಣಬಹುದು. ಗೊಂದಲಿಗರ ಸಮುದಾಯದಲ್ಲೂ ಸಹ ಈ ಶಾಸ್ತ್ರವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸುತ್ತಾರೆ. ಹೆಣ್ಣು ಮಗಳು ಋತುಮತಿಯಾದ ಸಂದರ್ಭದಲ್ಲಿ ಆ ಹೆಣ್ಣು ಮಗುವಿಗೆ ಸಮುದಾಯದ ಅಕ್ಕಪಕ್ಕದ ಮುತ್ತೈದೆಯರನ್ನು ಕರೆಯಿಸಿ ತಲೆಗೆ ಕೊಬ್ಬರಿ ಎಣ್ಣೆ, ಅರಿಶಿಣ ಹಚ್ಚಿ ತಲೆ ಸ್ನಾನವನ್ನು ಮಾಡಿಸಿ ಮನೆಯ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಇರಲು ಸೂಚಿಸಲಾಗುತ್ತದೆ. ಇನ್ನು ಕೆಲವು ಭಾಗಗಳಲ್ಲಿ ಹೆಣ್ಣು ಮೈನೆರೆದರೆ ಆಕೆಗಾಗಿ ಒಂದು ಗುಡಿಸಲು(ಗುಡ್ಲ) ನಿರ್ಮಿಸುತ್ತಾರೆ. ತಾವು ಬಯಲಿನಲ್ಲಿ ಉಳಿದುಕೊಂಡಿದ್ದರೂ ಆ ಸ್ಥಳದ ಪಕ್ಕದಲ್ಲಿಯೇ ಒಂದು ಗುಡಿಸಲು ಕಟ್ಟಿ ಅದರೊಳಗೆ ಆಕೆಯನ್ನು ಸಂರಕ್ಷಿಸುತ್ತಾರೆ. ಇದಕ್ಕೆ ಅವರು 'ಗೂಡ್ಲು ಕೊಡುವ ಶಾಸ್ತ್ರ' ಎಂದು ಕರೆಯುತ್ತಾರೆ. ಇವರಲ್ಲಿ ಸ್ಥಿತಿವಂತರಾದವರು ಋತುಮತಿಯಾದ ಹೆಣ್ಣು ಮಗುವಿಗೆ ಪ್ರತ್ಯೇಕ ಖಾಲಿಯಿರುವ ಮನೆಯೊಂದರಲ್ಲಿ ಹಂದರ ಹಾಕಿ (ಮಕರ) ಮಂಚದ ಮೇಲೆ ಕುಳ್ಳಿರಿಸುವರು. ಆ ಕೋಣೆಯನ್ನು ಬಣ್ಣ ಬಣ್ಣದ ಸೀರೆ ಬಟ್ಟೆಗಳಿಂದ ಹಾಗೂ ದೇವತೆಗಳ ಚಿತ್ರಗಳಿಂದ ಶೃಂಗರಿಸುತ್ತಾರೆ. ಹೆಣ್ಣು ಋತುಮತಿಯಾದ ವೇಳೆಯಲ್ಲಿ ಹಾಕಿಕೊಂಡ ಬಟ್ಟೆಗಳನ್ನು ತೆಗೆದು ಹಾಕಲಾಗುತ್ತದೆ. ಈ ಸಂದರ್ಭದಲ್ಲಿ ಋತುಮತಿಯಾದ ಸಮಯವನ್ನು ಬ್ರಾಹ್ಮಣರಿಗೆ ಹೇಳಿ ಅವರಿಂದ ಮಹೂರ್ತವನ್ನು ಕೇಳುವ ಪದ್ಧತಿಯೂ ಇದೆ. ಪ್ರತಿ ದಿನ ಆ ಹೆಣ್ಣಿಗೆ ಸಮುದಾಯದ ಅಕ್ಕಪಕ್ಕದ ಮುತ್ತೈದೆಯರನ್ನು ಕರೆಯಿಸಿ ಆರತಿ ಮಾಡಿಸಲಾಗುತ್ತದಲ್ಲದೇ, ಪ್ರತಿ ದಿನ ಅವಳಿಗೆ ಹೋಳಿಗೆ, ಉಂಡಿ, ಜಿಲೇಬಿ, ಅನ್ನ, ಹುಗ್ಗಿ ಮುಂತಾದ ಸಪ್ಪನೆ ಆಹಾರ ತಂದು ಕೊಡುವರು. ಉಳ್ಳಾಗಡ್ಡಿ, ಬೆಳ್ಳುಳ್ಳಿ, ಕಾರವಂತೂ ನಿಷಿದ್ಧ. ಕಪ್ಪು ಊಟ, ಅಂದರೆ ಮಾಂಸದ ಊಟವನ್ನು ಕೊಡಲೇಬಾರದು ಎಂಬ ನಿಯಮ ಈ ಸಮುದಾಯದಲ್ಲಿ ಇದೆ. ಐದನೇಯ ದಿನಕ್ಕೆ ಮುತ್ತೈದೆಯರನ್ನು ಕರೆಯಿಸಿ ಅರಿಷಿಣ-ಎಣ್ಣೆಹಚ್ಚಿ ತಲೆ ಸ್ನಾನ ಮಾಡಿಸುತ್ತಾರೆ. ನಂತರ ಆಕೆಗೆ ಆರತಿ ಮಾಡಿ ಸೋಬಾನ ಪದಗಳನ್ನು ಹಾಡುತ್ತಾರೆ. ಬಡತನದಲ್ಲಿರುವವರು ಅಂದೇ ಆಕೆಗೆ ಉಡಿ ತುಂಬಿ ತಮ್ಮ ಶಕ್ತ್ಯಾನುಸಾರ ಊಟ ಅಥವಾ ಉಪಹಾರದ ವ್ಯವಸ್ಥೆಯನ್ನು ಮಾಡುತ್ತಾರೆ. ಸ್ಥಿತಿವಂತರು ಏಳು, ಒಂಬತ್ತು, ಹದಿಮೂರನೆಯ ದಿನಕ್ಕೆ ಉಡಿ ತುಂಬುವ ಕಾರ್ಯಕ್ರಮವನ್ನು ಇಟ್ಟುಕೊಳ್ಳುತ್ತಾರೆ. ಅಲ್ಲಿಯವರೆಗೆ ಅರಿಷಿಣ ಹಚ್ಚಿ ಸ್ನಾನ ಮಾಡಿಸುವರು. ಹಸಿರು ಬಳೆ ತೊಡಿಸುವುದು, ಹೂವು ಮುಡಿಸುವುದು, ಸಾಯಂಕಾಲ ಮುತ್ತೈದೆಯರನ್ನು ಕರೆಯಿಸಿ ಸೋಬಾನದ ಪದಗಳನ್ನು, ದೇವಿಯ ಸ್ತುತಿಯ ಪದಗಳನ್ನು ಹಾಡಿ ನಂತರ ಎಲ್ಲರೂ ಆಕೆಗೆ ಆರತಿ ಮಾಡುವ ಪರಂಪರೆಯನ್ನು ಗೊಂದಲಿಗರಲ್ಲಿ ಕಾಣುತ್ತೇವೆ. ಕೊನೆಯ ದಿನ ಉಡಿ ತುಂಬುವ ಸಂದರ್ಭದಲ್ಲಿ ತಮ್ಮ ಸಂಬಂಧಿಕರು, ಬಂಧು ಬಳಗದವರನ್ನು ಆಮಂತ್ರಿಸ ಲಾಗುತ್ತದೆ. ಸೇರಿರುವ ಮುತ್ತೈದೆಯರು ಸೋಬಾನ ಪದಗಳನ್ನು ಹಾಡಿದ ನಂತರ ಆಕೆಗೆ ಉಡಿ ತುಂಬಿ ಆರತಿ ಮಾಡುವರು. ಕೊನೆಗೆ ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿರುತ್ತಾರೆ. ಆಮಂತ್ರಿತರು ತಮ್ಮ ಯೋಗ್ಯತಾನುಸಾರ ಆ ಹೆಣ್ಣು ಮಗುವಿಗೆ ಕಾಣಿಕೆ-ಉಡುಗೊರೆಯನ್ನು ಕೊಡುವರು.

ಈ ಆಚರಣೆಯ ಸಂದರ್ಭದಲ್ಲಿ ಋತುಮತಿಯಾದ ಹುಡುಗಿಯ ಮದುವೆ ನಿಶ್ಚಯವಾಗಿದ್ದರೆ ಅಥವಾ ಮದುವೆಯಾಗಿದ್ದರೆ ಆ ಹುಡುಗಿಯ ಗಂಡನಿಗೆ ಗುಲಾಬಿ/ಕೆಂಪು ಬಣ್ಣವನ್ನು ಎರಚುವರು. ಅವನು ಹಾಗೇ ಮೂರು ದಿನಗಳವರಗೆ ಇರಬೇಕು. ಬಟ್ಟೆ ಬದಲಾಯಿಸಿದರೆ ಮತ್ತೆ ಬಣ್ಣವನ್ನು ಎರಚುತ್ತಾರೆ. ಆಕೆಯನ್ನು ಉಡಿ ತುಂಬಿಸಿ ಎಬ್ಬಿಸುವ ದಿನದಂದು ಇಬ್ಬರನ್ನು ಅಕ್ಕ ಪಕ್ಕದಲ್ಲಿ ಕುಳ್ಳರಿಸಿ ಅವನಿಗೂ ಬಟ್ಟೆ ಉಡುಗೊರೆಯನ್ನು ಕೊಡುತ್ತಾರೆ.

### ೪.೧.೫. ವಿವಾಹ

ಮಾನವನ ಮೂಲಭೂತ ಸಾಂಸ್ಥಿಕ ವ್ಯವಸ್ಥೆಗಳಲ್ಲಿ ವಿವಾಹವು ಪ್ರಮುಖವಾದುದು. ವಿವಾಹದ ಹೊರತಾದ ಸಮಾಜ ಅಥವಾ ಸಾಮಾಜಿಕ ಜೀವನವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಮಾನವನ ವ್ಯವಸ್ಥಿತ ಜೀವನದಡಿಯಲ್ಲಿ ಬೆಳೆದು ಬಂದ ವಿವಾಹವು ನಾಗರೀಕ-ಅನಾಗರೀಕ, ಪಾಶ್ಚಿಮಾತ್ಯ-ಪೌರ್ವಾತ್ಯ ಸಮಾಜಗಳಲ್ಲೂ ಪ್ರತಿಯೊಂದು ಕಾಲ ಘಟ್ಟದಲ್ಲಿಯೂ ಕಾಣುತ್ತೇವೆ. ಈ ದೃಷ್ಟಿಯಲ್ಲಿ ವಿವಾಹವು ಇಂದು ನಿನ್ನೆಯದಲ್ಲ. ಅದಕ್ಕೆ ದೀರ್ಘವಾದ ಇತಿಹಾಸವಿದೆ. ಮಾನವನ ಸಂಸ್ಕೃತಿ ಎಷ್ಟು ಪ್ರಾಚೀನವೋ, ವಿವಾಹವು ಅಷ್ಟೇ ಪ್ರಾಚೀನವಾದುದು.

ವಿವಾಹವು ಕುಟುಂಬದಂತೆಯೇ ಬಹಳ ಪ್ರಾಮುಖ್ಯತೆಯನ್ನು ಪಡೆದಿರುವ ಸಾಮಾಜಿಕ ಸಂಸ್ಥೆ. ಮಾನವನ ಲೈಂಗಿಕ ಸ್ವಚ್ಛಂದತೆಯನ್ನು ನಿರ್ಬಂಧಿಸಿ, ಆತನ ಲೈಂಗಿಕ ಪೂರೈಕೆಗೆ ಕ್ರಮಬದ್ಧ ವಾದ ವ್ಯವಸ್ಥೆಯೊಂದನ್ನು ನಿರ್ಮಿಸಲು ಬೆಳೆದು ಬಂದ ಸಂಸ್ಥೆಯೇ ವಿವಾಹ. ಅಂದರೆ ಮಾನವನ ಲೈಂಗಿಕ ಜೀವನವನ್ನು ಹಾಗೂ ಲೈಂಗಿಕ ಸಂಬಂಧಗಳನ್ನು ನಿಯಂತ್ರಿಸುವುದಕ್ಕಾಗಿ ಸಮಾಜ ಸ್ಥಾಪಿತ ವಾದ ಸಂಸ್ಥೆಯೇ ವಿವಾಹ.

ಸಾಮಾನ್ಯವಾಗಿ 'ವಿವಾಹವು ಸಂತಾನ ಅಪೇಕ್ಷೆಯುಳ್ಳ ಗಂಡು-ಹೆಣ್ಣುಗಳ ನಡುವೆ ಏರ್ಪಟ್ಟ ನಂಟು' ವಿವಾಹವೆಂಬುದು ಗಂಡು-ಹೆಣ್ಣುಗಳ ನಡುವಿನ ಕರಾರು ಅಥವಾ ಒಪ್ಪಂದ. 'ವಿವಾಹವು ಲೈಂಗಿಕ ಜೀವನ ನಡೆಸಲು ಮಾನವನಿಗೆ ನೀಡಲಾಗಿರುವ ಪರವಾನಗಿ' ಎಂಬ ವಿವರಣೆಗಳನ್ನು ಕಾಣುತ್ತೇವೆ. ಸಮಾಜಶಾಸ್ತ್ರಜ್ಞರು ವಿವಾಹಕ್ಕೆ ಸಂಬಂಧ ಪಟ್ಟಂತೆ ತಮ್ಮದೇ ಆದ ಅರ್ಥ ವಿವರಣೆಯನ್ನು ಕೊಟ್ಟಿದ್ದಾರೆ.

ವೆಸ್ಟರ ಮಾರ್ಕ: "ಪ್ರಜೋತ್ಪಾದನೆಯ ಕ್ರಿಯೆಯಾದ ಶಿಶುವಿನ ಜನನದವರೆಗೆ ಮಾತ್ರ ಮುಂದುವರಿಯದೆ ಅನಂತರವೂ ಸಾಮಾನ್ಯವಾಗಿ ಹೆಚ್ಚು ಕಾಲ ಮುಂದುವರೆಯುವ ಸ್ತ್ರೀ-ಪುರುಷರ ನಡುವಿನ ಸಂಬಂಧವೇ ವಿವಾಹ".[೧೯]

ಮ್ಯಾಲಿನೊವಸ್ಕಿ: "ವಿವಾಹವು ಸ್ತ್ರೀ-ಪುರುಷರ ನಡುವೆ ಲೈಂಗಿಕ ಹಾಗೂ ಮಾನಸಿಕ ಸಂಬಂಧ ವನ್ನು ದೃಢೀಕರಿಸುವ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶಪೂರ್ವಕವಾಗಿ ಏರ್ಪಡಿಸಿಕೊಂಡ ಒಪ್ಪಂದವಾಗಿದೆ".[೨೦]

ರಾಬರ್ಟ್ ಲೌವಿ : "ಅನುಮತಿ ನೀಡಬಹುದಾದ ಸಂಗಾತಿಗಳ ನಡುವಿನ ಶಾಶ್ವತ ಸಂಯೋಗವೇ ವಿವಾಹ".[೨೨] ಈ ಹಿನ್ನೆಲೆಯಲ್ಲಿ ಸಾರ್ವತ್ರಿಕ ಸಂಸ್ಥೆಯಾಗಿರುವ ವಿವಾಹವು ಮಾನವನ ಸಹಜ ಪ್ರವೃತ್ತಿಗಳಲ್ಲಿ ಒಂದಾಗಿರುವ ಲೈಂಗಿಕ ಬೇಡಿಕೆಯನ್ನು ವ್ಯವಸ್ಥಿತವಾಗಿ ಈಡೇರಿಸಿಕೊಳ್ಳಲು ಅನುವು ಮಾಡಿಕೊಟ್ಟ ಸಂಸ್ಥೆಯಾಗಿದೆ ಎನ್ನುವ ವಿಚಾರಗಳನ್ನು ಕಾಣುತ್ತೇವೆ. ಭಾರತೀಯ ದಾರ್ಶನಿಕತೆಯಲ್ಲಿ ವಿವಾಹಕ್ಕೆ ಆಧ್ಯಾತ್ಮಿಕತೆಯ ದೃಷ್ಟಿಕೋನವನ್ನು ಕಾಣುತ್ತೇವೆ. ಲೈಂಗಿಕ ಬೇಡಿಕೆಯನ್ನು ಈಡೇರಿಸಿಕೊಳ್ಳುವುದಷ್ಟೇ ವಿವಾಹದ ಉದ್ದೇಶವಲ್ಲ, ವಿವಾಹ ಧಾರ್ಮಿಕ ಕರ್ತವ್ಯಗಳನ್ನು ನೆರವೇರಿಸಲು, ಅವಶ್ಯಕ ಮಗುವನ್ನು ಪಡೆಯಲು, ಸ್ತ್ರೀ-ಪುರುಷರ ನಡುವೆ ಏರ್ಪಡುವ ಪವಿತ್ರವಾದ ಶಾಶ್ವತ ಸಂಬಂಧವಾಗಿದೆ. ಈ ಹಿನ್ನೆಲೆಯಲ್ಲಿ ಹಿಂದೂ ಧರ್ಮದಲ್ಲಿ ವಿವಾಹವು ಒಂದು ಧಾರ್ಮಿಕ ಸಂಸ್ಕಾರವಾಗಿದೆ.

ಸಂತತಿಯನ್ನು ಹೊಂದಲು, ಕುಟುಂಬಗಳ ಸ್ಥಾಪನೆಗೆ ಸಮಾಜವು ಮನ್ನಣೆಯನ್ನು ಕೊಡುವ ಮಾರ್ಗವೇ ವಿವಾಹ. ಕುಟುಂಬದ ಕಟ್ಟಡಕ್ಕೆ ವಿವಾಹವೇ ಮಹಾದ್ವಾರ. ಕುಟುಂಬದಲ್ಲಿ ಕಂಡುಬರುವ ಎಲ್ಲ ಸಂಬಂಧಗಳನ್ನೂ ನಿರ್ದೇಶಿಸುವುದು ವಿವಾಹವೇ. ಈ ದೃಷ್ಟಿಯಲ್ಲಿ ಪ್ರತಿಯೊಂದು ಸಮುದಾಯದಲ್ಲಿ ತಮ್ಮದೆ ಆದ ರೀತಿಯಲ್ಲಿ ವೈವಾಹಿಕ ಪದ್ಧತಿಗಳನ್ನು ಅನುಸರಿಸುತ್ತಾ ಬಂದಿವೆ.

ಗೊಂದಲಿಗರು ವಿವಾಹದ ಆಚರಣೆಗಳಿಗೆ ಸಂಬಂಧಪಟ್ಟಂತೆ ತಮ್ಮದೇ ಆದ ವಿಶಿಷ್ಟ ಪದ್ಧತಿಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಗೊಂದಲಿಗರಲ್ಲಿ ಕಂಡು ಬರುವ ಗೊಂದಲ ಹಾಕುವರು, ಬುಡಬುಡಿಕೆಯವರು, ಭಾಟರು, ಸಿಂಗದರು, ವಾಸದೇವರು, ಭೂತೇರು, ಗಿಳಿಶಾಸ್ತ್ರದವರು, ಜ್ಯೋತಿಷಿಗಳು ಮುಂತಾದ ಉಪಪಂಗಡದವರು ವೃತ್ತಿಯ ಹಿನ್ನೆಲೆಯಲ್ಲಿ ಬೇರೆ-ಬೇರೆಯಾದರೂ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾ ಪರಸ್ಪರ ಒಡನಾಟವನ್ನು ಹೊಂದಿರುವುದನ್ನೂ ಕಾಣುತ್ತೇವೆ.

**ಸಂಗಾತಿಗಳ ಆಯ್ಕೆ** : ವಿವಾಹ ಬಂಧನಕ್ಕೆ ಒಳಗಾಗುವ ಸಂಗಾತಿಗಳನ್ನು ನಿರ್ಧರಿಸುವಲ್ಲಿ ಬೆಡಗುಗಳು ಅಥವಾ ಗೋತ್ರಗಳು ಪ್ರಮುಖವಾಗಿ ಪಾತ್ರವಹಿಸುತ್ತವೆ. ಸಗೊತ್ರದಲ್ಲಿ ವಿವಾಹ ನೆರವೇರಿಸುವುದು ನಿಷೇಧವಾಗಿದ್ದು, ವಿಭಿನ್ನ ಗೋತ್ರಗಳ/ಬೆಡಗುಗಳ ನಡುವೆ ವಿವಾಹ ಸಂಬಂಧವನ್ನು ಏರ್ಪಡಿಸಬೇಕು. ಹಾಗೆಯೇ ಬೇರೆ ಸಮಾಜದ ಕನ್ಯೆಯನ್ನು ತಂದುಕೊಳ್ಳುವುದು ಅಥವಾ ಪ್ರೇಮ ವಿವಾಹವಾಗುವುದು ಈ ಸಮುದಾಯದಲ್ಲಿ ಮಹಾ ಅಪರಾಧ. ಪಂಚರ ನ್ಯಾಯ ಕಟ್ಟೆಯಲ್ಲಿ ನಿವೇದಿಸಿಕೊಂಡರೂ ಇದಕ್ಕೆ ಅನುಮತಿ ನೀಡುವುದಿಲ್ಲ. ಇಂಥಹ ವಿವಾಹಗಳು ಪಂಚರ ಗಮನಕ್ಕೆ ಬರದೇ ನಡೆದಿದ್ದ ಆದರೆ ಆಗ ಪಂಚರು ಸೇರಿ ದಂಡವನ್ನು ವಿಧಿಸುವದಾಗಲೀ, ಬಹಿಷ್ಕಾರ ಹಾಕುವುದಾಗಲಿ ಮಾಡುವುದು ಕಂಡುಬರುತ್ತದೆ.

ಸಾಮಾನ್ಯವಾಗಿ ಗೊಂದಲಿಗರು ವಿವಾಹ ಸಂಬಂಧಗಳನ್ನು ದೂರದ ಸಂಬಂಧಗಳಲ್ಲಿ ಏರ್ಪಡಿಸಿಕೊಳ್ಳುವುದರ ಬದಲಾಗಿ ಪರಿಚಿತ ಹತ್ತಿರದ ಸಂಬಂಧಗಳಲ್ಲಿಯೇ ಅಂದರೆ ಅಕ್ಕನ ಮಕ್ಕಳು, ಮಾವನ ಮಕ್ಕಳು, ಹೀಗೆ ಸಂಬಂಧಗಳ ಕಟ್ಟುಗಳಲ್ಲಿಯೇ ವಿವಾಹ ಸಂಬಂಧಗಳನ್ನು ಬೆಳೆಸಿಕೊಳ್ಳುವುದು, ಸರ್ವೆಸಾಮಾನ್ಯ. ಅಂದರೆ ತಮ್ಮ ಮನೆಗೆ ಸೂಕ್ತವೆನಿಸುವ ಹಳೆಯ ಸಂಬಂಧಗಳಲ್ಲಿ ಕನ್ಯೆಯನ್ನು

ಅಥವಾ ವರನನ್ನು ಹುಡುಕುತ್ತಾರೆ. ಪ್ರಾರಂಭದಿಂದಲೂ ಸಂಗಾತಿಗಳನ್ನು ನಿರ್ಧರಿಸುವುದು, ಅಂದರೆ ಕನ್ಯೆಗೆ ವರನನ್ನು ಆಯ್ಕೆ ಮಾಡುವುದು, ವರನಿಗೆ–ಕನ್ಯೆಯನ್ನು ಆಯ್ಕೆಮಾಡುವುದು, ಸಂಪೂರ್ಣವಾಗಿ ಆಯಾ ಕುಟುಂಬದ ಯಜಮಾನರ ಜವಾಬ್ದಾರಿ ಹಾಗೂ ಅಂತಿಮ ನಿರ್ಧಾರವಾಗಿತ್ತು. ಆದರೆ ಈಗ ಮದುವೆಯಾಗುವ ಸಂಗಾತಿಗಳ ಅಭಿಪ್ರಾಯ ಒಪ್ಪಿಗೆಯನ್ನು ಪಡೆದುಕೊಳ್ಳಲೇ ಬೇಕಾಗುತ್ತದೆ.

**ವಿವಾಹದ ವಯಸ್ಸು** : ಪ್ರಾರಂಭದಿಂದಲೂ ಗೊಂದಲಿಗರಲ್ಲಿ ತೊಟ್ಟಿಲ ವಿವಾಹ, ಅಂದರೆ ಮಕ್ಕಳು ತೊಟ್ಟಿಲಿನಲ್ಲಿ ಇರುವಾಗಲೇ ವಿವಾಹ ಮಾಡುವ ಪರಂಪರೆ ಇತ್ತು. ನಂತರ ಹೆಣ್ಣು ಋತುಮತಿ ಯಾಗುವುದಕ್ಕಿಂತ ಪೂರ್ವದಲ್ಲಿ ವಿವಾಹ ಮಾಡುವ ಬಾಲ್ಯವಿವಾಹ ಪದ್ಧತಿಯು ಬೆಳೆದು ಬಂತು. ಇತ್ತೀಚೆಗೆ ಸಮಾಜದ ಮುಖಂಡರು ಸೇರಿ ಬದಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಬಾಲ್ಯ ವಿವಾಹವನ್ನು ನಮ್ಮ ಸಮಾಜದಲ್ಲಿ ಮಾಡುವಂತಿಲ್ಲ ಎಂದು ಕರೆ ಕೊಟ್ಟಿದ್ದು, ಬಾಲ್ಯವಿವಾಹವನ್ನು ನಿಷೇಧಿಸಿದ್ದಾರೆ. ಇದಕ್ಕೆ ಪೂರಕವಾಗಿ ಸ್ಥಳೀಯ ಸಮುದಾಯದ ಸಂಘಟನೆಗಳು ಸಹ ಜನರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನ ಮಾಡುತ್ತಿವೆ. ಆದಾಗ್ಯೂ ಬಾಲ್ಯವಿವಾಹಗಳು ಪೂರ್ಣವಾಗಿ ನಿಂತಿವೆ ಎಂದು ಹೇಳಲು ಸಾಧ್ಯವಿಲ್ಲ. ಅದರ ಪ್ರಮಾಣ ಮಾತ್ರ ಕಡಿಮೆಯಾಗಿದೆ ಎಂದು ಸ್ಪಷ್ಟವಾಗಿ ಹೇಳಬಹುದು. ಈ ಹಿನ್ನೆಲೆಯಲ್ಲಿ ಹೆಣ್ಣು ಋತುಮತಿಯಾದ ನಂತರ ಹಾಗೂ ಗಂಡು ಪ್ರಬುದ್ಧಾವಸ್ಥೆಗೆ ಬಂದ ನಂತರವೇ ವಿವಾಹ ಮಾಡುವ ರೂಢಿಯು ಬೆಳೆದು ಬಂದಿದೆ.

**ವಧು–ವರರ ನಿಶ್ಚಯ** : ಗೊಂದಲಿಗರಲ್ಲಿ ಎಲ್ಲ ವೃತ್ತಿಯವರು ಹೆಚ್ಚು ಕಡಿಮೆ ಅಲೆಮಾರಿ ಗಳಾಗಿರುವುದರಿಂದ ಸಾಮಾನ್ಯವಾಗಿ ಪರಸ್ಪರ ಕುಟುಂಬಗಳ ಪರಿಚಯವಿದ್ದೇ ಇರುತ್ತದೆ. ಅಲ್ಲದೇ ಹಿರಿಯರಿಗೂ ಮದುವೆಯ ವಯಸ್ಸಿಗೆ ಬಂದ ಹೆಣ್ಣು ಗಂಡುಗಳ ಬಗ್ಗೆ ಪರಿಚಯವಿರುವುದು ಸಹಜ. ಮನೆಯ ಹಿರಿಯರಿಗೆ ಹೆಣ್ಣು ಒಪ್ಪಿಗೆಯಾದರೆ ನಂತರ ಸಮಾಜದ ಹಿರಿಯರನ್ನು ಕರೆದುಕೊಂಡು ಹೋಗುವರು. ಅಂದರೆ ಗೊಂದಲಿಗರಲ್ಲಿ ಹೆಣ್ಣನ್ನು ನೋಡಲು ಗಂಡಿನವರು ಹೆಣ್ಣಿನ ಮನೆಗೆ ಹೋಗಬೇಕು. ಈ ಸಂದರ್ಭದಲ್ಲಿ ಜಾತಕ, ಹೆಸರು, ನಾಡಿಗಳ ಬಗ್ಗೆ ಜೋಯಿಸರ ಹತ್ತಿರ ಕೇಳುವ ಪದ್ಧತಿಯು ಇದೆ. (ಸಂದರ್ಶನದ ಸಂದರ್ಭದಲ್ಲಿ ಧರ್ಮಾಜಿ ಶಿಂಧೆಯವರನ್ನು ಪ್ರಸ್ತಾಪಿಸಿದಾಗ ಪ್ರಾರಂಭದಲ್ಲಿ ಎನ್ರಿ ಸೆರೆ– ಸಿಂದಿ ಅಂಗಡಿಗಳಲ್ಲಿಯೋ ನಾನು ನಿನ್ನ ಮಗಳನ್ನು ತೆಗೆದುಕೊಳ್ಳುತ್ತೇನೆ, ನನ್ನ ಮಗಳನ್ನು ನಿನ್ನ ಮಗನಿಗೆ ಕೊಡುತ್ತೇನೆ ಅಂತಲೇ ಮಾತು–ಕಥೆಗಳು ಆಗುತ್ತಿದ್ದವಂತೆ ಎಂದು ಹೇಳಿದರು.) ಇವೆಲ್ಲವುಗಳಲ್ಲಿ ಹೋಲಿಕೆ ಬಂದರೆ ಕನ್ಯೆಯನ್ನು ತೆಗೆದುಕೊಳ್ಳುವುದು ನಿರ್ಧಾರವಾಗುತ್ತದೆ.

ಪರಸ್ಪರ ಹೆಣ್ಣು–ಗಂಡಿನ ಮನೆಯವರಿಗೆ ಇಷ್ಟವಾಗಿ ಒಪ್ಪಿಕೊಂಡರೆ, ಸಮಾಜದ ಹಿರಿಯ ಮುಖಂಡರು ಪಂಚರು ಸೇರಿ ಬಳುವಳಿ, ವಸ್ತ್ರಾಭರಣಗಳ ಬಗ್ಗೆ ಚರ್ಚಿಸಿ, ಪರಸ್ಪರ ಇಂತಿಂಥಹ ವಸ್ತುಗಳನ್ನು ಕೊಡುವುದು ಎಂದು ನಿರ್ಧರಿಸುತ್ತಾರೆ.

**ತೆರವು – ವರದಕ್ಷಿಣೆ** : ಪರಂಪರಾಗತವಾಗಿ ಗೊಂದಲಿಗರಲ್ಲಿ ತೆರವು ಕೊಡುವ ಅಥವಾ ಕನ್ಯಾಶುಲ್ಕ ಕೊಡುವ ಪದ್ಧತಿಯು ಬೆಳೆದು ಬಂದಿದೆ. ಅದು ೫೦ ರೂಪಾಯಿಯಿಂದ ೫೦೦

ರೂಪಾಯಿವರೆಗೆ ತೆರವು ಕೊಡುವದಿತ್ತು. ಆದರೆ "ದಿನಾಂಕ ೧೬.೦೫.೧೯೪೫ರಲ್ಲಿ ನವಲಗುಂದದಲ್ಲಿ ಗೊಂದಳಿ ಸಮಾಜದ ೩ನೇ ಮೀಟಂಗ್‌ನಲ್ಲಿ ತೆಗೆದುಕೊಂಡ ನಿರ್ಣಯಗಳಲ್ಲಿ ಹೆಣ್ಣಿಗೆ ತೆರವು ಕೊಡುವ ವಿಷಯಕ್ಕೆ ಸಂಬಂಧಿಸಿದ್ದಾಗಿದ್ದು, ಹೆಣ್ಣಿಗೆ ೫೦ ರೂ. ತೆರವು ಮತ್ತು ೧೦ ರೂ.ಗಳನ್ನು ದೈವಕ್ಕೆ ಕೊಡಬೇಕೆಂಬ ಠರಾವು ಮಾಡಿದರು".[೧೩] ಇತ್ತಿತ್ತಲಾಗಿ ಈ ತೆರವು ಕೊಡುವ ಪದ್ಧತಿಯು ಕಡಿಮೆಯಾಗಿದೆ ಎಂದು ಹೇಳಬಹುದು.

ಸಾಮಾನ್ಯವಾಗಿ ನಾಗರಿಕ ಸಮಾಜಗಳಲ್ಲಿ ವ್ಯಾಪಕವಾಗಿ ಹರಡಿರುವ ವರದಕ್ಷಿಣೆ ಪದ್ಧತಿಗೆ ಸಂಬಂಧಪಟ್ಟಂತೆ ಗೊಂದಲಿಗರಲ್ಲಿ ಸಂಪೂರ್ಣವಾಗಿ ವಿರೋಧವನ್ನು ಕಾಣುತ್ತೇವೆ. ಅದು ಎಷ್ಟು ಕಠಿಣವಾಗಿ ಅಂದರೆ ಯಾವುದೇ ಕುಟುಂಬದವರು ವಿವಾಹದ ಸಂದರ್ಭದಲ್ಲಿ ವರದಕ್ಷಿಣೆ ಕೇಳಿರುವುದಾಗಲೀ ಅಥವಾ ತೆಗೆದುಕೊಂಡಿರುವುದಾಗಲೀ ಕಂಡುಬಂದರೆ ಆ ಕುಟುಂಬವನ್ನು ಬಹಿಷ್ಕಾರ ಮಾಡುವ ಪರಂಪರೆಯನ್ನು ಇವರು ಬೆಳೆಸಿಕೊಂಡಿದ್ದಾರೆ. ಆದರೆ ಇತ್ತಿತ್ತಲಾಗಿ ನಾಗರಿಕ ಸಮಾಜದ ಪ್ರಭಾವದಿಂದಾಗಿ ಇವರಲ್ಲಿಯೂ ಕೆಲವು ಕಡೆಯಲ್ಲಿ ವರದಕ್ಷಿಣೆ ವ್ಯವಹಾರಗಳು ನಡೆಯುತ್ತಿರುವುದನ್ನು ಕಾಣಬಹುದಾಗಿದೆ. ಆದರೆ ಕನ್ಯೆಯ ತಾಯಿಗೆ ವರನ ಕಡೆಯವರು ಹಸಿರು ಸೀರೆಯನ್ನು ತರಬೇಕು. ಹೆಣ್ಣಿನ ಮನೆಯವರು ವರನಿಗೆ ಒಂದು ಕುಟುಂಬಕ್ಕಾಗುವಷ್ಟು ಪಾತ್ರೆ-ಪಗಡಿಗಳನ್ನು ಕೊಡಬೇಕೆಂದು ಪರಸ್ಪರರಲ್ಲಿ ಮಾಡಿಕೊಳ್ಳುವ ಒಡಂಬಡಿಕೆಯಾಗಿದೆ.

**ವೀಳ್ಯಶಾಸ್ತ್ರ** : ಹೆಣ್ಣು ಗಂಡಿನ ಮನೆಯವರು ಪರಸ್ಪರ ಕೂಡಿ ಬ್ರಾಹ್ಮಣರ ಹತ್ತಿರ ಹೋಗಿ ವೀಳ್ಯ ಕೊಡುವ ದಿನವನ್ನು ಹಾಗೂ ಮದುವೆಯ ದಿನದ ಮಹೂರ್ತವನ್ನು ನಿರ್ಧರಿಸಿಕೊಂಡು ಬರುತ್ತಾರೆ. ನಂತರ ಒಂದು ನಿರ್ದಿಷ್ಟ ದಿನದಂದು ಊರಿನಲ್ಲಿಯ ನಾಯಕ, ಪಾಯಕ, ಗೋತಾರನ್ನೊಳಗೊಂಡ ಪಂಚರು ಹಿರಿಯರ ಸಮ್ಮುಖದಲ್ಲಿ ತಾವು ನಿರ್ದಿಷ್ಟ ಪಡಿಸಿದ ವಿವಾಹ ದಿನಾಂಕಗಳ ಕುರಿತು ಕುಟುಂಬದವರು ಪ್ರಸ್ತಾಪಿಸುತ್ತಾರೆ. ಈ ಕುಟುಂಬಗಳು ಪಂಚಾಯತಿ ನ್ಯಾಯವನ್ನು ತಿರಸ್ಕರಿಸಿದ್ದಿದೇಯೇ? ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿವೆಯೇ? ವರದಕ್ಷಿಣೆ ಕೇಳಿವೆಯೋ? ಇತ್ಯಾದಿ ವಿವರಗಳ ಬಗ್ಗೆ ಅವಲೋಕಿಸಿ ಬಳಿಕ ವಿವಾಹದ ದಿನಾಂಕಕ್ಕೆ ಸಮ್ಮತಿಯನ್ನು ಕೊಡುತ್ತಾರೆ. ನಂತರ ಎರಡೂ ಮನೆಯ ಹಿರಿಯರೂ ಕೂಡಿ ಪರಸ್ಪರ ವೀಳ್ಯ ಕೊಡುವ ಕಾರ್ಯವನ್ನು ನೆರವೇರಿಸುತ್ತಾರಲ್ಲದೇ, ಅಲ್ಲಿ ಸೇರಿರುವರೆಲ್ಲರಿಗೂ ಪರಸ್ಪರ ವೀಳ್ಯ ಸಕ್ಕರೆಯನ್ನು ವಿನಿಮಯ ಮಾಡಿ ಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಅವರ ಶಕ್ತ್ಯಾನುಸಾರ ವಿವಾಹವು ಇಂತಿಷ್ಟು ದಿನ ನಡೆಯಬೇಕೆಂಬುದನ್ನು ಸಹ ನಿರ್ಧರಿಸುತ್ತಾರೆ.

**ವಿವಾಹ ಕ್ರಮ** : ಸಾಮಾನ್ಯವಾಗಿ ವಿವಾಹವು ಹೆಣ್ಣಿನ ಮನೆಯಲ್ಲಿ ನಡೆಯುವದು ಸಂಪ್ರದಾಯ. ಪ್ರಾರಂಭದಲ್ಲಿ ಗೊಂದಲಿಗರಲ್ಲಿ ಐದು ದಿನಗಳವರೆಗೆ ವಿವಾಹ ಸಮಾರಂಭ ನಡೆಯುತ್ತಿತ್ತು. ಇತ್ತಿತ್ತಲಾಗಿ ಅದು ಮೂರು ದಿನಕ್ಕೆ, ಎರಡು ದಿನಕ್ಕೆ, ಈಗಂತೂ ಒಂದೇ ದಿನದಲ್ಲಿ ವಿವಾಹ ಮಾಡುವ ಪದ್ಧತಿಯು ಬೆಳೆದು ಬಂದಿದೆ. ಗೊಂದಲಿಗರು ಮದುವೆ ದಿನಕ್ಕಿಂತ ಪೂರ್ವದಲ್ಲಿ ಒಂದು ಶುಭ

ದಿನದಂದು ದೇವರ ಕಾರ್ಯವನ್ನು ಮಾಡುತ್ತಾರೆ. ಇವರು ಹೊರಗಿನ ದೇವರು ಮತ್ತು ಒಳಗಿನ ದೇವರು ಎಂದು ಎರಡು ರೀತಿಯಲ್ಲಿ ದೇವತಾ ಕಾರ್ಯಗಳನ್ನು ಮಾಡುತ್ತಾರೆ. ಇದನ್ನು ಕೆಲವರು ಕರಿಲಕ್ಷ್ಮೀ ಮತ್ತು ಕೆಂಪು ಲಕ್ಷ್ಮೀ ಪೂಜೆ ಎಂದು ಕರೆಯುತ್ತಾರೆ.

**ಹೊರಗಿನ ದೇವತಾ ಕಾರ್ಯ** : ಹೊರಗಿನ ದೇವರ ಕಾರ್ಯ ಮಾಡುವ ದಿನ ಅವರು ದೇವತೆಗೆ ಬಲಿಕೊಡುವುದುಂಟು. ಊರಿನಿಂದ ಪ್ರತ್ಯೇಕವಾಗಿ ೫-೬ ಕೀ.ಮಿ ದೂರದಲ್ಲಿ ಕಂಡುಬರುವ ಹೊನ್ನಿಗಿಡ ಅಥವಾ ಅವರೇಗಿಡ ಇಲ್ಲವೇ ಆ ಗಿಡದ ಟೊಂಗೆಯನ್ನು ನೆಟ್ಟು, ಅದರ ಸುತ್ತಲೂ ಸ್ವಚ್ಛಗೊಳಿಸಿ ಮಣ್ಣಿನಿಂದ ಸ್ತ್ರೀದೇವತೆಯನ್ನು ನಿರ್ಮಿಸುತ್ತಾರೆ. ಕೆಲವರಲ್ಲಿ ಪಂಚ ಪಾಂಡವರ ಮೂರ್ತಿ ಗಳನ್ನು ತಯಾರಿಸುವ ಕ್ರಮವಿದೆ. ಮೂರ್ತಿ ಯನ್ನು ಗಿಡದ ಪೂರ್ವಕ್ಕೆ ಕುಳ್ಳಿರಿಸಿ, ಆ ಮೂರ್ತಿಗೆ ಅರಿಷಿಣ-ಕುಂಕುಮಗಳಿಂದ ಪೂಜಿಸಿ ಅದರ ಮುಂದೆ ಹಣತೆಯಲ್ಲಿ ದೀಪವನ್ನು ಹಚ್ಚುತ್ತಾರೆ. ಕೆಲವರಲ್ಲಿ ಈ ದೇವರ ಎದುರಲ್ಲಿ ವಧು ಅಥವಾ ವರನನ್ನು ಮಲಗಿಸಿ ಅವರ ಬೆನ್ನಿನ ಮೇಲೆ ಲಿಂಬೆಹಣ್ಣು ಕತ್ತರಿಸಿ ಆಚೀಚೆ ಎಸೆಯುತ್ತಾರೆ. ಈ ಪೂಜೆಯ ಕೆಲಸ ಮುಗಿದ ಮೇಲೆ ಮೇಕೆ ಅಥವಾ ಕುರಿಯನ್ನು ಆ ದೇವಿಯ ಹೆಸರಿನಲ್ಲಿ ಬಲಿಕೊಡುತ್ತಾರೆ. ನಂತರ ಬಲಿಕೊಟ್ಟ ಪ್ರಾಣಿಯ ಕಾಲೊಂದನ್ನು ಅದರ ಬಾಯಲ್ಲಿ ಇಟ್ಟು ಅದರ ರಕ್ತವನ್ನು ದೇವಿಗೆ ಹಾಗೂ ಆ ಗಿಡಕ್ಕೆ ಸಿಂಪಡಿ ಸುತ್ತಾರೆ. ಅದರಲ್ಲಿ ಎಲ್ಲರೂ ಬಲಿಕೊಟ್ಟ ಪ್ರಾಣಿಯ ಮಾಂಸದ ಅಡುಗೆಯನ್ನು ತಯಾರಿಸಿ, ದೇವಿಗೆ ನೈವೇದ್ಯ ಮಾಡಿ ನಂತರ ಅವರೆಲ್ಲಾ ಸಾಮೂಹಿಕವಾಗಿ ಅಲ್ಲಿಯೇ ಸೇವನೆ ಮಾಡುತ್ತಾರೆ. ಇದೇ ಸಂದರ್ಭದಲ್ಲಿ ಬಲಿಕೊಟ್ಟ ಪ್ರಾಣಿಯ ರುಂಡವನ್ನು ಪೂರ್ವದಿಕ್ಕಿಗೆ ಉರುಳಿಸಬೇಕು ಅದನ್ನು ಬೀಗರು ಮಾತ್ರ ತೆಗೆದುಕೊಳ್ಳಬೇಕೆಂಬ ನಿಯಮವಿದ್ದು, ಅವರು ಅದನ್ನು ಯಾರಿಗೂ ಕಾಣದೇ ಬೇರೆಡೆಗೆ ಒಯ್ದು, ಅಡುಗೆ ಮಾಡಿ ಊಟ ಮಾಡಿದ ನಂತರ ಮನೆಗೆ ಬರುವಾಗ ಸ್ನಾನ ಮಾಡಿ ಬರಬೇಕೆಂಬ ನಿಯಮವು ಇವರಲ್ಲಿದೆ. ಇನ್ನುಳಿದವರು ಊಟ ಮಾಡಿ ಮನೆಗೆ ಮರಳುವಾಗ ಮಾಡಿರುವ ಅಡುಗೆಯ ಮಡಿಕೆಯನ್ನು ಅಲ್ಲಿಯೇ ಒಡೆದು ಹಾಕಿ ತಿರುಗಿ ನೋಡದೇ ಗಿಡದ ಟೊಂಗೆಯನ್ನು ಮಾತ್ರ ಕೈಗೆತ್ತಿಕೊಂಡು ಬರುತ್ತಾರೆ. ಕೆಲವು ಕಡೆ ಊಟವಾದ ನಂತರ ಅಲ್ಲಿ ಹಚ್ಚಿರುವ ದೀಪ ಮತ್ತು ಮೂರ್ತಿಯನ್ನು ಒಡೆದು ಮನೆಗೆ ಬರುತ್ತಾರೆ. ಈ ಹೊರಗಿನ ದೇವತಾ ಕಾರ್ಯದಲ್ಲಿ ಮದುವೆಯಾಗಿರುವ ಗಂಡಸರು ಮಾತ್ರ ಭಾಗವಹಿಸಬೇಕೆಂಬ ನಿಯಮವನ್ನು ಕಾಣುತ್ತೇವೆ. ಮನೆಗೆ ಬಂದಾಗ ಈ ಕಾರ್ಯದಲ್ಲಿ ಭಾಗವಹಿಸಿದ ಎಲ್ಲರಿಗೂ ನೀರನ್ನು ಸಿಂಪಡಿಸಿ ಒಳಗೆ ಕರೆದು ಕೊಳ್ಳುತ್ತಾರೆ.

**ಒಳಗಿನ ದೇವತಾ ಕಾರ್ಯ** : ಹೊರಗಿನ ದೇವರ ಕಾರ್ಯ ಮುಗಿದ ಮಾರನೇ ದಿನ ಒಳಗಿನ ದೇವತಾ ಕಾರ್ಯವನ್ನು ನೆರವೇರಿಸುತ್ತಾರೆ. ತಂದ ಗಿಡದ ಟೊಂಗೆಗೆ ಪೂಜೆ ಮಾಡಿ ಪ್ರಾರ್ಥನೆ ಸಲ್ಲಿಸಿದ ನಂತರ ಮನೆಯ ಮುಂದೆ ನಿಲ್ಲಿಸಿರುವ ಕಂಬ(ಹಾಲಗಂಬ)ಕ್ಕೆ ಬಿಗಿಯಾಗಿ ಕಟ್ಟುತ್ತಾರೆ. ಈ ಗಂಟನ್ನು ಮದುವೆಯ ಎಲ್ಲಾ ಕಾರ್ಯಗಳು ಮುಗಿದ ನಂತರವೇ ಬಿಚ್ಚುತ್ತಾರೆ. ಇದೇ

ಸಂದರ್ಭದಲ್ಲಿ ಊರಿನ ಮತ್ತು ಮನೆಯ ದೇವತೆಗಳನ್ನು ಪೂಜಿಸಿ, ಹಣ್ಣು-ಕಾಯಿ ಸಿಹಿ ಪದಾರ್ಥ ಗಳನ್ನು ನೈವೇದ್ಯ ಮಾಡುವರು. ಕೆಲವು ಗೊಂದಲಿರ ಕುಟುಂಬದಲ್ಲಿ ಮಧ್ಯರಾತ್ರಿಯ ಸಮಯದಲ್ಲಿ ವಧು-ವರರ ಮನೆಯಲ್ಲಿ ಲಕ್ಷ್ಮೀ ಪೂಜೆ ಮಾಡುತ್ತಾರಲ್ಲದೇ ಹೋಳಿಗೆ ಸಿಹಿ ಪದಾರ್ಥವನ್ನು ನೈವೇದ್ಯ ಮಾಡುತ್ತಾರೆ. ಈ ಕಾರ್ಯಕ್ರಮದಲ್ಲಿ ಕೇವಲ ಬಂಧು ಬಳಗದವರು ಮಾತ್ರ ಪಾಲ್ಗೊಳ್ಳುತ್ತಾರೆ.

ಈ ಆಚರಣೆಗಳ ಮೂಲಕ ಸುರಗಿ ನೀರನ್ನು ಹಾಕಿ ದೈವದ ಸಾಕ್ಷಿಯಾಗಿ ತಾಳಿಕಟ್ಟುವ ಶಾಸ್ತ್ರವನ್ನು ನೆರವೇರಿಸುತ್ತಾರೆ. ಇದೇ ಸಂದರ್ಭದಲ್ಲಿ ಮದುಮಕ್ಕಳಿಗೆ ವಿವಿಧ ವಿನೋದಮಯವಾದ ಆಟಗಳನ್ನು ಪರಸ್ಪರರ ಮಧ್ಯದಲ್ಲಿ ಆಡಿಸುತ್ತಾರೆ.

ಪ್ರಾರಂಭದಲ್ಲಿ ಗೊಂದಲಿಗರಲ್ಲಿ ಐದು ದಿನಗಳವರೆಗೆ ಮದುವೆ ಸಮಾರಂಭಗಳು ನಡೆಯುತ್ತಿದ್ದವು. ಸಂದರ್ಶನದಲ್ಲಿ ಇದಕ್ಕೆ ಸಂಬಂಧ ಪಟ್ಟಂತೆ ದಿನಕ್ಕೊಂದು, ಸುರಗಿ ನೀರು ಹಾಕುವದು, ಐದನೆಯ ದಿನಕ್ಕೆ ತಾಳಿಕಟ್ಟುವ ಶಾಸ್ತ್ರವನ್ನು ಮಾಡುತ್ತಿದ್ದರು. ಎನ್ನುವ ಮಾಹಿತಿಯನ್ನು ಕೊಟ್ಟಿದ್ದಾರೆ. ಡಾ. ಗಂಗಾಧರ ದೈವಜ್ಞ ರವರು 'ಗೊಂದಲಿಗರು' ಎನ್ನುವ ಗ್ರಂಥದಲ್ಲಿ – ಪ್ರಾರಂಭದಲ್ಲಿ ನಡೆಯುತ್ತಿದ್ದ ಐದು ದಿನಗಳ ಮದುವೆಯ ಕಾರ್ಯಗಳ ವಿವರಣೆಯನ್ನು ಈ ರೀತಿ ಕೊಟ್ಟಿದ್ದಾರೆ.

**ಮೊದಲನೆ ದಿನದ ಕಾರ್ಯ :** ಗಂಡಿನವರು ಹೆಣ್ಣಿನ ಮನೆಗೆ ಬಂದಾಗ ಅವರನ್ನು ಎದುರುಗೊಂಡು ಕರೆತಂದು ಪಂಚರ ಸಮ್ಮುಖದಲ್ಲಿ, ವೀಳ್ಯಶಾಸ್ತ್ರ ಮಾಡಿ ಗಂಡು ಹೆಣ್ಣಿಗೆ ಅರಿಷಿಣ ಹಚ್ಚಿ ನೀರು ಹಾಕಿ, ಕೆಂಪುವಸ್ತ್ರದಲ್ಲಿ ತೆಂಗಿನಕಾಯಿ ಇಟ್ಟು ಅದನ್ನು ವರನ ಬಲಗೈಗೆ ಕಟ್ಟುತ್ತಾರೆ. ಇದಕ್ಕೆ 'ಕತಾರಿ ಕಾಯಿ' ಎನ್ನುವರು. ಗಂಡಿನ ಮೇಲೆ ಹೊಚ್ಚಿದ ಶಲ್ಯದ ಒಂದು ತುದಿಗೆ ಲಿಂಬೆಹಣ್ಣನ್ನು, ಹೆಣ್ಣಿನ ಸೆರಗಿನ ತುದಿಯಲ್ಲಿ ಅಡಿಕೆ ಬೆಟ್ಟವನ್ನು ಕಟ್ಟುವರು. ಹೆಣ್ಣಿಗೆ ಈ ಸಂದರ್ಭದಲ್ಲಿ ಅರಿಷಿಣ ವಸ್ತ್ರ ಹೊದಿಸಿರುತ್ತಾರೆ. ಗಂಡು ಮತ್ತು ಹೆಣ್ಣಿನ ಬಲಗೈಗೆ ಕೊಂಬಿರುವ ಅರಿಷಿಣದ ಬೇರು ಮತ್ತು ವೀಳ್ಯದೆಲೆ ಯನ್ನು ದಾರದ ಸಹಾಯದಿಂದ ಕಟ್ಟುವರು.

**ಎರಡನೆಯ ದಿನ :** ಈ ದಿನ ಮಧ್ಯಾನ್ಹದ ಹೊತ್ತಿಗೆ ವಧು-ವರರಿಗೆ ಸೊಲಿಗೆ ನೀರಿನ ಸ್ನಾನ ಮಾಡಿಸುವ ಕಾರ್ಯಕ್ರಮವಿರುತ್ತದೆ. ಮನೆಯ ಮುಂದಿರುವ ಸ್ಥಳದಲ್ಲಿ ಪೂರ್ವಕ್ಕೆ ಮುಖ ಮಾಡಿ ಸುತ್ತಲೂ ಚೌಕಾಕಾರದಲ್ಲಿ ನಾಲ್ಕು ತಂಬಿಗೆಗಳನ್ನು ನೆಲದ ಮೇಲಿಟ್ಟು, ಅದನ್ನು ಹಿಡಿದುಕೊಳ್ಳಲು ಐದು ಜನ ಮುತ್ತೈದೆಯರನ್ನು ನೇಮಿಸಿ ಅದಕ್ಕೆ ಐದು ಸುತ್ತದಾರವನ್ನು ಸುತ್ತುತ್ತಾರೆ. ಇದಕ್ಕೆ ಸುರಗಿ/ಸುರಗೆ ಸುತ್ತುವದು ಎಂದು ಕರೆಯುತ್ತಾರೆ. ಮುತ್ತೈದೆಯರು ಅರತಿಯ ಜೊತೆಗೆ ಅರಿಷಿಣ ಮತ್ತು ಎಣ್ಣೆಯನ್ನು ತೆಗೆದುಕೊಂಡು ಐದು ಸಲ ಆ ಸುರಗೆಯನ್ನು ಸುತ್ತಿ ಸುರಗೆಯ ಒಳಗೆ ಪ್ರವೇಶಿಸು ತ್ತಾರೆ. ಇವರನ್ನು ಹಿಂಬಾಲಿಸಿ ವಧು-ವರರು ಮತ್ತು ಅವರ ತಂದೆ-ತಾಯಿಯರು ಬರುತ್ತಾರೆ. ಈ ಸುರಗಿಯ ಒಳಗೆ ವಧು-ವರರು ಮತ್ತು ಅವರ ಹಿಂದೆ ತಂದೆ-ತಾಯಿ ಪೂರ್ವಕ್ಕೆ ಮುಖ ಮಾಡಿ ಕುಕ್ಕರಗಾಲಿನಿಂದ ಕುಳಿತುಕೊಳ್ಳಲು ಕಟ್ಟಿಗೆಯ ಹಲಗೆ ಅಥವಾ ಮಣೆಗಳನ್ನು ಹಾಕಿರುತ್ತಾರೆ. ಮೊದಲ ಸಾಲಿನಲ್ಲಿ ವಧುವರರು ಹಿಂದಿನ ಸಾಲಿನಲ್ಲಿ ಅವರವರ ತಂದೆ-ತಾಯಿಯರು ಕುಳಿತುಕೊಂಡಿರುತ್ತಾರೆ.

ಮುತ್ತೈದೆಯರು ವಧು-ವರರಿಗೆ ಅವರ ತಂದೆ-ತಾಯಿಯರಿಗೆ ಅರಿಷಿಣ ಎಣ್ಣೆ ಹಚ್ಚಿ ನೀರು ಹಾಕುತ್ತಾರೆ. ಈ ಸಂದರ್ಭದಲ್ಲಿ ಅಲ್ಲಿರುವವರಿಗೂ ಅರಿಷಿಣ ಹಚ್ಚುವ ಸಂಪ್ರದಾಯವಿದೆ. ಈ ಸೂಲಿಗೆ ಸ್ನಾನದ ನಂತರ ಹೊಸ ಬಟ್ಟೆಗಳನ್ನು ಹಾಕಿಕೊಂಡ ನಂತರ ಮುತ್ತೈದೆಯರು ಆರತಿ ಮಾಡುವರು.

**ಮೂರನೆಯ ದಿನ** : ಸಾಯಂಕಾಲದ ಸಮಯಕ್ಕೆ ತಾಳಿಕಟ್ಟುವ ಶಾಸ್ತ್ರವನ್ನು ನೆರವೇರಿಸುತ್ತಾರೆ **ನಾಲ್ಕನೆಯ ದಿನ** – ಮದುಮಕ್ಕಳ ಆಟ ಈ ಆಟಗಳಲ್ಲಿ ಬೇವಿನ ಸೊಪ್ಪಿನಿಂದ ತಯಾರಿಸಿದ ಚೆಂಡಿನ ಆಟ, ಅರಿಷಿಣ ಕೊಂಬಿನ ಅಟ, ಅಡಿಕೆ-ಉಂಗುರ, ಕೂಸಾಡುವ ಮುಂತಾದ ಆಟಗಳನ್ನು ಆಡಿಸುತ್ತಾರೆ. ಅಂದು ರಾತ್ರಿ ಗೊಂದಲದ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. **ಐದನೆಯ ದಿನ** ಗೊಂದಲದ ಕಾರ್ಯ ಮುಗಿದ ತಕ್ಷಣ ದೇವಿಯ ಹೆಸರಿನಲ್ಲಿ ಬಲಿಕೊಟ್ಟು ಅಂದು ಬೀಗರಿಗೆ ಮತ್ತು ಕುಲಬಾಂಧವರಿಗೆ ಮಾಂಸದೂಟವನ್ನು ಬಡಿಸುತ್ತಾರೆ.

ಪರಂಪರಾಗತವಾಗಿ ಈ ರೀತಿ ಐದು ದಿನ ವಿವಾಹ ಸಮಾರಂಭವನ್ನು ನೆರವೇರಿಸಲಾಗುತ್ತಿತ್ತು. ಆದರೆ ಬದಲಾದ ಸನ್ನಿವೇಶದಲ್ಲಿ ಮಾಡುವ ವಿವಾಹ ಸಮಾರಂಭವನ್ನು ಒಂದೇ ದಿನದಲ್ಲಿ ಮುಗಿಸುವ ಪರಿಪಾಠ ಬೆಳೆದು ಬಂದಿದೆ. ವ್ಯವಹಾರಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರಿಂದ ಐದು ದಿನಗಳವರೆಗೆ ಮಾಡುವ ವಿವಾಹ ಕಾರ್ಯಕ್ರಮದಿಂದ ವೇಳೆಯ ವ್ಯಯವಾಗುತ್ತದೆ. ಎಂಬ ನಂಬಿಕೆಯಿಂದಲೂ ಅತ್ಯಂತ ವೆಚ್ಚದಾಯಕತೆಯ ದೃಷ್ಟಿಯಿಂದಲೂ ವಿವಾಹ ಸಮಾರಂಭವನ್ನು ಒಂದೇ ದಿನದಲ್ಲಿ ಮುಗಿಸುತ್ತಿರುವುದನ್ನು ಕಾಣಬಹುದು.

**ಒಂದೇ ದಿನದಲ್ಲಿ ಮಾಡುತ್ತಿರುವ ವಿವಾಹದ ಆಚರಣಾ ಕ್ರಮಗಳು** : ವಿವಾಹ ಮಾಡುವ ದಿನವನ್ನು ಮೊದಲೇ ನಿರ್ಧರಿಸಲಾಗುತ್ತಿದ್ದು ವಿವಾಹದ ಹಿಂದಿನ ದಿನ ಸೋದರ ಮಾವನು ಹೊಸ ಬಟ್ಟೆಗಳನ್ನು ಹಾಕಿಕೊಂಡು ಹಾಲುಗಂಬವನ್ನು ತಂದು, ಮನೆಯ ಚಪ್ಪರದ ಬಲಭಾಗಕ್ಕೆ ನೆಟ್ಟು ನಂತರ ಮದುವೆ ಚಪ್ಪರ ಹಾಕುತ್ತಾರೆ. ಮದುವೆಯ ದಿವಸ ಮುಂಜಾನೆಯೇ ಐದು ಜನ ಮುತ್ತೈದೆಯರು ಆರತಿಯನ್ನು ತೆಗೆದುಕೊಂಡು ವಾದ್ಯದೊಂದಿಗೆ ಕುಂಬಾರರ ಮನೆಗೆ ಹೋಗಿ ಅವರಿಗೆ ಉಲುಪಿ ಕೊಟ್ಟು ಐದು ಐರಾಣಿಗಳನ್ನು ತಲೆಯ ಮೇಲೆ ಹೊತ್ತುಕೊಂಡು ಮದುವೆ ಮನೆಗೆ ತೆಗೆದುಕೊಂಡು ಬರುವರು. ತೆಗೆದುಕೊಂಡು ಬಂದ ಐರಾಣಿಗಳನ್ನು ದೇವರ ಜಗುಲಿಯ ಹತ್ತಿರ ಇಟ್ಟು ಪೂಜಿಸುತ್ತಾರೆ. ನಂತರ ಮಧುಮಕ್ಕಳಿಗೆ ಮತ್ತು ಅವರ ತಂದೆ ತಾಯಿಯರಿಗೆ ನೇಯ್ಯೆರಿಸುವ ಅಂದರೆ ಅರಿಷಿಣ ಎಣ್ಣೆ ಹಚ್ಚಿ ಸುತ್ತಿದ ಸುರಿಗೆಯಲ್ಲಿ ಸುರಿಗೆ ನೀರು ಹಾಕುವ ಕಾರ್ಯಕ್ರಮ ನೆರೆವೇರಿ ಸುತ್ತಾರೆ. ಈ ಸಂದರ್ಭದಲ್ಲಿ ಬಂಧು-ಬಳಗದವರೆಲ್ಲರೂ ಸೇರಿರುತ್ತಾರೆ, ಇಲ್ಲಿ ಸೇರಿದವರು ಪರಸ್ಪರ ಅರಿಷಿಣ ಹಚ್ಚುವುದನ್ನು ಕಾಣಬಹುದಾಗಿದೆ. ಸೂಲಿಗೆ ಸ್ನಾನವಾದ ನಂತರ ಹೊಸ ಬಟ್ಟೆಗಳನ್ನು ಹಾಕಿಕೊಂಡು ವಧುವರರನ್ನು ಮದುವೆ ಮಂಟಪಕ್ಕೆ ಕರೆತರುತ್ತಾರೆ. ಆಗ ವರನಿಗೆ ಕಟಾರಿಕಾಯಿ ಮತ್ತು ಕಂಕಣ ಕಟ್ಟಿ ಆರತಿ ಮಾಡುವರು ನಂತರ ವಧು-ವರರನ್ನು ಹಂದರದಲ್ಲಿ ಅಕ್ಕ ಪಕ್ಕದಲ್ಲಿ ಕುಳ್ಳಿರಿಸಿ ಗೊಂದಲಿಗರ ಹಿರಿಯ ಅಥವಾ ಪುರೋಹಿತರ ಮಂತ್ರೋಚ್ಚರಣೆಯ ಮೂಲಕ ತಾಳಿಕಟ್ಟುವ

ಶಾಸ್ತ್ರಕ್ಕೆ ಚಾಲನೆ ನೀಡುವರು. ಮಂತ್ರ ಮುಗಿದ ಮೇಲೆ ಅಲ್ಲಿ ನೆರೆದವರೆಲ್ಲರೂ ಅಕ್ಷತೆಯನ್ನು ಹಾಕುವರು. ನಂತರ ವರನು ವಧುವಿನ ಕೊರಳಿಗೆ ತಾಳಿ ಕಟ್ಟುವನು. ಬಂದಂತಹ ಮುತ್ತೈದೆಯರು ನವ ವಿವಾಹಿತರಿಗೆ ಆರತಿಮಾಡಿ ಪರಸ್ಪರ ಹೆಸರನ್ನು ಕೇಳುವರು.

ತಾಳಿಕಟ್ಟುವ ಶಾಸ್ತ್ರ ಮುಗಿದ ನಂತರ ನವದಂಪತಿಗಳ ನಡುವೆ ಚಂಡಿನಾಟ, ಅರಿವೆಯಾಟ ಅಡಕಿಯಾಟ, ಅಕ್ಕಿಯಲ್ಲಿ ಉಂಗುರ ಹುಡುಕುವ ಆಟವನ್ನು ಮಾಡಿಸುತ್ತಾರೆ. ಕೊನೆಯಲ್ಲಿ ಕೂಸಿನ ಆಟವನ್ನು ಈರ್ವರ ನಡುವೆ ಆಡಿಸುತ್ತಾರೆ. ಹೆಣ್ಣಿನವರ ಮನೆಯಲ್ಲಿ ಗೊಂದಲ ಪೂಜೆ ಮಾಡುವ ಸಂಪ್ರದಾಯವಿದ್ದರೆ ಆ ರಾತ್ರಿ ಬೀಗರೆಲ್ಲರೂ ಇದ್ದು, ಗೊಂದಲದ ಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ. ಇಲ್ಲವಾದರೆ ಅವತ್ತೆ ರಾತ್ರಿ ಗಂಡಿನವರು ಹೆಣ್ಣಿಗೆ ಉಡಿ ಅಕ್ಕಿ ಹಾಕಿಸಿಕೊಂಡು ತಮ್ಮ ಊರಿಗೆ ಕರೆದು ಕೊಂಡು ಹೋಗುತ್ತಾರೆ. ಈ ಸಮಯದಲ್ಲಿ ತವರುಮನೆಯವರು ಮಗಳನ್ನು ಗಂಡನ ಮನೆಗೆ ಕಳುಹಿಸುವಾಗ ಆಕೆಯನ್ನು ಪೂರ್ವ ದಿಕ್ಕಿಗೆ ಮುಖ ಮಾಡಿ ನಿಲ್ಲಿಸಿ ಸಹೋದರರು ಅವಳು ಕಾಲನ್ನು ತೊಳೆದು ನಮಸ್ಕರಿಸಬೇಕು.

**ರಕೋತ ಬುಟ್ಟಿ** : ಕೆಲವು ಗೊಂದಲಿಗರ ಕುಟುಂಬಗಳಲ್ಲಿ ಅಂದರೆ ಧಾರವಾಡ-ಗದಗ ಜಿಲ್ಲೆಗಳ ಕೆಲಭಾಗಗಳಲ್ಲಿ ವಿವಾಹದ ಸಂದರ್ಭಗಳಲ್ಲಿ ವಿಶಿಷ್ಟವಾದ ಆಚರಣೆಯನ್ನು ಮಾಡುತ್ತಾರೆ. ಮದುಮಕ್ಕಳನ್ನು ಎತ್ತರದ ಕಟ್ಟೆಯಾಗಿರುವ 'ಸಾಸ್ವಿಕಟ್ಟೆ'ಯ ಮೇಲೆ ಎರಡು ಬಿದಿರು ಬುಟ್ಟಿಯಲ್ಲಿ ಎದುರು ಬದುರಾಗಿ ನಿಲ್ಲಿಸುತ್ತಾರೆ. ಮದ್ಯದಲ್ಲಿ ಸ್ವಸ್ತಿಕ ಚಿತ್ರ ಬರೆದ ಬಟ್ಟೆಯನ್ನು ಅವರಿಬ್ಬರ ಮಧ್ಯದಲ್ಲಿ ಹಿಡಿದು, ಬಂದ ಪುರೋಹಿತರು ಮಂತ್ರವನ್ನು ಹೇಳುತ್ತಾರೆ. ನಂತರ ಬಟ್ಟೆಯನ್ನು ಸರಿಸಿ ಪರಸ್ಪರ ವಧುವರರು ಹೂ-ಮಾಲೆ ಹಾಕುತ್ತಾರೆ. ಆವಾಗ್ಗೆ ಕೂಡಿದ ಸಮಾಜದ ಹಿರಿಯರು ಅಕ್ಕಿ-ಜೋಳ ಬೆರೆಸಿದ ಅಕ್ಷತೆಯನ್ನು ವಧು-ವರರ ಮೇಲೆ ಹಾಕಿ ಶುಭ ಹಾರೈಸುತ್ತಾರೆ. ನಂತರ ಇರ್ವರನ್ನು ಒಂದೇ ಬುಟ್ಟಿಯಲ್ಲಿ ನಿಲ್ಲಿಸಿ, ಜೀವನದುದ್ದಕ್ಕೂ ಜೊತೆಯಾಗಿ ಬಾಳಿ ಎಂಬ ಸಂದೇಶವನ್ನು ಅರಹುತ್ತಾರೆ. ನಂತರ ಸುರಗಿ ನೀರು ಹಾಕಿ ಅದನ್ನು ಒರಿಸಿಕೊಳ್ಳುವ ಮುಂಚೆ ಚಂಡಿನಾಟ ಆಡುವ ಶಾಸ್ತ್ರ ಮಾಡಿಸುತ್ತಾರೆ. ಮದುವೆಯ ಕೊನೆ ವಿಧಿ ಕನಕದ ದೀಪ ದರ್ಶನ. ಬಿದಿರಿನ ಬುಟ್ಟಿಯ ಅಂಚಿಗೆ ಐದು ಕಡ್ಡಿಗಳನ್ನು ಚುಚ್ಚುತ್ತಾರೆ. ಕಿರುಬೆರಳು ಗಾತ್ರದ ಸುಮಾರು ಮೊಳ ಉದ್ದದ ಐದು ಕಡ್ಡಿ ಸಿಕ್ಕಿಸಿ ಮೇಲೆ ತುದಿಯಲ್ಲಿ ದಾರ ಕಟ್ಟಿರುತ್ತಾರೆ. ಬುಟ್ಟಿಯ ಒಳಗೆ ಕಣಕದ ಪಣತಿ ಇಟ್ಟು, ಅದರಲ್ಲಿ ತುಪ್ಪದ ದೀಪವನ್ನು ಹಚ್ಚುತ್ತಾರೆ. ಆ ಬುಟ್ಟಿಯನ್ನು ವಧುವಿನ ಸೋದರ ಮಾವನ ಕೈಯಲ್ಲಿ ಕೊಡುತ್ತಾರೆ. ಅವನಿಗೂ ಬುಟ್ಟಿಗೂ ಬಿಳಿ ಬಟ್ಟೆಯನ್ನು ಮುಚ್ಚುತ್ತಾರೆ. ಸಹಾಯಕರ ಸಹಾಯದಿಂದ ಆತ ವಧು-ವರರಿದ್ದಲ್ಲಿಗೆ ಬಂದು ಮುಸುಕನ್ನು ತೆಗೆದು ಇರ್ವರಿಗೂ ಬುಟ್ಟಿಯೊಳಗಿನ ತುಪ್ಪದ ದೀಪದ ದರ್ಶನ ವನ್ನು ಮಾಡಿಸುತ್ತಾರೆ. ಇದು ಸೋದರ ಮಾವನು ವಧು-ವರರಿಗೆ ನೀಡುವ ರಕ್ಷಣೆಯ ಸಂಕೇತ ಎಂದೇ ಹೇಳಲಾಗುತ್ತದೆ ಇದನ್ನೇ 'ರಕೋತ ಬುಟ್ಟಿ ಆಚರಣೆ' ಎನ್ನಲಾಗುತ್ತದೆ.

**ಬಹುಪತ್ನಿತ್ವ ಮತ್ತು ವಿಧವಾ ವಿವಾಹ** : ಗೊಂದಲಿಗ ಸಮುದಾಯದಲ್ಲಿ ಏಕಪತ್ನಿತ್ವಕ್ಕೆ ಹೆಚ್ಚು ಮಾನ್ಯತೆಯನ್ನು ಕಾಣುತ್ತೇವೆ. ಅನಿವಾರ್ಯ-ಅನಿರೀಕ್ಷಿತ ಸಂದರ್ಭಗಳು ಎದುರಾದಾಗ ಬಹುಪತ್ನಿತ್ವಕ್ಕೆ

ಅವಕಾಶವಿರುವುದನ್ನು ಕಾಣಬಹುದು. ಆದರೆ ಪುರುಷನು ನಾಲ್ಕನೆಯ ಸಾರಿ ಮದುವೆಯನ್ನು ಮಾಡಿಕೊಳ್ಳುವಂತಿಲ್ಲ. ಸಾಮಾನ್ಯವಾಗಿ ಮೊದಲ ಹೆಂಡತಿಗೆ ಮಕ್ಕಳಾಗದಿದ್ದಲ್ಲಿ, ಇಲ್ಲವೇ ಹೆಂಡತಿಯು ಮರಣ ಹೊಂದಿದ್ದಲ್ಲಿ ಪುರುಷನು ಪುನರ್ ಅಥವಾ ಎರಡನೇ ಮದುವೆಯಾಗುವದನ್ನು ಕಾಣುತ್ತೇವೆ. ಆದರೆ ನಾಲ್ಕನೆಯ ಮದುವೆಯನ್ನು ಮಾಡಿಕೊಂಡು ಸಂತಾನ ಪಡೆದರೆ ಆ ಸಂತಾನಕ್ಕೆ 'ಎಳೆಕುಲದ ಎಳೆಗುಲ ಸಂತಾನ' ಎಂದು ಎಣಿಸುವ ಪದ್ಧತಿ ಗೊಂದಲಿಗರಲ್ಲಿದೆ. ಇಂಥವರು ಸಮಾಜಕ್ಕೆ ಎಷ್ಟೇ ದಂಡ ಕಟ್ಟಿದರೂ ಪಾಪ ಪರಿಹಾರವಾಗುವುದಿಲ್ಲ ಎಂಬ ನಂಬಿಕೆ ಇದೆ. ಇಂಥವರ ಜೊತೆಗೆ ಸಂಬಂಧ ಗಳನ್ನು ಬೆಳೆಸಲು ಹಿಂದು ಮುಂದೆ ನೋಡುತ್ತಾರೆ.

ಗೊಂದಲಿಗರಲ್ಲಿ ಬಹುಪತ್ನಿತ್ವಕ್ಕೆ ಅವಕಾಶವಿರುವಂತೆ ವಿಧವಾ ಪುನರ್ ವಿವಾಹಕ್ಕೂ ಅವಕಾಶವಿದೆ. ಗೊಂದಲಿಗರು ವಿಧವಾ ವಿವಾಹಕ್ಕೆ 'ಉಡಕಿ' ಪದ್ಧತಿ ಎಂದು ಕರೆಯುತ್ತಾರೆ. ಆದರೆ ಸ್ತ್ರೀ ಮೂರನೇಯ ಸಲ ವಿವಾಹವಾಗುವಂತಿಲ್ಲ. ಈ ನಿಯಮವನ್ನು ಕಡ್ಡಾಯವಾಗಿ ಪಾಲಿಸಬೇಕು. ಸ್ತ್ರೀಯು ಮೂರನೇಯ ಬಾರಿ ಮದುವೆಯಾಗಿ ಪಡೆದ ಸಂತಾನವನ್ನು 'ಎಳೆಕುಲದವರು ಅಥವಾ ಎಳೆಗುಲ ಸಂತಾನ' ಎಂದೇ ಎಣಿಕೆ ಮಾಡುತ್ತಾರಲ್ಲದೇ ಅವರ ಜೊತೆಗೆ ಸಂಬಂಧವನ್ನು ಬೆಳೆಸಲು ಹಿಂದೆ ಮುಂದೆ ನೋಡುತ್ತಾರೆ.

ಗೊಂದಲಿಗ ಸಮುದಾಯದಲ್ಲಿ ವಿವಾಹ ವಿಚ್ಛೇದನಕ್ಕೂ ಅವಕಾಶವಿದೆಯಾದರೂ ಅಂಥ ಪ್ರಕರಣಗಳು ಬಹಳ ವಿರಳ. ಒಂದು ವೇಳೆ ವಿಚ್ಛೇದನ ಪಡೆದುಕೊಂಡ ಮಹಿಳೆಯು ಪುನರ್ ವಿವಾಹ ಮಾಡಿಕೊಳ್ಳಬೇಕಾದರೆ, ಮೊದಲನೆ ಗಂಡ ಬದುಕಿರುವವರೆಗೂ ಅದಕ್ಕೆ ಅವಕಾಶವಿಲ್ಲ ಎಂಬ ನಿಯಮವು ಅವರಲ್ಲಿದೆ. ಈ ಹಿನ್ನೆಲೆಯಲ್ಲಿ ಸಮೀಕ್ಷೆ ಮಾಡಿದ ಗೊಂದಲಿಗ ಕುಟುಂಬಗಳ ವೈವಾಹಿಕ ಸ್ಥಾನಮಾನವನ್ನು ನೋಡಲಾಗಿ:

**ಕೋಷ್ಟಕ ೪.೧ ಗೊಂದಲಿಗರ ವೈವಾಹಿಕ ಸ್ಥಾನಮಾನ**

| ಕ್ರಸಂ | ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅವಿವಾಹಿತರು | ೨೦೧೭ | ೧೫೦೫ | ೩೫೨೨ |
| ೨ | ವಿವಾಹಿತರು | ೧೭೩೦ | ೧೭೫೮ | ೩೪೬೦ |
| ೩ | ವಿಧುರ/ವಿಧವೆಯರು | ೫೮ | ೩೨೪ | ೩೭೪ |

ಮೇಲಿನ ಅಂಕಿ-ಸಂಖ್ಯೆಗಳನ್ನು ಗಮನಿಸಿದಾಗ ಅವಿವಾಹಿತರ ಪ್ರಮಾಣ ಹೆಚ್ಚು ಇದೆ. ವಿವಾಹಿತ ರಲ್ಲಿ ಸ್ತ್ರೀಯರ ಪ್ರಮಾಣ ಹೆಚ್ಚು ಇದ್ದು, ಬಹುಪತ್ನಿತ್ವ ಪದ್ಧತಿ ಆಚರಣೆಯಲ್ಲಿದೆ ಎಂಬುದನ್ನು ತಿಳಿಸುತ್ತದೆ. ವಿಧುರರಿಗಿಂತ ವಿಧವೆಯರ ಸಂಖ್ಯೆಯು ಹೆಚ್ಚು ಇದ್ದು, ವಿಧುರರು ಮರು ಮದುವೆ ಮಾಡಿಕೊಳ್ಳಲು ಅವಕಾಶಗಳಿದ್ದು, ವಿಧವೆಯರ ಮರುಮದುವೆಗೆ ಇನ್ನು ಅಷ್ಟು ಮುಕ್ತ ಅವಕಾಶಗಳಾಗಲೀ ಅಥವಾ ಆ ರೀತಿಯ ವಾತಾವರಣವಾಗಲಿ ಇಲ್ಲದೇ ಇರುವದನ್ನು ಹಾಗೂ ಮಕ್ಕಳು ಇರುವದರಿಂದ ಮರುಮದುವೆಗೆ ನಿರ್ಬಂಧನೆಯಾಗುವದು.

**ದತ್ತು ತೆಗೆದುಕೊಳ್ಳುವದು** : ಸಾಮಾನ್ಯವಾಗಿ ಗೊಂದಲಿಗರಲ್ಲಿ ವಿವಾಹಿತ ದಂಪತಿಗಳಿಗೆ ಮಕ್ಕಳಾಗದೇ ಇದ್ದಾಗ, ತಮ್ಮ ಹತ್ತಿರದ ಸಂಬಂಧಿಕರಲ್ಲಿಯ ಮಕ್ಕಳನ್ನು ದತ್ತಕ ತೆಗೆದುಕೊಳ್ಳಲು ಅವಕಾಶವಿದೆ. ಇಲ್ಲಿ ಹೆಣ್ಣಾಗಲಿ ಗಂಡಾಗಲೀ ಬಾಲ್ಯದಲ್ಲಿಯೆ ಮಗುವನ್ನು ದತ್ತಕ ತೆಗೆದುಕೊಳ್ಳುವ ಸಂಪ್ರದಾಯವಿದೆ. ಆದರೆ ಈ ದತ್ತಕ ಸಂಪ್ರದಾಯವನ್ನು ಸಮುದಾಯದ ಕುಲ ಪಂಚಾಯತಿಯ ಹಿರಿಯರ ಸಮ್ಮುಖದಲ್ಲಿ ದತ್ತಕ ಪತ್ರವನ್ನು ಮಾಡಿಕೊಂಡಾಗ ಮಾತ್ರ ಸಮ್ಮತವೆನಿಸಿಕೊಳ್ಳುತ್ತದೆ.

**ಬದಲಾವಣೆಗಳು** : ಆಧುನೀಕರಣ ಪಾಶ್ಚಿಮಾತೀಕರಣ, ಶಿಕ್ಷಣ, ಪ್ರಜಾಪ್ರಭುತ್ವ ಮೌಲ್ಯಗಳು ಮುಂತಾದ ಅಂಶಗಳ ಪ್ರಭಾವದಿಂದ ಸಮಾಜದಲ್ಲಿ ತೀವ್ರತೆರನಾದ ರೀತಿಯಲ್ಲಿ ಬದಲಾವಣೆಗಳು ಕಂಡುಬರುತ್ತಿವೆ. ಸಮಾಜದ ಪ್ರತಿಯೊಂದು ಸಂಘ-ಸಂಸ್ಥೆಗಳು ಬದಲಾವಣೆಯ ತೀವ್ರತೆಗೆ ಒಳಗಾಗಿ ಸಾಕಷ್ಟು ಮಾರ್ಪಾಡುಗಳಾಗುತ್ತಿರುವುದನ್ನು ಕಾಣುತ್ತೇವೆ. ಬದಲಾವಣೆಯ ಈ ಪ್ರಕ್ರಿಯೆಗೆ ಪರಂಪರಾಗತ ಹಿನ್ನೆಲೆಯಲ್ಲಿ ಬೆಳೆದು ಬಂದಿರುವ ಬುಡಕಟ್ಟು ಅಲೆಮಾರಿ ಸಮುದಾಯಗಳು ಹೊರತಾಗಿಲ್ಲ. ಬದುಕಿನ ಅನಿವಾರ್ಯತೆ-ಅವಶ್ಯಕತೆಯ ಹಿನ್ನೆಲೆಯಲ್ಲಿ ಆಧುನಿಕತೆಯ ಬದಲಾವಣೆಗೆ ತಮ್ಮನ್ನು ತಾವು ಅಪ್ಪಿಕೊಳ್ಳುವುದು, ಒಪ್ಪಿಕೊಳ್ಳುವುದು ಅನಿವಾಯರ್ಯವು ಅವಶ್ಯಕವು ಆಗಿದೆ ಎಂದರೆ ತಪ್ಪಾಗಲಾರದು.

ಅಲೆಮಾರಿಗಳಾಗಿಯೇ ಬದುಕನ್ನು ಕಳೆಯುತ್ತಾ ಬಂದ ಗೊಂದಲಿಗರು ಸ್ಥಿರನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿರುವುದರ ಜೊತೆಗೆ ಪರಂಪರಾಗತವಾಗಿ ಬೆಳೆಸಿಕೊಂಡು ಬಂದ ಜೀವನ ಶೈಲಿಯಲ್ಲಿಯೂ ಅನೇಕ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ತಮ್ಮ ಮೂಲ ಸಂಸ್ಕೃತಿಯ ಪ್ರತಿಬಿಂಬವಾಗಿ ಬೆಳೆದುಬಂದ ವೈವಾಹಿಕ ಆಚರಣೆಗಳಲ್ಲಿಯೂ ಗೊಂದಲಿಗರಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಳ್ಳುತ್ತಿರುವುದನ್ನು ಗುರುತಿಸಬಹುದಾಗಿದೆ.

ಮುಖ್ಯವಾಗಿ ಪ್ರಾರಂಭದಿಂದಲೂ ಐದು ದಿನಗಳವರೆಗೆ ಮಾಡುತ್ತಾ ಬಂದಂತಹ ವಿವಾಹವು ಈಗ ಒಂದು ದಿನದಲ್ಲಿಯೇ ಮುಗಿಸುವ ಸಂಪ್ರದಾಯ ಬೆಳೆದು ಬಂದಿದೆ. ವಿವಾಹಕ್ಕೆ ಸಂಬಂಧಪಟ್ಟಂತೆ ಅನುಸರಿಸುತ್ತಾ ಬಂದ ಧಾರ್ಮಿಕ ವ್ರತಾಚರಣೆಗಳನ್ನು ಒಂದೇ ದಿನದಲ್ಲಿ ಮುಗಿಸುತ್ತಿರುವದು, ಅತಿಯಾದ ಖರ್ಚು-ವೆಚ್ಚಕ್ಕೆ ತಡೆಹಾಕಲು ಪ್ರಯತ್ನಿಸುತ್ತಿರುವದು, ಬಾಲ್ಯವಿವಾಹವನ್ನು ನಿಷೇಧಿಸಿರುವುದು, ವಿವಾಹ ಸಮಾರಂಭಗಳಲ್ಲಿ ಬೇರೆ ಬೇರೆ ಸಮುದಾಯದವರನ್ನು ಆಹ್ವಾನಿಸುತ್ತಿರುವುದರಿಂದ ಮಾಂಸಾಹಾರವನ್ನು ಮಾಡದೇ, ಸಿಹಿ ಪದಾರ್ಥಗಳ ಸಸ್ಯಾಹಾರವನ್ನೇ ಮಾಡುತ್ತಿರುವುದು, ಸ್ಥಿತಿವಂತರಾದವರು ಆಡಂಭರದ ಹಿನ್ನೆಲೆಯಲ್ಲಿ ಮದುವೆ ಮಂಟಪ/ಕಲ್ಯಾಣ ಮಂಟಪಗಳಲ್ಲಿ ಅದ್ದೂರಿಯಿಂದಲೂ ಮಾಡುತ್ತಿರುವುದನ್ನು ಕಾಣುತ್ತೇವೆ. ಇನ್ನೊಂದೆಡೆಗೆ ಗೊಂದಲಿಗರು ಮಾಡಿಕೊಂಡಿರುವ ತಮ್ಮದೇ ಆದ ರಾಜ್ಯಮಟ್ಟದ ಸಂಘಟನೆಗಳಿಂದ ಪ್ರಮುಖ ನಗರ ಪ್ರದೇಶಗಳಲ್ಲಿ ವಧು-ವರರ ಸಮಾವೇಶ ಮಾಡುತ್ತಿರುವುದನ್ನು ಕಾಣುತ್ತೇವೆ. ಇಂಥಹ ಸಮಾವೇಶದಲ್ಲಿ ವಧು-ವರರ ಆಯ್ಕೆಯಾದರಂತೂ ಅಲ್ಲಿಯೇ "ಯಾದಿಮೇ ಶಾದಿ" ಎನ್ನುವಂತೆ ವಿವಾಹವನ್ನು ಮಾಡುತ್ತಿರುವುದು ಕಂಡುಬರುತ್ತದೆ. ಜೊತೆಗೆ ಬಡತನದ ಪರಸ್ಥಿತಿಯಲ್ಲಿ ಇರುವ ತಮ್ಮ ಸಮುದಾಯದ ಜನರಿಗೆ ವಿವಾಹದ ವೆಚ್ಚವನ್ನು ತಗ್ಗಿಸುವ ಸಲುವಾಗಿ ಸಾಮೂಹಿಕ ವಿವಾಹ ಕಾರ್ಯಕ್ರಮಗಳನ್ನು ಇತ್ತಿತ್ತಲಾಗಿ ನೆರವೇರಿಸುತ್ತಿದ್ದಾರೆ.

### ೪.೧.೬. ಸೀಮಂತ

ಗೊಂದಲಿಗರು ಕೆಲವು ನಿರ್ದಿಷ್ಟ ಆಚರಣೆಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಾ ಬಂದರೆ ಇನ್ನುಳಿದ ಆಚರಣೆಗಳಿಗೆ ಸಂಬಂಧಪಟ್ಟಂತೆ ಸರಳಗೊಳಿಸಿರುವುದನ್ನು ಕಾಣುತ್ತೇವೆ. ಹೆಣ್ಣು ಗರ್ಭಿಣಿ ಯಾದಾಗ ಸೀಮಂತ ಕಾರ್ಯ ಮಾಡುವುದಕ್ಕೆ ಸಂಬಂಧಪಟ್ಟಂತೆ ಯಾವ ಆಚರಣೆಗಳೂ ಇವರಲ್ಲಿ ಹೆಚ್ಚಾಗಿ ಕಂಡುಬರುವದಿಲ್ಲ. ಹೆರಿಗೆಗೆ ತವರು ಮನೆಗೆ ಕಳಿಸುವ ಸಂದರ್ಭದಲ್ಲಿ ಹೊಸ ಸೀರೆಯನ್ನು ಉಡಿಸಿ ಉಡಿ ತುಂಬಿ ಕಳಿಸಿಕೊಡುವ ಪದ್ಧತಿಯನ್ನು ಮಾತ್ರ ಆಚರಿಸುತ್ತಾ ಬಂದವರು. ಅದರೆ ಇತ್ತಿತ್ತಲಾಗಿ ಅನೇಕ ಸ್ಥಿತಿವಂತ ಕುಟುಂಬಗಳು ಗರ್ಭಿಣಿಯಾದ ಮಹಿಳೆಗೆ ಸೀಮಂತ ಕಾರ್ಯವನ್ನು ಮಾಡಲಾಗುತ್ತಿದ್ದು, ಇದಕ್ಕೆ 'ಚೋಳಿ' ಎಂದು ಕರೆಯುತ್ತಾರೆ. ಸ್ತ್ರೀಯು ಗರ್ಭಿಣಿಯಾದ ೬ ಅಥವಾ ೮ನೇ ತಿಂಗಳು ತುಂಬಿದ ಸಂದರ್ಭದಲ್ಲಿ ಈ ಕಾರ್ಯವನ್ನು ಮಾಡುತ್ತಿದ್ದು ಅಂದು ಗರ್ಭಿಣಿ ಸ್ತ್ರೀಯನ್ನು ಶೃಂಗರಿಸಿ ಹೊಸ ಸೀರೆ, ಕುಪ್ಪಸ, ಹೂವು ಮುಡಿಸಿ, ಮುತ್ತೈದೆಯರನ್ನು ಕರೆಯಿಸಿ ಅವರಿಂದ ಆರತಿ ಬೆಳಗಿಸುತ್ತಾರೆ.

### ೪.೧.೭. ಮರಣ

ಪ್ರತಿಯೊಬ್ಬ ವ್ಯಕ್ತಿಯೂ ಒಂದಿಲ್ಲೊಂದು ದಿನ ಸಾಯಲೇಬೇಕು. ಹುಟ್ಟು ಸಹಜ ಕ್ರಿಯೆಯಾಗಿರು ವಂತೆ ಸಾವು ಅನಿವಾರ್ಯವಾದುದು. ಅಂದರೆ ಜನನದಂತೆ ಮನುಷ್ಯನಿಗೆ ಸಾವು ಕೂಡ ಅನಿವಾರ್ಯ. ಹುಟ್ಟು-ಸಾವಿನ ಮದ್ಯದ ಜೀವನವನ್ನು ನಿಯಂತ್ರಿಸುವ ಶಕ್ತಿ ಮನುಷ್ಯನಿಗಿದ್ದರೂ ಹುಟ್ಟು, ಸಾವುಗಳನ್ನು ಆತ ನಿಯಂತ್ರಿಸಲಾರ. ಆಧುನಿಕ ಜಗತ್ತಿನಲ್ಲಿ ಹುಟ್ಟನ್ನು ನಿಯಂತ್ರಿಸುವ ಅಲ್ಪಮಟ್ಟದ ಸಾಮರ್ಥ್ಯವನ್ನು ಸಾಧಿಸಲು ಸಾಧ್ಯವಾಗಿರಬಹುದಾದರೂ ಸಾವನ್ನು ಆತ ನಿಯಂತ್ರಿಸುವ, ತಡೆಗಟ್ಟುವ ಪ್ರಯತ್ನ ಮಾತ್ರ ಇನ್ನೂ ಸಾಧ್ಯವಾಗಿಲ್ಲ.

ಸಾವು ಮನುಷ್ಯ ಸಂಬಂಧಗಳ ಗಾಢತೆಯನ್ನು ನೆನಪಿಸುವ, ಆ ಸಂಬಂಧಗಳನ್ನು ಸೇರಿಸುವ ಕ್ರಿಯೆಯಾದಂತೆಯೇ ಸಂಬಂಧಗಳನ್ನು ಬೇರ್ಪಡಿಸುವ ಕ್ರಿಯಾವಿಧಿಯಾಗಿ ರೂಪಗೊಂಡಿರುವುದನ್ನು ನಾವು ಕಾಣಬಹುದಾಗಿದೆ. ನಮ್ಮ ದಾರ್ಶನಿಕತೆಯಲ್ಲಿ ಸತ್ತ ವ್ಯಕ್ತಿಯನ್ನು ಹೇಗೂ ಅಂತ್ಯ ಮಾಡುವುದಿಲ್ಲ. ಸತ್ತ ವ್ಯಕ್ತಿಯ ಅಂತ್ಯದಲ್ಲಿ ಹಲವಾರು ವಿಧಿ-ವಿಧಾನಗಳ ಆಚರಣಾ ಕ್ರಮಗಳನ್ನು ಅನುಸರಿಸಲಾಗುತ್ತದೆ. ಮಾಡುವ ಅಂತ್ಯ ಸಂಸ್ಕಾರವು ಮುಖ್ಯವಾಗಿ ಸತ್ತ ವ್ಯಕ್ತಿಯ ಬದುಕನ್ನು ನೆನೆಪಿಸಿಕೊಳ್ಳುವುದು ಹಾಗೆಯೇ ಇನ್ನುಳಿದವರಿಗೆ ಇವತ್ತು ಅವನು ಸತ್ತಿದ್ದಾನೆ, ನಾಳೆ ನಾವು ಸಾಯುವವರೇ! ಬದುಕಿರುವವರೆಗೆ ಒಳ್ಳೆಯ ರೀತಿಯಲ್ಲಿ ಬದುಕಬೇಕು ಎಂಬ ಸಂದೇಶವನ್ನು ನೀಡುತ್ತದೆ ಅಂದರೆ ತಪ್ಪಾಗಲಾರದು.

ಈ ಹಿನ್ನೆಲೆಯಲ್ಲಿಯೇ ಪ್ರತಿಯೊಂದು ಸಮುದಾಯದಲ್ಲಿ ಅಂತ್ಯ ಸಂಸ್ಕಾರಕ್ಕೆ ಸಂಬಂಧಪಟ್ಟಂತೆ ತಮ್ಮದೇ ಆದ ಹಲವಾರು ಪದ್ಧತಿಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಗೊಂದಲಿಗರಲ್ಲಿಯೂ ಸಹ ಅಂತ್ಯ ಸಂಸ್ಕಾರಕ್ಕೆ ಸಂಬಂಧಪಟ್ಟಂತೆ ಸಮುದಾಯದ ಪದ್ಧತಿಯಂತೆ ಹಲವಾರು ವಿಧಿ-ವಿಧಾನಗಳನ್ನು ಆಚರಿಸುತ್ತಾ ಬಂದಿದ್ದಾರೆ.

ಗೊಂದಲಿಗ ಸಮುದಾಯದಲ್ಲಿ ಯಾರಾದರೂ ಸತ್ತರೆ ಸಂಬಂಧಿಕರು ಹಾಗೂ ಸಮುದಾಯದ ಹಿರಿಯರೆಲ್ಲರೂ ಸೇರಿ, ಸಮುದಾಯದ ಪದ್ಧತಿಯಂತೆ ವಿಧಿ-ವಿಧಾನಗಳನ್ನು ಮಾಡಿ ಅಂತ್ಯಕ್ರಿಯೆ ಮಾಡುತ್ತಾರೆ. ಗೊಂದಲಿಗರಲ್ಲಿ ಶವಸಂಸ್ಕಾರಕ್ಕೆ ಸಂಬಂಧಪಟ್ಟಂತೆ ಎರಡು ರೀತಿಯ ಆಚರಣಾ ಕ್ರಮಗಳನ್ನು ಕಾಣುತ್ತೇವೆ. ವಿವಾಹಿತರಾದವರು ಸತ್ತರೆ ಒಂದು ರೀತಿ, ಅವಿವಾಹಿತರು ಸತ್ತರೆ ಇನ್ನೊಂದು ರೀತಿಯ ಶವ ಸಂಸ್ಕಾರವನ್ನು ಮಾಡಲಾಗುತ್ತದೆ. ಸಾಮಾನ್ಯವಾಗಿ ಗೊಂದಲಿಗರಲ್ಲಿ ವೈಷ್ಣವ ಪದ್ಧತಿ ಯಂತೆ ಶವವನ್ನು ಸುಡುವುದನ್ನು ಕಾಣುತ್ತೇವೆ.

ಕುಟುಂಬದಲ್ಲಿ ಯಾವದೇ ವ್ಯಕ್ತಿ ಸತ್ತರೆ, ಮನೆಯ ಅಂಗಳದ ಒಂದು ಮೂಲೆಯಲ್ಲಿ ಬೆಂಕಿ ಹಚ್ಚಿ ಗಡಿಗೆಯಲ್ಲಿ ನೀರು ಕಾಯಿಸಿ, ಬೇರೆ ಬೆಡಗಿನವರು ಬಂದು ಹೆಣಕ್ಕೆ ಸ್ನಾನ ಮಾಡಿಸಿ ಹೊಸ ಬಟ್ಟೆಗಳನ್ನು ತೊಡಿಸಿ ರುಮಾಲು ಹಾಕಿ ಗೋಡೆಗೆ ಹೆಣದ ಕುತ್ತಿಗೆಯನ್ನು ಬಿಗಿದು ಕಟ್ಟಿ ಕೂಡ್ರಿಸುತ್ತಾರೆ. ನಂತರ ಹೆಣಕ್ಕೆ ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ಪರ ಊರಿನವರೆಲ್ಲರಿಗೂ ಹಾಗೂ ಸತ್ತ ವ್ಯಕ್ತಿಯ ಹತ್ತಿರದ ಸಂಬಂಧಿಕರಿಗೂ ಸುದ್ದಿಯನ್ನು ಮುಟ್ಟಿಸುತ್ತಾರೆ. ಸಿದಿಗೆಯನ್ನು ಸತ್ತ ವ್ಯಕ್ತಿಯ ಮನೆಯ ಮುಂದೆಯೇ ಕಟ್ಟಲಾಗುತ್ತದೆ. ಪರ ಊರಿನವರು ಹಾಗೂ ಸತ್ತ ವ್ಯಕ್ತಿಯ ಹತ್ತಿರದ ಸಂಬಂಧಿಕರು ಬಂದ ನಂತರವೆ ಹೆಣವನ್ನು ಸಿದಗಿಯ ಮೇಲೆ ಅಂಗಾತವಾಗಿ ಮಲಗಿಸಿ ಬಿಗಿದು ಕಟ್ಟಿ ಹೂವಿನ ಮಾಲೆಗಳನ್ನು ಹಾಕುತ್ತಾರೆ. ಶವವನ್ನು ಸತ್ತ ಮನೆಯ ಬೆಡಗಿನವರನ್ನು ಹೊರತು ಪಡಿಸಿ ಬೇರೆ ಬೆಡಗಿನವರು ಹೊರಬೇಕಲ್ಲದೆ ಅವರನ್ನು 'ಖಾಂದೇಕಾರ' ಎಂದು ಹೇಳುತ್ತಾರೆ.

ಅಂತ್ಯ ಸಂಸ್ಕಾರಕ್ಕೆ ಒಯ್ಯುವ ಶವಯಾತ್ರೆಯ ಸಂದರ್ಭದಲ್ಲಿ ಸತ್ತ ವ್ಯಕ್ತಿಯ ಮಗ ಅಥವಾ ಅಣ್ಣ-ತಮ್ಮನ ಮಗನು ನೀರು ತುಂಬಿದ ಗಡಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ಮುಂದೆ-ಮುಂದೆ ಹೋಗಬೇಕು. ಅಂತ್ಯ ಸಂಸ್ಕಾರಕ್ಕೆ ಹೆಣ್ಣು-ಗಂಡು ಬೇಧವಿಲ್ಲದೇ ಎಲ್ಲರೂ ಪಾಲ್ಗೊಳ್ಳುತ್ತಾರೆ. ಶ್ಮಶಾನದಲ್ಲಿ ಸಿದಿಗೆಯಿಂದ ಹೆಣವನ್ನು (ತೆಗೆದು) ಕೆಳಗೆ ಇಳಿಸಿದ ಮೇಲೆ ಗಡಿಗೆಯನ್ನು ಹಿಡಿದುಕೊಂಡವ ಹೆಣದ ತೊಡೆಯ ಮೇಲೆ ಮೊಳಕೈ ಇಟ್ಟು ಕುಳಿತುಕೊಳ್ಳುತ್ತಾನೆ. ಆಗ ಕ್ಷೌರಿಕ ಅವನ ತಲೆಗೂದಲನ್ನು ಬೋಳಿಸುತ್ತಾನೆ. ನಂತರ ಹೆಣವನ್ನು ಜೋಡಿಸಿಟ್ಟಿರುವ ಕಟ್ಟಿಗೆಯ ಮೇಲೆ ಇಟ್ಟು ಅದಕ್ಕೆ ಪೂಜೆ ಮಾಡಿ ಹೆಣದ ಬಾಯಲ್ಲಿ ಎಳ್ಳು ಬೆರೆಸಿದ ನೀರನ್ನು ಹಾಕಿ, ಎಲ್ಲರೂ ದೂರ ಸರಿಯುತ್ತಾರೆ ನಂತರ ಮಗನು ಶವಕ್ಕೆ ಅಗ್ನಿ ಸ್ಪರ್ಶ ಮಾಡುತ್ತಾನೆ. ಆಮೇಲೆ ನೀರು ತುಂಬಿದ ಮಣ್ಣಿನ ಮಡಕೆಯನ್ನು ಹೊತ್ತು ಐದು ಬಾರಿ ಹೆಣದ ಸುತ್ತು ಅಪ್ರದಕ್ಷಿಣೆ ಹಾಕಿದ ನಂತರ ಹಿಂಬರಿಕೆಯಾಗಿ ಮಡಕೆಯನ್ನು ಕೆಳಗೆ ಚೆಲ್ಲಿ ಬಾಯಿ ಬಾಯಿ ಬಡಿದುಕೊಂಡು ಹಿಂದೆ ತಿರುಗಿ ನೋಡದೆ ಸ್ಮಶಾನದಿಂದ ಮನೆಗೆ ಹೋಗುತ್ತಾನೆ. ಈ ಸಂದರ್ಭದಲ್ಲಿ ಹೆಂಡತಿ ಇದ್ದರೆ ಆಕೆಯನ್ನು ಹಿರಿಯ ಮಹಿಳೆಯರು ರಂಡೆ-ಮುಂಡೆಯಾಗಿಸುವ ಕಾರ್ಯವನ್ನು ಮಾಡುತ್ತಾರೆ. ಆ ಮಹಿಳೆಯ ಕೈಬಳೆಯನ್ನು ಹಾಗೂ ಅವಳ ಹಣೆಯ ಕುಂಕುಮವನ್ನು ಅಳಿಸಿ ಮುಖವನ್ನು ಯಾರು ನೋಡದಂತೆ ಸೆರಗನ್ನು ಮುಚ್ಚಿ ಮನೆಗೆ ಕರೆದುಕೊಂಡು ಬರುತ್ತಾರೆ. ಅಂದಿನಿಂದ ಮೂರು ದಿನಗಳವರೆಗೆ ಯಾರಿಗೂ ಮುಖ ತೋರಿಸದೇ

ಒಂದು ಕೋಣೆಯಲ್ಲಿ ಇರಬೇಕೆಂಬ ನಿಯಮವಿದೆ. ಒಂದು ವೇಳೆ ಮುತ್ತೈದೆಯರು ಸತ್ತಿದ್ದರೆ ತವರು ಮನೆಯವರು ಹೊಸ ಸೀರೆ ಉಡಿಸಿ ತಲೆಗೆ ದಂಡೆ ಕಟ್ಟುತ್ತಾರೆ. ಹಾಗೆಯೇ ಅವಿವಾಹಿತರಾದವರು ಸತ್ತರೆ ಮೊದಲು ಹೆಣಕ್ಕೆ ಎಕ್ಕೆಯ ಗಿಡದೊಂದಿಗೆ ಮದುವೆ ಮಾಡಿಸಿ ನಂತರ ಹೂಳುತ್ತಾರೆ. ಆದರೆ ಚಿಕ್ಕ ವಯಸ್ಸಿನಲ್ಲಿಯೇ ವಿವಾಹವಾಗಿದ್ದು ಅವನು ಸತ್ತರೂ ಸುಡುತ್ತಾರೆ.

'ಶವಸಂಸ್ಕಾರ ಮಾಡಿದ ಮೇಲೆ ಎಲ್ಲರೂ ಸ್ನಾನ ಮಾಡಿಕೊಂಡು ಗರಿಕೆಯನ್ನು ತೆಗೆದುಕೊಂಡು ಸತ್ತವರ ಮನೆಗೆ ಹೋಗಿ ಸತ್ತ ಸ್ಥಳದಲ್ಲಿ ಇಟ್ಟಿರುವ ತುಂಬಿದ ಚರಿಗೆಯಲ್ಲಿ ಗರಿಕೆಯನ್ನು ಎದ್ದಿ ಅದರ ನೀರನ್ನು ಕಾಲಿಗೆ ಸಿಂಪಡಿಸಿಕೊಂಡು ಆ ಗರಿಕೆಯನ್ನು ಚರಿಗೆಯ ಹತ್ತಿರವೇ ಇಟ್ಟು ಅಲ್ಲಿಯೇ ಸ್ವಲ್ಪ ಹೊತ್ತು ಕುಳಿತು ಕುಟುಂದವರಿಗೆ ಸಮಾಧಾನ ಹೇಳಿ ಹೋಗುತ್ತಾರೆ. ತಲೆಯನ್ನು ಬೋಳಿಸಿಕೊಂಡ ಶವ ಸಂಸ್ಕಾರದ ವಿಧಿ-ವಿಧಾನಗಳನ್ನು ಪೂರೈಸಿದ ವ್ಯಕ್ತಿಯು ಹನ್ನೊಂದು ದಿನಗಳವರೆಗೂ ಯಾರನ್ನೂ ಮುಟ್ಟಿಸಿಕೊಳ್ಳದೇ ಸಪ್ಪೆ ಇರುವ ಆಹಾರವನ್ನು ಸ್ವೀಕರಿಸಬೇಕು ಹಾಗು ಊರು ಬಿಟ್ಟು ಎಲ್ಲೂ ಹೋಗ ಬಾರದು ಎಂಬ ನಿಬಂಧನೆಗಳನ್ನು ಕಾಣುತ್ತೇವೆ'.

**೩ ನೇ ದಿನದ ಕಾರ್ಯ** : ಅಂತ್ಯ ಸಂಸ್ಕಾರವಾದ ೩ನೇ ದಿನದಂದು ಸತ್ತ ವ್ಯಕ್ತಿಯು ಉಪಯೋಗಿ ಸುತ್ತಿದ್ದ ಹಾಗೂ ಅವನ ಅಪೇಕ್ಷಿತ ಆಹಾರವನ್ನು ತಯಾರಿಸಿ, ಎಲೆ, ಅಡಿಕೆ, ಸೆರೆ, ಸಿಂದಿ, ಸಿಗರೇಟು ಎಲ್ಲವನ್ನು ಬುತ್ತಿ ಮಾಡಿಕೊಂಡು ಎಲ್ಲರೂ ಶ್ಮಶಾನಕ್ಕೆ ಹೋಗುತ್ತಾರೆ. ಅಲ್ಲಿ ಸುಟ್ಟ ಹೆಣದ ಎಲಬುಗಳನ್ನೆಲ್ಲಾ ಆರಿಸಿ ಮಣ್ಣಿನ ಮಡಿಕೆಯಲ್ಲಿ ತುಂಬಿ ಇಟ್ಟು, ಅದಕ್ಕೆ ಪೂಜೆ ಮಾಡಿ ತಂದ ವಸ್ತುಗಳನ್ನು ಹಾಗೂ ಪದಾರ್ಥಗಳನ್ನು ಮಡಕೆಯ ಮುಂದೆ ಇಟ್ಟು, ಲೋಬಾನ ಹಾಕಿ ಸ್ವಲ್ಪ ದೂರದಲ್ಲಿ ಕುಳಿತುಕೊಳ್ಳುತ್ತಾರೆ. ಪೂಜೆಗೆ ಇಟ್ಟ ಆಹಾರ ಪದಾರ್ಥಗಳನ್ನು ಕಾಗೆ ಬಂದು ಮುಟ್ಟಬೇಕು. ಕಾಗೆಯು ಎಷ್ಟು ಬೇಗ ಬಂದು ಯಾವದಾದರೊಂದು ಆಹಾರ ಪದಾರ್ಥವನ್ನು ಎತ್ತಿಕೊಂಡು ಹೋದರೆ ಸತ್ತ ವ್ಯಕ್ತಿಯು ಯಾವದೇ ಆಸೆ ಇಟ್ಟುಕೊಂಡಿಲ್ಲವೆಂದು ನಂಬುತ್ತಾರೆ. ಶ್ಮಶಾನದಲ್ಲಿ ಈ ಎಲ್ಲಾ ಕಾರ್ಯಗಳನ್ನು ಮಾಡಿದ ನಂತರ ಶವಸಂಸ್ಕಾರದಲ್ಲಿ ಮೊದಲು ಶವದ ಚಟಕ್ಕೆ ಹೆಗಲು ಕೊಟ್ಟ ನಾಲ್ಕು ಜನರಿಗೆ ಅಂದು ಋಾಂದೇಕಾರನ ಬಾರ ಇಳಿಸುವ ದೃಷ್ಟಿಯಿಂದ ಅವರಿಗೆ ಕೊಬ್ಬರಿ ಎಣ್ಣೆಯನ್ನು ಮೂರು ಕೈ ಬೆರಳಿನಿಂದ ಸವರಲಾಗುತ್ತದೆ. ಇದರಿಂದ ಶವ ಹೊತ್ತವರನ್ನು ಋಣಮುಕ್ತರನ್ನಾಗಿಸುತ್ತದೆ. ನಂತರದಲ್ಲಿ ಅಸ್ತಿಗಳನ್ನು ತುಂಬಿದ ಗಡಿಗೆಯನ್ನು ನದಿಗಾಗಲೀ ಅಥವಾ ಕೆರೆಗಾಗಲೀ ಹೋಗಿ ಬಿಟ್ಟು ಬರುವರು.

**ಒಳಕರೆದುಕೊಳ್ಳುವ ಶಾಸ್ತ್ರ** : ಸತ್ತ ವ್ಯಕ್ತಿಯ ಮಹೂರ್ತವನ್ನು ತಿಳಿದುಕೊಂಡು ೯, ೧೧, ೧೩, ಅಥವಾ ಒಂದು ತಿಂಗಳಾದ ಮೇಲೆ ಸತ್ತ ವ್ಯಕ್ತಿಯನ್ನು ಒಳ ಕರೆದುಕೊಳ್ಳುವ ಶಾಸ್ತ್ರವನ್ನು ನೇರವೇರಿಸಲಾಗುತ್ತದೆ. ಈ ಸಂದರ್ಭದಲ್ಲಿ ಮನೆಗೆ ಸುಣ್ಣ-ಬಣ್ಣ ಬಳಿದು, ಬಟ್ಟೆಗಳೆಲ್ಲವನ್ನು ತೊಳೆದು ಇಡೀ ಮನೆಗೆ ಗೋಮೂತ್ರವನ್ನು ಸಿಂಪಡಿಸುತ್ತಾರೆ. ಸತ್ತವರ ಹೆಸರಿನಲ್ಲಿ ಬೆಳ್ಳಿಯ ಮೂರ್ತಿಯನ್ನು ಮಾಡಿಸಿ ಅದಕ್ಕೆ ಪೂಜೆಯನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಕುರಿಯನ್ನು ಬಲಿಕೊಟ್ಟು ಮಾಂಸದ ಅಡುಗೆಯನ್ನು ತಯಾರಿಸಿ ನೈವೇದ್ಯ ಮಾಡಿ ನಂತರ ಎಲ್ಲರೂ ಸೇವನೆ ಮಾಡುತ್ತಾರೆ.

ಆಧುನಿಕತೆ ಗೊಂದಲಿಗರ ಅನೇಕ ಆಚರಣೆ ಸಂಪ್ರದಾಯಗಳ ಮೇಲೆ ತನ್ನ ಪ್ರಭಾವವನ್ನು ಬೀರಿದೆ. ಆದರೆ ಸಾವು ಸಾವಿನ ನಂತರದ ಆಚರಣೆಗಳ ಮೇಲೆ ಯಾವುದೇ ಪ್ರಭಾವ ಬೀರಿರುವುದನ್ನು ಕಾಣುವುದಿಲ್ಲ. ಸತ್ತ ವ್ಯಕ್ತಿಯ ಆತ್ಮವನ್ನು ತೃಪ್ತಿಗೊಳಿಸಲು ಪರಂಪಾರಾನುಗತವಾಗಿ ಆಚರಿಸಿಕೊಂಡು ಬಂದ ಎಲ್ಲ ವಿಧಿ-ವಿಧಾನಗಳನ್ನು ಚಾಚೂ ತಪ್ಪದೇ ಆಚರಿಸುತ್ತಾ ಬಂದಿರುವುದನ್ನು ಗೊಂದಲಿಗರ ಸಮಾಜದಲ್ಲಿ ಕಾಣುತ್ತೇವೆ.

### ೪.೨. ವಾರ್ಷಿಕಾವರ್ತನ ಆಚರಣೆಗಳು

ಸಾಮಾಜಿಕ ವ್ಯವಸ್ಥೆಯಲ್ಲಿ ನಂಬಿಕೆಗಳ ಆಧಾರದ ಮೇಲೆ ದೈವಗಳ ಆಚರಣೆಗಳು ಬೆಳೆದು ಬಂದಿವೆ. ಅಂತಹ ದೈವಗಳನ್ನು ಪಾರಂಪರಿಕವಾಗಿ ನಮ್ಮದೇ ಆದ ಕ್ರಮದಲ್ಲಿ ಪೂಜಿಸುವುದು, ಸ್ಥಾಪಿಸುವುದು, ಅವುಗಳ ಕುರಿತು ನಂಬುಗೆಗಳು, ವಿಧಿ-ನಿಷೇಧಗಳನ್ನು ಬೆಳೆಸಿಕೊಂಡು ಬಂದಿರುವುದನ್ನು ಕಾಣಬಹುದು. ಜಗತ್ತಿನ ಎಲ್ಲಾ ಸಮುದಾಯಗಳು ದೇವರನ್ನು ಒಲಿಸಿಕೊಳ್ಳಲು, ಆರಾಧಿಸಲು ಹಬ್ಬ ಗಳನ್ನು ಆಚರಿಸುತ್ತಾ ಬಂದಿವೆ.

ಹಬ್ಬ-ಹರಿದಿನಗಳು ದೇವತಾರಾಧನೆಯ ಪವಿತ್ರ ದಿನಗಳಾಗಿವೆ. ಇವುಗಳ ಆಚರಣೆಯ ವಿಧಿ ವಿಧಾನಗಳನ್ನು ಅರಿಯುವುದು ಧಾರ್ಮಿಕ ಕರ್ತವ್ಯವಾಗಿದೆ. ವರ್ಷ-ವರ್ಷದಲ್ಲಿ ಪಂಚಾಗಕ್ಕೆ ಅನ್ವಯಿಸಿ ಬರುವ ಈ ಶುಭದಿನಗಳ ಅರಿವು ದೈವತ್ವದ ಕಡೆಗೆ ಚಿಂತನೆ ಮಾಡುವುದಾಗಿದೆ. ಇದು ಉಪಾಸನೆಯ ಮುಖ್ಯ ಉದ್ದೇಶವು ಆಗಿದೆ. ಇದಕ್ಕಾಗಿಯೇ ಹಬ್ಬ-ಹರಿದಿನಗಳನ್ನು ಶ್ರದ್ಧೆ-ಭಕ್ತಿಯಿಂದ ಆಚರಿಸಲಾಗುತ್ತದೆ.

ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ಹಬ್ಬಗಳು ಪ್ರಮುಖ ಪಾತ್ರಗಳನ್ನು ವಹಿಸುತ್ತಲೇ ಬಂದಿವೆ. ದುಡಿದು ದಣಿದ ಜೀವಗಳಿಗೆ ಹಬ್ಬಗಳು ಒಂದಷ್ಟು ನೆಮ್ಮದಿಯನ್ನು ನೀಡುತ್ತವೆ. ಆಯಾ ಹಬ್ಬಗಳ ನೆಪದಲ್ಲಿ ಬಂಧು-ಬಾಂಧವರೆಲ್ಲರೂ ಒಂದೆಡೆ ಸೇರುವುದು, ಅಪರೂಪದ ಅಡುಗೆಗಳನ್ನು ಮಾಡಿಕೊಂಡು ಸೇವಿಸುವುದು, ಉಲ್ಲಾಸವನ್ನು ಉಂಟುಮಾಡುವ ಚಟುವಟಿಕೆಗಳಲ್ಲಿ ಪರಸ್ಪರ ಎಲ್ಲರೂ ಭಾಗಿಯಾಗುವುದು, ಒಂದು ರೀತಿಯಲ್ಲಿ ಹೊಸ ಚೈತನ್ಯವನ್ನು ಮತ್ತು ಜೀವನದಲ್ಲಿ ಹುರುಪು-ಹುಮ್ಮಸ್ಸನ್ನು ಹಬ್ಬಗಳು ತಂದುಕೊಡುತ್ತವೆ.

"ಹಬ್ಬ-ಹರಿದಿನಗಳು ಭಕ್ತಿ-ಧರ್ಮ ಮತ್ತು ವ್ರತಾಚರಣೆಗೆ ಸಂಬಂಧಿಸಿದ ಶುಭ ದಿನಗಳು, ಸಂಸ್ಕೃತಿ ಸಂವರ್ಧಕ ದಿನಗಳೂ ಆಗಿವೆ. ಇವುಗಳ ಆಚರಣೆಯು ಪವಿತ್ರವಾಗಿದೆ. 'ಇಹ'ದ ಬದುಕಿಗೂ 'ಪರ'ದ ಚಿಂತನೆಗೂ ಇವು ಸಾಧನೋಪಾಯಗಳು. ಹಿಂದುಗಳಾದ ನಮಗೆ ಧರ್ಮವೇ ಬಾಳಿನ ಉಸಿರು; ಧರ್ಮದ ಕುಶಲತೆಯೇ ಬಾಳಿನ ತಂತ್ರ, ಜ್ಞಾನಪೂರ್ಣ ಜಗಜ್ಯೋತಿಯ ಅರಿವು ತುತ್ತ ತುದಿ. ಅಂತೆಯೇ ಹಬ್ಬ ಹರಿದಿನಗಳ ಆಚರಣೆಯೂ ವಿಶಿಷ್ಟವಾಗಿದೆ, ಮಹತ್ವ ಪೂರ್ಣವಾಗಿದೆ".[೧೪] ಮಾನವನು ಜನ್ಮದಾರಭ್ಯ ಕೆಲವು ಋಣಗಳನ್ನು ತೀರಿಸಬೇಕಾಗಿದ್ದು ಅವುಗಳಲ್ಲಿ ದೇವಋಣ, ಋಷಿಋಣ, ಪಿತೃಋಣ, ಪ್ರಮುಖವಾದುದು. ಇವುಗಳನ್ನು ನಾವು ಸಕಾಲದಲ್ಲಿ ತೀರಿಸಲು ಪ್ರಯತ್ನಿಸುವ ವಿಧಾನಗಳೇ

ಹಬ್ಬ ಹರಿದಿನಗಳ ಆಚರಣೆಯಾಗಿದೆ ಎಂದರೆ ತಪ್ಪಾಗಲಾರದು. ಈ ದೃಷ್ಟಿಯಲ್ಲಿ ಮಾನವನ ಲೌಕಿಕ ಜೀವನದಲ್ಲಿ ಪಾರಮಾರ್ಥಿಕತೆಯತ್ತ ಅನುಭವವನ್ನು ಆಸ್ವಾದಿಸಲು ಸನಾತನವಾಗಿ ಆಚರಿಸುತ್ತಾ ಬಂದ ಈ ಹಬ್ಬಗಳು ಸಮುದಾಯಗಳ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖವಾಗಿವೆ.

ಸಂಪ್ರದಾಯಗಳು ಮತ್ತು ಆಚರಣೆಗಳು ಹಬ್ಬಗಳಿಗೆ ಪ್ರೇರಕಗಳಾಗಿರುವದರ ಜೊತೆಗೆ, ಹಬ್ಬಗಳಿಂದ, ಹಬ್ಬಗಳ ಆಚರಣೆಗಳಿಂದಲೇ ಸಂಸ್ಕೃತಿಯೆನ್ನುವುದು ಬೆಳೆದು ಬಂದಿರುತ್ತದೆ. ಜೀವನಾವರ್ತನ ಆಚರಣೆಗಳು ವ್ಯಕ್ತಿಗತ ಬದುಕನ್ನು ಸಾಮಾಜಿಕ ಜೀವನಕ್ಕೆ ಅಣಿಗೊಳಿಸುವ ಆಚರಣಾ ಕ್ರಮಗಳಾದರೆ, ಇಡೀ ಸಮುದಾಯವನ್ನು ಕಾಯುವ ದೈವಗಳ ಸಂತೃಪ್ತಿಗಾಗಿ, ಆರಾಧನೆಗಾಗಿ ವಾರ್ಷಿಕಾವರ್ತನ ಆಚರಣೆಗಳನ್ನು ಅನುಸರಿಸುತ್ತಾ ಬಂದಿದ್ದಾನೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಸಮುದಾಯ ತಾವು ನಂಬಿರುವ ದೈವಗಳ ಆರಾಧನೆಗನುಗುಣವಾಗಿ ಹಲವಾರು ವಾರ್ಷಿಕಾವರ್ತನ ಆಚರಣೆಗಳನ್ನು ಮಾಡುತ್ತಾ ಬಂದಿವೆ. ಅದರಲ್ಲೂ ಬುಡಕಟ್ಟು, ಅಲೆಮಾರಿ ಸಮುದಾಯಗಳಂತೂ ತಮ್ಮದೇ ಆದ ಸಾಂಸ್ಕೃತಿಕ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದು, ಅದಕ್ಕೆ ಪೂರಕವಾಗಿ ಹಲವಾರು ವಿಶಿಷ್ಟವಾದ ವಾರ್ಷಿಕ ಆಚರಣೆಗಳನ್ನು ಅಥವಾ ಹಬ್ಬಗಳನ್ನು ಆಚರಿಸುತ್ತಾ ಬಂದಿದ್ದು, ಸಮುದಾಯದ ಸಾಂಘಿಕ ಬದುಕಿಗೆ, ನೆಮ್ಮದಿಯುತ-ಸಂತೋಷದಾಯಕ ಬದುಕಿಗೆ ಸಹಾಯಕವಾಗಿವೆ ಎಂದೇ ಹೇಳಬೇಕು.

ಅಲೆಮಾರಿ ಸಮುದಾಯಗಳ ದೃಷ್ಟಿಯಲ್ಲಿ, ಆಚರಿಸುವ ಹಬ್ಬ-ಹರಿದಿನಗಳನ್ನು ಗಮನಿಸುವುದಾದರೇ, ಪ್ರತಿಯೊಂದು ಅಲೆಮಾರಿ ಸಮುದಾಯಗಳು ಒಂದೊಂದು ವಿಶಿಷ್ಟ ಸಂದರ್ಭಗಳಿಗನುಗುಣವಾಗಿ ಹಬ್ಬಗಳನ್ನು ಆಚರಣೆ ಮಾಡುತ್ತಾ ಬಂದಿವೆ. ಅವು ಸುಮ್ಮನೆ ಮಾಡಿ ಕೊಂಡಿರುವ, ಕಾಲ ಕಳೆಯುವುದಕ್ಕೆ ಮಾಡಿಕೊಂಡ ಹಬ್ಬ ಆಚರಣೆಗಳಲ್ಲ. ಮನುಷ್ಯ-ಮನುಷ್ಯರ ನಡುವೆ ಗಾಢವಾದ ಸಂಬಂಧವನ್ನು ಬೆಸೆಯಲು ಮಾಡಿ ಕೊಂಡಿರುವ ಆಚರಣೆಗಳು. ಮನುಷ್ಯ-ಪ್ರಾಣಿ, ಮನುಷ್ಯ-ಸಸ್ಯ, ಇವುಗಳ ಜೊತೆಯಲ್ಲಿ ಸಂಬಂಧ ಬೆಸೆಯುವುದಕ್ಕೆ ಮಾಡಿಕೊಂಡ ಹಬ್ಬ-ಹರಿದಿನಗಳ ಆಚರಣೆಗಳಾಗಿವೆ. ಪ್ರತಿಯೊಂದು ಹಬ್ಬಾಚರಣೆಗೆ ವಿಶಿಷ್ಟವಾದ ಅರ್ಥವನ್ನು ಗುರುತಿಸಬಹುದಾಗಿದ್ದು, ಬಹುಪಾಲು ಅಲೆಮಾರಿ ಸಮುದಾಯಗಳು ಮಾತೃ ಪ್ರಧಾನ ಸಂಸ್ಕೃತಿಯನ್ನು ಅನುಸುತ್ತಾರಲ್ಲದೇ, ಅವರ ದೈವಗಳು ಹೆಣ್ಣು ದೈವಗಳಾಗಿವೆ.

### ೪.೨.೧. ಗೊಂದಲಿಗರ ಹಬ್ಬಗಳು

"ಹಾಡುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರನ್ನು ವೃತ್ತಿಗಾಯಕರು ಎಂದು ಗುರುತಿಸಲಾಗುತ್ತದೆ. ನಿರ್ದಿಷ್ಟ ದೈವವೊಂದಕ್ಕೆ ಸಂಪ್ರದಾಯಿಕವಾಗಿ ನಡೆದುಕೊಳ್ಳುವುದು, ಸಾಮಾನ್ಯ ರೀತಿ. ಗಾಯಕರಾದವರು ಮತ್ತು ಅದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರು ತಮ್ಮ-ತಮ್ಮ ದೈವಗಳನ್ನು ಕುರಿತು ಆ ದೈವಗಳ ಮಹಾತ್ಮೆಗಳನ್ನು ಪವಾಡಗಳನ್ನು ಕುರಿತು ಹಾಡುತ್ತಾ ಬದುಕುವುದು ವಿಶಿಷ್ಟ ರೀತಿ. ಈ ವಿಶಿಷ್ಟ ರೀತಿಗಳನ್ನು ಅಳವಡಿಸಿಕೊಂಡವರೇ ವೃತ್ತಿ ಗಾಯಕರೆಂದು ಕರೆಯಿಸಿಕೊಳ್ಳುತ್ತಾರೆ.

ವೃತ್ತಿಗಾಯಕರು ತಮ್ಮನ್ನು ತಾವು ತಮ್ಮ ದೈವಕ್ಕೆ ಅರ್ಪಿಸಿಕೊಂಡಿರುತ್ತಾರೆ. ದೈವದ ನೆನಪಿನ ಅಗಾಧತೆಯಲ್ಲಿ ಲೀನವಾಗುತ್ತಾರೆ. ನಿರ್ದಿಷ್ಟ ಗುರಿಯೇ ದೈವವನ್ನು ಕುರಿತು ಹಾಡುವರು, ಆ ಮೂಲಕ ಸ್ತುತಿಸುವದು".[೧೫] ಅಂದರೆ ವೃತ್ತಿ ಗಾಯಕ ಪರಂಪರೆಯವರು ಮುಖ್ಯವಾಗಿ ಶಕ್ತಿದೇವತೆಯ ಆರಾಧಕರಾಗಿದ್ದು, ಉಪಾಸನೆ-ಆರಾಧನೆ ಮಾಡುವ ಪದ್ಧತಿಯನ್ನು ಅನುಸರಿಸುತ್ತಾ ಬಂದವರಾಗಿದ್ದಾರೆ.

ಗೊಂದಲಿಗರು ಕರ್ನಾಟಕ ವೃತ್ತಿ ಗಾಯಕ ವರ್ಗದ ಒಂದು ಸಂಪ್ರದಾಯವನ್ನು ಪ್ರತಿನಿಧಿಸುತ್ತಾರೆ ಗೊಂದಲ ಪೂಜೆ ಅವರ ಪ್ರಮುಖ ಪೂಜಾ ವಿಧಾನ. ತಮ್ಮ ಆರಾಧ್ಯ ದೈವವಾದ ಅಂಭಾಭವಾನಿ ಮುಂದೆ ಇಡೀ ರಾತ್ರಿ ಯಾವುದಾದರೊಂದು ಕಥೆಯನ್ನು ಹಾಡುತ್ತಾ. ಕುಣಿಯುತ್ತಾ ಅಭಿನಯಿಸುತ್ತಾ ಕೊನೆ ಮೊದಲುಗಳಂತೆ ನಡುನಡುವೆ ದೇವಿಸ್ತುತಿ ಮಾಡುತ್ತಾ ಬೆಳಕು ಹರಿಸುವುದೇ ಈ ಪೂಜಾ ವಿಧಾನ. ಇದನ್ನು 'ಗೊಂದಲ ಹಾಕುವುದು' ಎಂದೇ ಕರೆಯಲಾಗುತ್ತದೆ. ಈ ಹಿನ್ನೆಲೆಯಲ್ಲಿ ಗೊಂದಲ ಹಾಕುವವರೇ ಗೊಂದಲಿಗರು ಎಂದೇ ಗುರುತಿಸಲ್ಪಟ್ಟಿದ್ದಾರೆ.

ಗೊಂದಲಿಗರು ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದಾರೆ. ಎಲ್ಲ ಹಿಂದೂ ದೇವರುಗಳನ್ನು, ಹಾಗೂ ಸಾಮಾನ್ಯವಾಗಿ ಹಿಂದೂ ಹಬ್ಬ-ಹರಿದಿನಗಳನ್ನು ಆಚರಿಸುತ್ತಾ ಬಂದವರು. ಆದರೆ ಅವರ ಆಚರಣೆಯ ಮುಖ್ಯ ಗುರಿ ತುಳಜಾಪುರದ ಅಂಬಾಭವಾನಿ, ಸವದತ್ತಿಯ ಎಲ್ಲಮ್ಮದೇವಿಯನ್ನು ಸ್ತುತಿಸುವುದು, ಆರಾಧಿಸುವದು.

ಮೂಲತಃ ಶಕ್ತಿ ಆರಾಧಕರು ಉಪಾಸಕರು ಆದ ಗೊಂದಲಿಗರು ಮಾತೃದೇವತೆಯ ಪೂಜಕರು. "ಮಾತೃ ದೇವತೆಯ ಆರಾಧನೆಯು ಎಲ್ಲ ಜನಾಂಗಗಳಲ್ಲಿ ಕಂಡು ಬರುತ್ತದೆ. ಒಂದು ಕಾಲದಲ್ಲಿ ಮಾತೃದೇವತೆಯ ಆರಾಧನೆಯು ಕೆಲವೊಂದು ಬುಡಕಟ್ಟುಗಳಿಗೆ ಅಥವಾ ಜನಾಂಗಗಳಿಗೆ ಸೀಮಿತವಾದು ದೆಂಬ ಭಾವನೆಯಾಗಿತ್ತು. ಆದರೆ ಆದಿ ಕಾಲದಿಂದಲೂ ಮಾತೃದೇವತೆಯ ಆರಾಧನೆ ಇದ್ದುದು ಸರ್ವವಿಧಿತವಾಗಿದೆ. ಆರಾಧನೆಗಳು, ಕಟ್ಟಳೆಗಳು ಮೊದಲಿನಿಂದಲೂ ಬೆಳೆದುಕೊಂಡು ಬಂದಿವೆ. ಈ ಪದ್ಧತಿಯು ಎಲ್ಲ ಕಾಲದಲ್ಲಿಯೂ ನಮ್ಮ ದೇಶದಲ್ಲಿ ಬೆಳೆದುಕೊಂಡು ಬಂದಿರುವದು".[೧೬]

ಧರ್ಮಗ್ರಂಥಗಳಲ್ಲಿ, ಶಾಸ್ತ್ರಗ್ರಂಥಗಳಲ್ಲಿ ದೇವಿಗೆ ಅರ್ಪಿಸುತ್ತ ಬಂದಿರುವ ಹಾಗೂ ಪ್ರಿಯವಾದ ಕುಂಕುಮ, ಕೆಂಪುದಾಸವಾಳ ಹೂವು, ರಕ್ತ-ವಸ್ತ್ರ, ರಕ್ತ ಫಲ ಮೊದಲಾದವುಗಳ ಕುರಿತು ವಿವರಣೆ ನೋಡಿದಾಗ ಪಿತೃ ದೇವತೆಗಿಂತ ಮಾತೃದೇವತೆಗೆ ಪ್ರಮುಖ ಸ್ಥಾನ ನೀಡಿರುವದು ಹಾಗೂ ಮಾತೃ ದೇವತೆಯ ಕಲ್ಪನೆ ಪ್ರಾಚೀನವಾದುದು ಎಂಬ ಅಂಶ ಸ್ಪಷ್ಟವಾಗಿ ಕಂಡುಬರುತ್ತದೆ. ಕಾರಣ ಭಾರತೀಯ ಸಂಸ್ಕೃತಿಯಲ್ಲಿ ಮಾತೃದೇವತೆಯ ಉಪಾಸನೆಯು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ ಎಂದೇ ಹೇಳಬೇಕು.

"ಮಾತೃ ದೇವತೆಯ ಕಲ್ಪನೆ ಮಾನವ ಜನಾಂಗದಲ್ಲಿ ಮೂಡಲು ಯಾವ ಅಂಶ ಪ್ರಚೋದನೆ ನೀಡಿರಬೇಕು ಎಂಬ ಅಂಶವನ್ನು ಗಮನಿಸಿದಾಗ ಕಂಡುಬರುವ ಸಂಗತಿಯೆಂದರೆ - ಪ್ರಕೃತಿಯ

ಒಡಲಲ್ಲಿರುವ ನೀರಿನ ಪ್ರವಾಹ, ಗಾಳಿಯ ರಭಸ, ಮಿಂಚು, ಗುಡುಗು, ಸೂರ್ಯ-ಚಂದ್ರಾದಿಗಳ ಪ್ರಕಾಶ, ಬೆಂಕಿಯ ಪ್ರಕಾಶ ಇತ್ಯಾದಿ ಅಂಶಗಳು ಇವು ಒಂದು ಕಡೆಯಾದರೆ, ಕಾಡಿನಲ್ಲಿ ವಾಸಿಸುವ ಕ್ರೂರ ಮೃಗಗಳು, ಗಗನದಲ್ಲಿ ಹಾರಾಡುವ ಪಕ್ಷಿಗಳ ಸಮೂಹ, ಜಲಚರಗಳು ಇತ್ಯಾದಿ ಅಂಶಗಳು. ಈ ಎಲ್ಲ ಅಂಶಗಳ ಪ್ರಭಾವದಿಂದ ಕಾಲ ಕ್ರಮೇಣ ಪ್ರಕೃತಿಯಲ್ಲಿಯ ಹುಟ್ಟು-ಸಾವುಗಳಿಗೆ ಹೆಣ್ಣು ಕಾರಣ, ಎಂಬ ಅಂಶ ಅವನಲ್ಲಿ ಪ್ರಮುಖವಾಗಿ ಕಂಡಾಗ, ಮಾನವ ಆಕೆಯನ್ನು ಅತ್ಯಂತ ಗೌರವದಿಂದ ಕಂಡಿರಬೇಕು. ಸರ್ವಸಾಕಾರ ಮೂರ್ತಿಯಾದ ಸ್ತ್ರೀಯನ್ನು ಕಂಡಂತಹ ಮಾನವ ಆಕೆಯನ್ನು ಮಾತೃದೇವತೆಯ ಸಂಕೇತದಿಂದ ಕಂಡಂತೆ ಕಾಣುತ್ತೇವೆ".[೨೭]

ಈ ಹಿನ್ನೆಲೆಯಲ್ಲಿ 'ಮನೆಯೇ ಮೊದಲ ಪಾಠಶಾಲೆ; ಜನನಿ ತಾನೆ ಮೊದಲ ಗುರು', 'ಮಾತೃದೇವೋಭವ'. ಎನ್ನುವ ಬೆಳೆದು ಬಂದ ನುಡಿಗಟ್ಟುಗಳು, ಮಾತೃದೇವತೆಯ ಕಲ್ಪನೆಯು ಭಾರತೀಯರ ಆಚರಣೆಗಳಲ್ಲಿ ಹೇಗೆ ಅಲಂಕೃತವಾಗುತ್ತಾ ಬಂದಿದೆ, ಎಂಬುದನ್ನು ತಿಳಿಸುತ್ತದೆ. ಆದ್ದರಿಂದಲೇ ಸ್ತ್ರೀಯನ್ನು ಮಹಾಮಾತೆಯೆಂದು, ಕರೆಯುವುದರ ಜೊತೆಗೆ ತಾಯಿಯನ್ನು ಮಾತೃ ದೇವತೆಯ ಸ್ಥಾನಕ್ಕೇರಿಸಿ ಆಕೆಯನ್ನು ಸಾಕ್ಷಾತ್‌ದೇವತೆ ಎಂಬ ಕಲ್ಪನೆ ಮೂಡಿ ಬಂದಿರುವುದರ ಆಧಾರದ ಮೇಲೆ ಮಾತೃದೇತಾರಾಧನೆ ಬೆಳೆದು ಬಂದಿರಬೇಕು.

ಜಮದಗ್ನಿ ಮಹರ್ಷಿ ಆತನ ಪತ್ನಿ ರೇಣುಕೆಯರ ವಂಶಜರೆಂದೇ ಗುರುತಿಸಲ್ಪಟ್ಟ ಗೊಂದಲಿಗರು ಮಾತೃದೇವತೆಯ ಆರಾಧಕರೇ ಆಗಿದ್ದು, ತಾವು ಭವಾನಿಯ ಮಕ್ಕಳೆಂದೊ, ಭಕ್ತರೆಂದು ಹೇಳಿಕೊಳ್ಳುತ್ತಾರೆ.

"ಮಾತೃಪ್ರಧಾನ ಕುಟುಂಬವನ್ನೇ ಪಾಲಿಸಿಕೊಂಡು ಬಂದಿರುವ ಗೊಂದಲಿಗರು ಸಹಜವಾಗಿ ಶಕ್ತಿಯ ಆರಾಧಕರಾಗಿದ್ದಾರೆ ಎನ್ನುವದಕ್ಕಿಂತ ಶಕ್ತಿಯ ಆರಾಧನೆಗೊಳಗಾದ ಗೊಂದಲಿಗರು ಮಾತೆಯ ಬಗೆಗೆ ಮಾನ್ಯತೆ ಕೊಡುವ ಸಂಸ್ಕೃತಿಯನ್ನು ಹೊಂದಿದ್ದಾರೆ. ಶಕ್ತಿಯ ಅವತಾರಗಳನ್ನು ಸ್ವರೂಪಗಳನ್ನು ರೂಪಗಳನ್ನು ಅವರ ಹಾಡು, ಕಥೆ, ಪೂಜೆ, ಜೀವನಕ್ರಮಗಳಲ್ಲಿ ಕಾಣುತ್ತೇವೆ".[೨೮] ಈ ಹಿನ್ನೆಲೆಯಲ್ಲಿ ಮೂಲತಃ ಶಕ್ತಿ ದೇವತೆಯ ಆರಾಧಕರಾದ ಗೊಂದಲಿಗರ ಆಚರಣಾ ಕ್ರಮಗಳು ಮಾತೃದೇವತೆ ಆಚರಣೆಯ ಕೇಂದ್ರವುಳ್ಳದ್ದಾಗಿವೆ ಎಂದೇ ಹೇಳಬಹುದು. ಆದಾಗ್ಯೂ ಹಿಂದೂ-ಧರ್ಮ, ಹಿಂದು ಸಂಸ್ಕೃತಿಯನ್ನು ಪರಿಪಾಲಿಸಿಕೊಂಡು ಬಂದಿರುವ ಗೊಂದಲಿಗರು ಎಲ್ಲಾ ಹಿಂದೂ ಹಬ್ಬ-ಹರಿದಿನ ಗಳನ್ನು ಆಚರಿಸುತ್ತಾರಲ್ಲದೇ, ಮುಸ್ಲಿಂ ಸಂಸ್ಕೃತಿಯ ಪ್ರಭಾವದಿಂದಲೂ ಮೊಹರಂ ಹಬ್ಬವನ್ನು, ಆಗಿ ಹೋದ ಅನೇಕ ಮುಸ್ಲಿಂ ಪ್ರವಾದಿಗಳನ್ನು ಆರಾಧನೆ ಮಾಡುವುದನ್ನು ಕಾಣುತ್ತೇವೆ. ಈ ದೃಷ್ಟಿಯಲ್ಲಿ ಗೊಂದಲಿಗರು ಆಚರಿಸುವ ಹಬ್ಬಗಳಲ್ಲಿ ಯುಗಾದಿ, ದಸರಾ, ಮತ್ತು ಮೂರು/ಎರಡು ವರ್ಷಕ್ಕೊಮ್ಮೆ ಆಚರಿಸುವ ದುರ್ಗವ್ವನ ಹಬ್ಬಗಳು ಪ್ರಮುಖವಾದವು.

**ಯುಗಾದಿ :** ಚೈತ್ರ ಶುದ್ಧ ಪಾಡ್ಯಮಿದಂದು ಯುಗಾದಿ ಹಬ್ಬ ಬರುತ್ತದೆ. ಯುಗಾದಿಯಿಂದಲೇ ಹಿಂದೂಗಳ ವರ್ಷಾರಂಭವಾಗುತ್ತದೆ. ಬ್ರಹ್ಮನು ಈ ಜಗತ್ತನ್ನು ಚೈತ್ರ ಶುದ್ಧ ಪ್ರಥಮದಂದು ಸೂರ್ಯೋದಯದ ಕಾಲಕ್ಕೆ ಸಮಗ್ರವಾಗಿ ಸೃಷ್ಟಿಸಿದನೆಂದೂ, ಆ ಅವಧಿಯಿಂದಲೇ ವರ್ಷಾರಂಭ

ಪ್ರಾರಂಭವಾಯಿತೆಂಬ ನಂಬಿಕೆ ಹಿಂದೂಗಳಲ್ಲಿ ಬೆಳೆದು ಬಂದಿರುವುದರಿಂದ ಯುಗಾದಿ ಹಿಂದುಗಳಿಗೆಲ್ಲಾ ವರ್ಷದ ಪ್ರಾರಂಭದ ದಿನವಾಗಿದೆ.

"ಯುಗಾದಿ ಎಂದರೆ ಹೊಸ ವರ್ಷದ ಮೊದಲ ದಿನ ಎಂದರ್ಥ. ಮಂತ್ರವೊಂದರಲ್ಲಿ ವರ್ಷವನ್ನು ರಥಕ್ಕೂ, ಉತ್ತರಾಯಣ-ದಕ್ಷಿಣಾಯನಗಳನ್ನು ಅದರ ಚಕ್ರಗಳಿಗೂ ಹೋಲಿಸಲಾಗಿದೆ. ಆದ್ದರಿಂದ ವರ್ಷವನ್ನು ಯುಗ ಎಂದೂ, ಅದರ ಮೊದಲನೆಯ ದಿನವನ್ನು ಯುಗಾದಿ ಎಂದೂ ರೂಢಿಯಲ್ಲಿ ಕರೆಯಲಾಗಿದೆ".[೨೯] ಈ ದೃಷ್ಟಿಯಲ್ಲಿ ಯುಗಾದಿ ಹಬ್ಬ ಭಾರತೀಯರೆಲ್ಲರಿಗೂ, ಪರಂಪರೆಯ ಹಬ್ಬವಾಗಿ ವರ್ಷದ ಹೊಸ ದಿನವಾಗಿ ಪರಿಣಮಿಸಿದೆ. ಹಬ್ಬಗಳಿಗೆಲ್ಲ ಆದಿಯಾಗಿರುವ ಯುಗಾದಿಯನ್ನು ಒಂದಿಲ್ಲೊಂದು ರೀತಿಯಲ್ಲಿ ಅತ್ಯಂತ ಸಡಗರ ಸಂಭ್ರಮದಿಂದಲೇ ಆಚರಿಸುತ್ತಾ ಬಂದಿದ್ದಾರೆ.

"ಯುಗಾದಿಯು ಹೊಸ ವರುಷದ ಪ್ರಾರಂಭದ ಮೊದಲನೆಯ ದಿನವಾಗಿರುವುದು ಕೇವಲ ಕಾಲಗಣನೆಯ ದೃಷ್ಟಿಯಿಂದ ಮಾತ್ರವಲ್ಲ, ಸೃಷ್ಟಿಯಲ್ಲಿ ಎಲ್ಲಿ ನೋಡಿದಲ್ಲಿ ಗಿಡ-ಮರಗಳ ಚಿಗುರು, ಎಲೆ-ಮೊಗ್ಗು, ಹೂವುಗಳ ಲಾಸ್ಯ-ನಗು ಕಂಡುಬರುತ್ತದೆ. ಋತುಗಳ ರಾಜ ವಸಂತನು ತನ್ನ ಶುಭ ಪಾದಾರ್ಪಣೆ ಮಾಡುತ್ತಾನೆ. ಬನದಂಬಿಕೆಯು ಹೊಸ ಹಸುರುಡಿಗೆಯುಟ್ಟು ನವನವೋನ್ಮೇಷ ಶಾಲಿನಿಯಾಗಿರುತ್ತಾಳೆ. ಎಲ್ಲೆಲ್ಲೂ ಆನಂದ ತಾಂಡವ. ನಿಸರ್ಗವೇ ಮರುಹುಟ್ಟು ಪಡೆದಂತಿರುತ್ತದೆ. ಗಿಡಮರಗಳಿಂದ ಎಲೆಗಳನ್ನುದುರಿಸಿದ ಶಿಶಿರ ಋತು ಕಳೆದು ಹೊಸ ಚಿಗುರು, ಎಲೆ ಹೂವುಗಳಿಂದ ಎಲೆಗಳಿಗೆ ಕಾರಣವಾಗಿ ಚೈತ್ರದ ಆಗಮನ ಸಂತಸಕರವಾಗಿರುತ್ತದೆ."[೩೦] ಹೀಗೆ ಸೃಷ್ಟಿಯಲ್ಲಿ ನೈಸರ್ಗಿಕವಾಗಿ ಆಗುವ ಬದಲಾವಣೆಯ ಹೊಸತನದ ಮುನ್ಸೂಚನೆಯ ಅಡಿಯಲ್ಲಿ ಹೊಸವರ್ಷದ ಆರಂಭದ ಹಬ್ಬವಾಗಿರುವ ಯುಗಾದಿಯ ಆಚರಣೆಯ ವಿಧಿಗಳಲ್ಲಿ ಬೇವು-ಬೆಲ್ಲ ಸೇವನೆ, ಪಂಚಾಂಗ ಶ್ರವಣ ಮತ್ತು ಚಂದ್ರ ದರ್ಶನ ಮುಖ್ಯವಾಗಿದೆ.

ಯುಗಾದಿ ಹಬ್ಬವನ್ನು ಪ್ರಾಚೀನ ಕಾಲದಿಂದಲೂ 'ಬೇವಿನ ಹಬ್ಬ' ವೆಂದು ಆಚರಿಸುತ್ತಾರೆ. ಕಾರಣ ಯುಗಾದಿ ಹಬ್ಬದಂದು ಬೇವು-ಬೆಲ್ಲದ ಸೇವನೆ ಅತ್ಯಂತ ಮಹತ್ವ ಪೂರ್ಣವಾಗಿದೆ. ಯುಗಾದಿ ಅಮವಾಸ್ಯೆಯ ಮರುದಿನ ಆಚರಿಸುವ ಪಾಡ್ಯದಂದು ಬೇವಿನ ತಪ್ಪಲಿನ ಎಲೆಗಳನ್ನು ಹಾಕಿದ ನೀರಿನ ಅಭ್ಯಂಜನ ಸ್ನಾನ ಮಾಡಿ ನಂತರ ಬೇವಿನ ಮುಗುಳು, ಬೇವಿನ ಹೂವಿನೆಳೆಗಳ ಜೊತೆಗೆ ಬೆಲ್ಲ ಸೇರಿಸಿ ಪ್ರತಿಯೊಬ್ಬರು ತಿನ್ನುವದು ಈ ಹಬ್ಬದ ಸಂಪ್ರದಾಯ.

"ಬೇವು-ಬೆಲ್ಲದ ಸೇವನೆ ಅತ್ಯಂತ ಅರ್ಥಪೂರ್ಣವೂ ಆಗಿದೆ. ಸಂಯಮಿಯೋ, ಸಮ ದರ್ಶಿಯೂ, ಸ್ಥಿತ ಪ್ರಜ್ಞನು ಆಗಬೇಕೆಂಬ ಬೋಧನೆಯನ್ನು ಅದು ತಿಳಿಸುತ್ತದೆ. ಸಿಹಿ-ಕಹಿಗಳು, ಸುಖ-ದುಃಖಗಳ ಅರ್ಥ ಮಾತ್ರವಲ್ಲದೇ ವೈದ್ಯಕೀಯ ಗುಣದ ವಿವರಣೆಯನ್ನು ಒಳಗೊಂಡಿದೆ. ಆಯುರ್ವೇದವು 'ಶತಾಯುರ್ವಜ ದೇಹಾಯ ಸರ್ವ ಸಂಪತ್ಕರಾಯ ಚಃ ಸರ್ವಾರಿಷ್ಠ ವಿನಾಶಾಯ ನಿಂಬಕಂ ದಳಭಕ್ಷಣಾಂ' ॥ ಬೇವಿನ ಎಲೆಗಳನ್ನು ಸೇವಿಸುವದರಿಂದ ಸರ್ವ ಅನಿಷ್ಟಗಳು ನಾಶವಾಗುತ್ತದೆ. ಮಾನವ ವಜ್ರದೇಹಿಯಾಗುತ್ತಾನೆ. ಸಂಪತ್ತು ಉಂಟಾಗುತ್ತದೆ. ಆಯಸ್ಸು ವೃದ್ಧಿಯಾಗುತ್ತದೆ. ಎಂದು

ಬೋಧಿಸುತ್ತದೆ. ಆದ್ದರಿಂದ ಬೇವು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯೇ ಆಗಿದೆ. ಬೇವು ಬೆಲ್ಲ ಎಂದೊಡನೆಯೇ ಲೋಕಾರೂಢಿಯಲ್ಲಿ ಕಹಿ-ಸಿಹಿಗಳ ಸಾಂಕೇತಿಕ ಅರ್ಥ ಬಂದಿರಬಹುದು. ಜೀವನದಲ್ಲಿ ಸಂತೋಷವೂ ಇದೆ ದುಃಖವೂ ಇದೆ, ಆರೋಗ್ಯವೂ ಇದೆ ಅನಾರೋಗ್ಯವು ಇದೆ. ಅನಾರೋಗ್ಯ ನಿವಾರಣೆಗೆ ಔಷದಿಯೂ ಇದೆ; ಔಷದಿಯಲ್ಲಿ ವಿಷವೂ ಇದೆ". ಹೀಗೆ ವೈಚಾರಿಕವಾಗಿ ಪರಿಶೀಲಿಸಲಾಗಿ ಬೇವೇ ಜೀವನದ ಸಿಹಿಯಾಗಿದೆ, ಸತ್ವಶಾಲಿಯಾಗಿದೆ. ಕಹಿಯನ್ನು ನುಂಗಿಯೂ ಸಿಹಿ ಆಲೋಚನೆಯುಳ್ಳವರಾಗಿರಬೇಕೆಂಬ ಉದಾತ್ತತೆ, ಸಂಯಮ, ಪಡೆಯಬೇಕೆಂಬುದು ಗಮನಾರ್ಹ ವಾಗಿದೆ.

"ಯುಗಾದಿಯಂದು ಪಂಚಾಂಗ ಶ್ರವಣ ಮಾಡುವದರಿಂದಲೂ ಹೆಚ್ಚಿನ ಪ್ರಯೋಜನವಿದೆ. ಪ್ರತಿಯೊಂದು ಮಾಸದ ಫಲ, ರಾಶಿ ಫಲ, ದ್ವಾದಶಾದಿತ್ಯರು, ಮಳೆ-ಬೆಳೆ ಮೊದಲಾದ ವಿಚಾರಗಳನ್ನು ಮುಂಚಿತವಾಗಿಯೇ ತಿಳಿಯುವದರಿಂದ ಆ ವರ್ಷದಲ್ಲಿ ನಡೆಸಬೇಕಾದ ವ್ಯವಸಾಯ, ವ್ಯಾಪಾರಾದಿ ಗಳನ್ನು ನಡೆಸುವ ಮುಂದಾಲೋಚನೆಗೂ ಮಾರ್ಗದರ್ಶನ, ಸ್ಫೂರ್ತಿ ದೊರೆತಂತಾಗುತ್ತದೆ".[೨೦] ಇದೇ ಸಂದರ್ಭದಲ್ಲಿ ಸಾಯಂಕಾಲ ಚಂದ್ರದರ್ಶನ ಮಾಡಿ ಹಿರಿಯರಿಗೆ ನಮಸ್ಕರಿಸುವುದು, ವಾಡಿಕೆಯಾಗಿ ಬಂದಿದೆ. ಈ ರೀತಿ ಯುಗಾದಿ ಪಾಡ್ಯದಂದು ಅನುಸರಿಸುವ ಕ್ರಮಗಳು ಸರ್ವರ ಆಯುರಾರೋಗ್ಯಾಭಿವೃದ್ಧಿಗೆ ಕಾರಣವಾಗಿರುವದರ ಜೊತೆಗೆ ಜೀವ-ಜಗತ್ತು-ದೇವ ಸಂಬಂಧವನ್ನು ಅರಿತು, ಸಾಮರಸ್ಯ ಪಡೆಯಲು ಕಾರಣವಾಗಿದೆ, ಎಂದು ಹೇಳಬಹುದಾಗಿದೆ. ಅಷ್ಟೇಅಲ್ಲ ಹೊಸ-ಹೊಸ ಚೈತನ್ಯ ಹುರುಪು ಪಡೆಯಬೇಕೆಂಬ ನಿತ್ಯನೂತನ ವಾರ್ಷಿಕ ಸಂದೇಶವೇ ಯುಗಾದಿಯು ಸಾರುತ್ತಿರುವ ಸಂದೇಶವಾಗಿದೆ.

ಗೊಂದಲಿಗರು ವರ್ಷದ ಆರಂಭದ ಮೊದಲ ಹಬ್ಬವಾಗಿರುವ ಯುಗಾದಿಯನ್ನು ಪ್ರಾರಂಭ ದಿಂದಲೂ ಆಚರಿಸಿಕೊಂಡು ಬಂದಿದ್ದಾರೆ. ಒಂದು ವೇಳೆ ಸಂಚಾರದಲ್ಲಿದ್ದರೆ, ಅಂದು ತಮ್ಮ ಮೂಲ ನೆಲೆಗಾಗಲೀ ಅಥವಾ ಸಂಬಂಧಿಕರ ಮನೆಗಾಗಲೀ ಹೋಗುವುದರ ಮೂಲಕ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದಂದು ಮನೆಯನ್ನು ಸ್ವಚ್ಛಮಾಡಿ ಬಟ್ಟೆ-ಬರೆಗಳನ್ನು, ಹಾಸಿಗೆಗಳನ್ನು ಸ್ವಚ್ಛಗೊಳಿಸುತ್ತಾರೆ. ಮನೆಯ ಬಾಗಿಲಿಗೆ ಮಾವಿನ ಎಲೆಗಳ ತಳಿರು-ತೋರಣವನ್ನು ಕಟ್ಟುತ್ತಾರೆ. ಗೊಂದಲಿಗರು ಅಂದು ಬೇವಿನ ತೊಪ್ಪಲನ್ನು ಬೆರೆಸಿದ ನೀರಿನಿಂದ ಸ್ನಾನ ಮಾಡುತ್ತಾರೆ. ಊಟದ ಸಂದರ್ಭದಲ್ಲಿ ಬೇವಿನ ಮುಗುಳು, ಬೇವಿನ ಹೂವುಗಳ ಜೊತೆಗೆ ಬೆಲ್ಲವನ್ನು ಸೇರಿಸಿರುವುದನ್ನು ಎಲ್ಲರೂ ಪರಸ್ಪರ ಒಟ್ಟುಗೂಡಿ ಸೇವಿಸುತ್ತಾರೆ.

**ಗುಡಿಪಾಡವಾ ಆಚರಣೆ** : ಗೊಂದಲಿಗರಲ್ಲಿ ಈ ಯುಗಾದಿಯ ಹಬ್ಬದಂದು ಆಚರಿಸುವ ಪ್ರಮುಖವಾದ ವಿಶಿಷ್ಟ ಪದ್ಧತಿ ಅಥವಾ ಆಚರಣಾ ಕ್ರಮ- 'ಗುಡಿಪಾಡವಾ ಆಚರಣೆ'ಯಾಗಿದೆ. ಪ್ರಾರಂಭದಲ್ಲಿ ಹಿರಿಯರ ಸ್ಮರಣೆಯ ಹಿನ್ನೆಲೆಯಲ್ಲಿ ಒಂದು ಗೊಂಬೆಯನ್ನು ರಚಿಸಿ ಪೂಜೆಯನ್ನು ಸಲ್ಲಿಸುವ ಪದ್ಧತಿಯು ಬೆಳೆದು ಬಂದಿತ್ತು. ನಂತರ ಈ ಗೊಂಬೆಯನ್ನು ಅಲ್ಲಿಯೇ ಇರುವ ಗುಡಿಗೆ

ಒಯ್ದು ಪೂಜೆಯನ್ನು ಮಾಡುತ್ತಾ ಬಂದಿರುವ ರೂಢಿಯಿಂದ ಈ ಆಚರಣೆಗೆ 'ಗುಡಿ ಪೂಜೆ' ಅಥವಾ 'ಗುಡಿಪಾಡವಾ ಆಚರಣೆ' ಎಂಬ ಹೆಸರು ಬಂದಿರಬೇಕು. ಇತ್ತಿತ್ತಲಾಗಿ ಗೊಂದಲಿಗರ ಕುಟುಂಬದವರು ಒಂದು ಕಟ್ಟಿಗೆ ಅಥವಾ ಗಳಕ್ಕೆ ಹೊಸ ಚರಿಗೆಯನ್ನು ಅಧೋಮುಖವಾಗಿ ಅಥವಾ ಕೆಳಮುಖವಾಗಿ(ಅದರ ಮೇಲೆ) ಇಟ್ಟು, ಅದಕ್ಕೆ ಹೊಸದಾದ ಕುಪ್ಪಸದ ಅಥವಾ ವಸ್ತ್ರದ ಬಟ್ಟೆಯನ್ನು ಕಟ್ಟಿ ಧ್ವಜದ ರೀತಿಯಲ್ಲಿ ಮನೆಯ ಮೇಲಾಗಲಿ ಅಥವಾ ಕಿಡಕಿಗಾಗಲಿ ಕಟ್ಟಿ ನಿಲ್ಲಿಸುತ್ತಾರೆ. ಈ ರೀತಿಯ ಆಚರಣೆಯನ್ನು ಬಹುಪಾಲು ಗೊಂದಲಿಗ ಕುಟುಂಬಗಳಲ್ಲಿ ಕಾಣಬಹುದಾಗಿದೆ. "ಗುಜರಾತ್, ಮಹಾರಾಷ್ಟ್ರಗಳಲ್ಲಿ ಯುಗಾದಿಯಂದು ಮನೆಯ ಮುಂದೆ ಪಾಡ್ಯದ ಗುಡಿ(ಧ್ವಜ) ಕಟ್ಟುತ್ತಾರೆ. ಮಹಾಭಾರತದಲ್ಲಿಯೂ ಇದರ ಉಲ್ಲೇಖವಿದೆ".[೨] ಈ ಹಿನ್ನೆಲೆಯಲ್ಲಿ ಈ ಪದ್ಧತಿಯ ಆಚರಣೆಯು ಗೊಂದಲಿಗರ ಸಮುದಾಯದವರಲ್ಲಿ ಅಷ್ಟೇ ಅಲ್ಲ, ಇನ್ನಿತರ ಸಮುದಾಯಗಳಲ್ಲಿಯೂ ಈ ಆಚರಣೆಯು ಇದೆ ಎಂದು ಹೇಳಬಹುದಾಗಿದೆ.

ಯುಗಾದಿ ಪಾಡ್ಯದ ದಿನವೂ ಭಾರತೀಯರ ದೃಷ್ಟಿಯಲ್ಲಿ ಅತ್ಯಂತ ಒಳ್ಳೆಯ ಮುಹೂರ್ತ, ಸಾಡೇತಿನ ಮುಹೂರ್ತವಾಗಿರುವುದರಿಂದ ಯಾವದೇ ಕೆಲಸ, ಕಾರ್ಯ, ಖರೀದಿ ಮಾಡುವುದು ಸರ್ವೇಸಾಮಾನ್ಯವಾಗಿದೆ. ಅದೇ ರೀತಿ ಗೊಂದಲಿಗರು ಸಹ ಬೆಳ್ಳಿ-ಬಂಗಾರವಾಗಲೀ, ಯಾವುದೇ ಹೊಸ ವಸ್ತುಗಳನ್ನಾಗಲೀ ಖರೀದಿ ಮಾಡುತ್ತಾರೆ. ಅಂದು ಸಾಯಂಕಾಲ ಪಂಚರು ಸಭೆ ಸೇರಿ ಸಮುದಾಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸುವುದರ ಜೊತೆಗೆ ಗಮನಕ್ಕೆ ಬಂದ ವ್ಯಾಜ್ಯಗಳನ್ನು ಬಗೆಹರಿಸಿ, ನ್ಯಾಯನಿರ್ಣಯಗಳನ್ನು ಮಾಡಿ, ಸಮುದಾಯಗಳ ಜನರ-ಕುಟುಂಬಗಳ ಮಧ್ಯದಲ್ಲಿ ಕಂಡು ಬಂದಿರುವ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿ, ಯಥಾ ರೀತಿ ಸಾಮರಸ್ಯದಿಂದ, ಸೌಹಾರ್ದತೆಯಿಂದ ಬಾಳುವಂತೆ ನಿರ್ದೇಶಿಸುತ್ತಾರೆ.

**ನವರಾತ್ರಿ ಹಬ್ಬ :** ಅಶ್ವಿಜ ಮಾಸದಂದು ಬರುವ ಮಹಾನವಮಿ ಅಮವಾಸ್ಯೆಯ ಮರುದಿನ ಪಾಡ್ಯದಿಂದ ಒಂಬತ್ತು ದಿನಗಳು ನವರಾತ್ರಿ ಎಂದು, ಹತ್ತನೆಯ ದಿನ ದಶಮಿ-ವಿಜಯದಶಮಿ ಎಂದು ದೇಶಾದ್ಯಂತ ಅತ್ಯಂತ ಸಡಗರ ಸಂಬ್ರಮದಿಂದ ಆಚರಿಸುವ ಪ್ರಮುಖವಾದ ಮಹತ್ವದ ಹಬ್ಬಗಳಲ್ಲಿ ಒಂದಾಗಿದೆ. ಈ ಹಬ್ಬವು ಶರದ್ ಋತುವಿನಲ್ಲಿ ಬರುವುದರಿಂದಲೂ ಶರನ್ನವರಾತ್ರಿ ಎಂದು ಹೇಳುವರು. ಈ ಹತ್ತು ದಿನಗಳಲ್ಲಿ ಹಿಂದುಗಳೆಲ್ಲಾ ಶಕ್ತಿಪೂಜಾ ಸಂಬಂಧದ ಉಪಾಸನೆ-ಆರಾಧನೆಯನ್ನು ಮಾಡುವರು.

"ಶಕ್ತಿಪೂಜೆ ಬಹು ಹಿಂದಿನಿಂದಲೂ ರೂಢಿಯಲ್ಲಿದೆ. ವೇದದಲ್ಲಿನ ದೇವಿಸೂಕ್ತ, ಶ್ರೀಸೂಕ್ತ, ಮತ್ತು ದುರ್ಗಾಸೂಕ್ತಗಳು ವೇದಗಳ ಕಾಲದ ಶಕ್ತಿಪೂಜಾ ಪ್ರಾಮಾಣ್ಯಕ್ಕೆ ಆಧಾರವಾಗಿವೆ. ಕೇನ, ತೈತರೀಯ, ಶ್ವೆತಾಶ್ವತರ ಉಪನಿಷತ್ತುಗಳಲ್ಲಿಯೂ ಶಕ್ತಿಪೂಜೆಯ ಸೂಕ್ತಗಳಿವೆ. ದೇವಿಭಾಗವತ, ಸಪ್ತಶತಿ, ಮತ್ತಿತರ ಪುರಾಣಗಳಲ್ಲಿ, ಕಾವ್ಯಗಳಲ್ಲಿ ದೇವಿಮಹಿಮೆಯ ಕಥೆಗಳು ವಿಸ್ತಾರವಾಗಿ ನಿರೂಪಿತವಾಗಿವೆ. ವಿಷ್ಣುವಿನ ದಶಾವತಾರಗಳು, ಶಿವನ ಪಂಚಮಿಶತಿ ಲೀಲೆಗಳು ಲೋಕಕಂಟಕ ನಿವಾರಣೆ

ಮತ್ತು ಲೋಕಕಲ್ಯಾಣದ ಉದ್ದೇಶ ಹೊಂದಿರುವಂತೆಯೇ, ದೇವಿಯು ದುಷ್ಟಸಂಹಾರಕಳೂ, ಶಿಷ್ಟ ರಕ್ಷಕಳೂ, ಆಗಿದ್ದಾಳೆ. ಶುಂಭ-ನಿಶುಂಭ, ಚಂಡ-ಮುಂಡ, ರಕ್ತಬೀಜಾಸುರ, ಮಹಿಷಾಸುರ ಮೊದಲಾದ ರಾಕ್ಷಸರನ್ನು ಧ್ವಂಸ ಮಾಡಿ ಜಗತ್ತನ್ನು ಪರಿಪಾಲಿಸಿದ್ದಾಳೆ".[೨೩] ಈ ಹಿನ್ನೆಲೆಯಲ್ಲಿಯೇ ಆದಿಶಕ್ತಿ, ಮಹಾಮಾಯೆ, ಜಗನ್ಮಾತೆ ಎಂದು ಪ್ರಾಚೀನ ಕಾಲದಿಂದಲೂ ದೇವಿಯನ್ನು ಆರಾಧಿಸುತ್ತಾ, ಸ್ತುತಿಸುತ್ತಾ ಬಂದಿರುವುದನ್ನು ಕಾಣುತ್ತೇವೆ.

ನವರಾತ್ರಿ-ವಿಜಯದಶಮಿಯ ಈ ದಿನಗಳಲ್ಲಿ ಶಕ್ತಿ ಸ್ವರೂಪಿಣಿಯಾದ ದುರ್ಗೆ, ಕಾಳಿ, ಲಕ್ಷ್ಮೀ, ಸರಸ್ವತಿ, ಅಂಬಾಭವಾನಿ, ದೇವತೆಗಳನ್ನು ಹಿಂದೂಗಳು ಆರಾಧನೆ ಮಾಡುತ್ತಾರೆ. ಶಕ್ತಿದೇವತೆಗಳ ಕೃಪೆಯಿಲ್ಲದೇ ಯಾವದೂ ಸಾಧ್ಯವಿಲ್ಲ. ಮಳೆ, ಬೆಳೆ, ಧನ, ಸಂತಾನ, ಶ್ರೇಯಸ್ಸು, ಮೊದಲಾದವುಗಳೆಲ್ಲಾ ಪ್ರಾಪ್ತಿಯಾಗುವದು, ದೇವಿಯ ಕೃಪೆಯಿಂದಲೇ ಎಂಬ ನಂಬಿಕೆಯೂ ಬಲವಾಗಿ ಬೆಳೆದು ಬಂದಿದೆ. ಈ ಹಬ್ಬವನ್ನು ದೇಶದಾದ್ಯಂತ ಮಹಾನವಮಿ, ನವರಾತ್ರಿ, ದಸರಾಹಬ್ಬ, ವಿಜಯದಶಮಿ ಎಂದು ಆಚರಿಸುವದರ ಜೊತೆಗೆ ಕರ್ನಾಟಕದಲ್ಲಿ ಈ ಹಬ್ಬವನ್ನು 'ನಾಡಹಬ್ಬ'ವೆಂದೇ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಈ ದಿನಗಳಂದು ಸುಖ-ಸಂಪತ್ತು, ಬಲಸಂವರ್ಧನೆ, ಶತ್ರುವಿನಾಶ, ದುಷ್ಟ ಭಾವನೆಗಳ ನಿವಾರಣೆ, ಮೊದಲಾದವುಗಳಿಗೆ ಶಕ್ತಿದೇವತೆಯನ್ನು ಆರಾಧನೆ ಮಾಡಬೇಕು. ಮನೆ-ಮನೆಗಳಲ್ಲಿ, ದೇವಿಯ ಗುಡಿಗಳಲ್ಲಿ ದೇವಿಭಾಗವತ ಪಾರಾಯಣ, ದೇವಿಪೂಜಾಧಿಗಳನ್ನು ಭಕ್ತಿ-ಶ್ರದ್ಧೆಯಿಂದ ನಡೆಸುತ್ತಾರೆ. ಕಾರಣ ಜ್ಞಾನ, ಐಶ್ವರ್ಯ, ಸಾಹಸ-ಸಂಪತ್ತುಗಳಿಗಾಗಿ ಶಕ್ತಿದೇವತೆಯನ್ನು ಆರಾಧಿಸುವ ಪರಿಪಾಠ ಬೆಳೆದು ಬಂದಿದೆ. ಕೊನೆಯ ದಿನ ವಿಜಯದಶಮಿಯು ಅತ್ಯಂತ ಪವಿತ್ರವಾದ ದಿನವಾಗಿದ್ದು, ಅಂದು ಶಮೀವೃಕ್ಷವನ್ನು/ಬನ್ನಿವೃಕ್ಷವನ್ನು ಪೂಜೆ ಮಾಡಿ ಸಾಯಂಕಾಲದ ಅವಧಿಯಲ್ಲಿ ಬನ್ನಿ ಪತ್ರವನ್ನು ಪರಸ್ಪರ ವಿನಿಮಯ ಮಾಡಿಕೊಂಡು 'ನಾವು-ನೀವು ಬಂಗಾರದಂತೆ ಇರೋಣ' ಎಂಬ ಶುಭಾಶಯವನ್ನು ಹಂಚಿಕೊಳ್ಳುವುದು ವಾಡಿಕೆಯಾಗಿದೆ.

ಹಿಂದೂಗಳೆಲ್ಲಾ ಆಚರಿಸುವ ಶಕ್ತಿ ದೇವತಾರಾಧನೆಯ ಈ ಹಬ್ಬವನ್ನು ಗೊಂದಲಿಗರು ಸಹ ಅತ್ಯಂತ ಶ್ರದ್ಧೆ-ಭಕ್ತಿಯಿಂದ ಆಚರಿಸುತ್ತಾರೆ. ಈ ಹಬ್ಬದ ಸಲುವಾಗಿ ಸಂಚಾರದಲ್ಲಿರುವ ಗೊಂದಲಿಗರು ತಮ್ಮ ಮೂಲ ನೆಲೆಗೆ ಬರುತ್ತಾರೆ. ಮನೆಯನ್ನೆಲ್ಲಾ ಸ್ವಚ್ಛ ಮಾಡಿ ಪ್ರತಿನಿತ್ಯ ದೇವಿಯ ಪೂಜೆ, ಆರಾಧನೆ ಮಾಡುತ್ತಾರೆ. ಕೆಲವರು ತಮ್ಮ ಮನೆಗಳಲ್ಲಿ ನವರಾತ್ರಿಯವರೆಗೂ ನಂದಾದೀಪವನ್ನು ಹಚ್ಚುತ್ತಾರೆ.

The Castes and Tribes of HEH The Nizam's Dominions- by syed siraj ull Hassan ಅವರು 'ಗೊಂದಳಿ' ಎನ್ನುವ ಜಾತಿ ವರ್ಗೀಕರಣದಲ್ಲಿ -'ಅಶ್ವಿನಿ ಮಾಸದಲ್ಲಿ ಬರುವ ನವರಾತ್ರಿ ಹಬ್ಬವನ್ನು ವೈಭವದಿಂದ ಅಂಬಾಭವಾನಿ, ರೇಣುಕಾದೇವಿಯರನ್ನು ಅತ್ಯಂತ ಶ್ರದ್ಧೆಯಿಂದ ಆಚರಿಸುತ್ತಾರೆ. ಹತ್ತನೆ ದಿನ ಹೋಮವನ್ನು ಹೊತ್ತಿಸಿ, ಮದ್ಯವನ್ನು ನೈವೇದ್ಯಿಸಿ ಕುರಿಗಳನ್ನು ತಮ್ಮ ರಕ್ಷಕ ದೇವತೆಗಳಿಗೆ ಬಲಿಕೊಡಲಾಗುತ್ತದೆ'. ಎಂಬ ವಿವರಣೆಯನ್ನು ಕೊಟ್ಟಿದ್ದಾರೆ. Encyclopae-

dia of Indian Tribes & Castes – Vol-7 Ed : Dr. Subhadra chnna ಅವರು– ಗೊಂದಳಿ ಎನ್ನುವ ಜಾತಿ ವರ್ಗೀಕರಣದಲ್ಲಿ 'ಗೋಂದಲಿಗರು ಹಿಂದೂ ಧರ್ಮಕ್ಕೆ ಸಂಬಂಧಪಟ್ಟವರಾಗಿದ್ದು ಮುಖ್ಯವಾಗಿ ತುಳಜಾಪುರದ ಅಂಬಾಭವಾನಿ, ಕೊಲ್ಲಾಪೂರದ ಅಂಬಾಬಾಯಿ, ರೇಣುಕಾ ಎಲ್ಲಮ್ಮ, ಮಾಹುರಗರದ ರೇಣುಕಾ ಹಾಗೂ ನದಿ–ಜಲ ದೇವತೆಗಳ ಆರಾಧಕರಾಗಿದ್ದಾರೆ. ವಿಜಯದಶಮಿ ಯೊಂದಿಗೆ ಮುಕ್ತಾಯವಾಗುವ ಒಂಬತ್ತು ದಿನಗಳ ನವರಾತ್ರಿಯು ಅವರ ಬಹುದೊಡ್ಡ ಹಬ್ಬವಾಗಿದೆ'. ಎನ್ನುವ ಮಾಹಿತಿಯನ್ನು ಕೊಟ್ಟಿದ್ದಾರೆ.

ಶಕ್ತಿದೇವತೆಯ ಪೂಜಕರಾಗಿರುವ ಗೊಂದಲಿಗರು ನವರಾತ್ರಿಯ ಈ ಹಬ್ಬದ ದಿನಗಳಂದು ಮನೆಯನ್ನು ಸ್ವಚ್ಛಮಾಡುವದರ ಜೊತೆಗೆ ದೇವಿಯ ಆರಾಧನೆಯನ್ನು ಮಾಡುತ್ತಾ ನಂದಾದೀಪವನ್ನು ಇಡುತ್ತಾರೆ. ಈ ದಿನಗಳಲ್ಲಿ ಸಾಮಾನ್ಯವಾಗಿ ಹೆಣ್ಣು ಮಕ್ಕಳು ಉಪವಾಸ ವೃತವನ್ನು ಮಾಡುತ್ತಾರೆ. ಕೆಲವೊಂದು ಕುಟುಂಬಗಳಲ್ಲಿ ದೇವಿಪುರಾಣವನ್ನು ಪಾರಾಯಣ ಮಾಡುತ್ತಾರೆ. ಕೊನೆಯ ವಿಜಯ ದಶಮಿಯ ದಿನದಂದು ಕುರಿ ಬಲಿಯನ್ನು ಕೊಟ್ಟು ದೇವಿಗೆ ನೈವೇದ್ಯಮಾಡಿ ಎಲ್ಲರೂ ಒಟ್ಟುಗೂಡಿ ಸೇವಿಸುತ್ತಾರೆ. ಸಾಯಂಕಾಲದಂದು ಬನ್ನಿ ಪತ್ರಿಯನ್ನು ಪ್ರತಿಯೊಬ್ಬರಿಗೂ ವಿನಿಮಯ ಮಾಡಿಕೊಳ್ಳುತ್ತಾ, ತಮ್ಮ ತಮ್ಮ ನಡುವಿನ ವೈಮನಸ್ಸುಗಳನ್ನು ಮರೆತು ಒಟ್ಟುಗೂಡಿ ಸಾಮರಸ್ಯದಿಂದ ಬದುಕೋಣ ಎಂಬ ಶುಭಾಶಯವನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ವಿಶೇಷವಾಗಿ ಈಸಂದರ್ಭದಲ್ಲಿ ಕೆಲವು ಕುಟುಂಬದವರು ಇಲ್ಲವೇ ಅವರಿರುವ ಓಣಿಗಳಲ್ಲಿಯ ದುರ್ಗಾದೇವಿ ಅಥವಾ ಅಂಬಾಭವಾನಿ ದೇವಸ್ಥಾನಗಳಲ್ಲಿ ಘಟ್ಟ ಹಾಕುವದು ಅಥವಾ ಘಟಸ್ಥಾಪನೆ ಮಾಡುತ್ತಾರೆ.

**ಘಟಸ್ಥಾಪನೆ :** ಮಹಾನವಮಿಯ ಹಬ್ಬವು ಬರುವದಕ್ಕಿಂತ ಪೂರ್ವದಲ್ಲಿ ಕುಂಬಾರರ ಮನೆಯಿಂದ ಎರಡು ಹೊಸ ಮಣ್ಣಿನ ತಟ್ಟೆ ಅಥವಾ ಕುಂಡಗಳನ್ನು ತೆಗೆದುಕೊಂಡು ಬಂದು ಅದರಲ್ಲಿ ಮಣ್ಣು ಹಾಕಿ ಜೋಳ, ಗೋದಿ, ರಾಗಿ, ನವಣೆ, ಭತ್ತ ಇತ್ಯಾದಿ ೫ ಧಾನ್ಯಗಳನ್ನು ಬಿತ್ತುತ್ತಾರೆ. ಹಬ್ಬದ ದಿನದಂದು ಮೊಳಕೆ ಹೊಡೆದ ಸಸಿಗಳನ್ನು ದೇವಿಯ ಮುಂದೆ ಇಟ್ಟು ಅದರ ಮೇಲೆ ಕಳಸವನ್ನು ಕೂರಿಸುತ್ತಾರೆ. ಕಳಸವು ಮಣ್ಣಿನ ಚೆಂಬಿನದಾಗಿರಬಹುದು. ಇಲ್ಲವೇ ತಾಮ್ರದ್ದು ಆಗಿರಬಹುದು. ಈ ರೀತಿ ಸ್ಥಾಪನೆ ಮಾಡುವುದೇ 'ಘಟಸ್ಥಾಪನೆ' ಆಗಿದೆ. ಅಂದು ದೇವಿಯ ಮುಂದೆ ಹಚ್ಚಿದ ದೀಪವು ನಂದದಂತೆ ಒಂಬತ್ತು ದಿನಗಳವರೆಗೂ ಆ ಜ್ಯೋತಿಯನ್ನು ಕಾಯ್ದುಕೊಂಡು ಬರುತ್ತಾರೆ. ನವರಾತ್ರಿಯ ಈ ಎಲ್ಲಾ ದಿನಗಳಲ್ಲಿ ಪ್ರತಿನಿತ್ಯ ಸ್ನಾನ, ದೇವಿಯ ಪೂಜೆಯನ್ನು ಮಾಡುತ್ತಾರೆ. ವಿಜಯದಶಮಿಯ ದಿನದಂದು ಗಂಗೆಗೆ ಪೂಜೆ ಮಾಡಿ ಗೊಂದಳದ ಸಂಬಾಳ, ಚೌಡಿಕೆ ಬಾರಿಸುತ್ತಾ, ದೇವಿಯ ಪದಗಳನ್ನು ಹಾಡುತ್ತಾ ಮೆರವಣಿಗೆಯ ಮೂಲಕ ದೇವಸ್ಥಾನಕ್ಕೆ ಬಂದು ಪೂಜೆ ಸಲ್ಲಿಸುತ್ತಾರೆ. ನಂತರ ಕುರಿಬಲಿ ಕೊಟ್ಟು ನೈವೇದ್ಯ ಮಾಡುವರು. ಇದೇ ಸಂದರ್ಭದಲ್ಲಿ ಗೊಂದಲ ಪೂಜೆಯನ್ನು ಮಾಡುತ್ತಾರೆ. ಕೆಲವರು ಗೊಂದಲದ ಹರಕೆಯನ್ನು ಹೊತ್ತಿದ್ದರೆ, ಈ ಹಬ್ಬದಂದೇ ಆಚರಿಸುವುದು ವಾಡಿಕೆ. ಹಬ್ಬಗಳಲ್ಲಿ ವಿಶೇಷವಾಗಿರುವ ಈ ಹಬ್ಬವು ಮದ–ಮತ್ಸ್ಯರ,

ದ್ವೇಷಾಸೂಯೆಗಳನ್ನು ಅಳಿಸಿ ಹಾಕಿ ಶಾಂತಿ ಸೌಹಾರ್ದತೆ, ಪ್ರೀತಿ-ವಿಶ್ವಾಸ, ಸಹೋದರತ್ವದ ಭಾವನೆಗಳನ್ನು ಬೆಳೆಸಿಕೊಳ್ಳುವ ಸಂದೇಶವನ್ನು ಸಾರುತ್ತದೆ ಎನ್ನುವಂತೆ ಬನ್ನಿ ಮುಡಿಯುವ ಈ ವಿಜಯದಶಮಿಯ ದಿನದಂದು ದಕ್ಷಿಣ ದಿಕ್ಕಿನಲ್ಲಿರುವ ಬನ್ನಿಗಿಡಕ್ಕೆ ಹೋಗಿ ಬನ್ನಿ ಪೂಜೆ ಮಾಡಿ, ಬನ್ನಿ ಗಿಡದ ಪತ್ರಿ, ಎಲೆಗಳನ್ನು ತಂದು ಎಲ್ಲರೂ ವಿನಿಮಯ ಮಾಡಿಕೊಂಡು 'ನಾವು ನೀವು ಬಂಗಾರದ ಹಾಗೆ ಇರೋಣ' ಎಂದು ಶುಭಾಶಯಗಳನ್ನು ಪರಸ್ಪರ ಹಂಚಿಕೊಳ್ಳುವರು.

**ದೀಪಾವಳಿ** : "ದೀಪಾವಳಿಯು ದೀಪಗಳ ಅಥವಾ ಬೆಳಕಿನ ಹಬ್ಬ. ಕತ್ತಲೆಯನ್ನು ಹೋಗಲಾಡಿಸುವ ಹಬ್ಬ. ಮನೆ-ಮನೆಯ, ಮನ-ಮನದ ಕತ್ತಲೆಯನ್ನು ನಿವಾರಿಸಿ, ಬೆಳಕನ್ನು ಉಂಟುಮಾಡುವ ಹಬ್ಬ. ದೀಪಾವಳಿಯ ಹಬ್ಬವನ್ನು ನರಕಚತುರ್ದಶಿಯಿಂದ ಪ್ರಾರಂಭವಾಗಿ ಮೂರು ದಿನಗಳವರೆಗೆ ಆಚರಿಸುತ್ತಾರೆ. ಅಶ್ವಿಜ ಹಾಗೂ ಕಾರ್ತಿಕಮಾಸಗಳ ಮಧ್ಯದ ಅವಧಿಯಲ್ಲಿ ಬರುವ ಈ ಹಬ್ಬವನ್ನು ಹಟ್ಟಿ ಹಬ್ಬವೆಂದೂ, ನೀರು ತುಂಬುವ ಹಬ್ಬವೆಂತಲೂ, ಲಕ್ಷ್ಮೀಹಬ್ಬವೆಂತಲೂ ಆಚರಿಸುತ್ತಾರೆ. ದೇಶದ ಉದ್ದಗಲಕ್ಕೂ ಹಿಂದೂಗಳೆಲ್ಲರೂ ಈ ಹಬ್ಬವನ್ನು ಸಡಗರ-ಸಂಭ್ರಮದಿಂದ ಆಚರಿಸುತ್ತಾ ಬಂದಿದ್ದಾರೆ".[೨]

ನರಕ ಚತುರ್ದಶಿಯಂದು ನರಕಾಸುರನ ಸಂಹಾರಮಾಡಿದ ಸವಿನೆನಪಿಗಾಗಿ ಆಚರಿಸಿದರೆ, ದೀಪಾವಳಿಯ ಅಮಾವಾಸ್ಯೆಯಂದು ಲಕ್ಷ್ಮೀಪೂಜೆ ಮಾಡುತ್ತಾರೆ. ಅಂದು ವ್ಯಾಪಾರ-ವ್ಯವಹಾರಗಳನ್ನು ಮಾಡುವವರು ರಾತ್ರಿಯಿಡಿ ಅಂಗಡಿಗಳಲ್ಲಿ ಲಕ್ಷ್ಮೀಪೂಜೆಯನ್ನು ಮಾಡುತ್ತಾರೆ. ಸಚ್ಚಿದಾನಂದ ಶಕ್ತಿಯ ವಿಶ್ವಮಯಿಯಾದ, ಸಕಲ ಶ್ರೇಯಸುಗಳಿಗೆ ಕಾರಣಕರ್ತಳಾದ, ಜ್ಯೋತಿ ಸ್ವರೂಪಕ್ಕೆ ಸಮಾನಳಾದ ಲಕ್ಷ್ಮೀದೇವಿಯನ್ನು ಸರ್ವಾಲಂಕಾರ ಭೂಷಿತಳನ್ನಾಗಿ ಹೂವು-ಹಣ್ಣುಗಳಿಂದ ಪೂಜೆ ಸಲ್ಲಿಸುತ್ತಾರೆ. ಮರುದಿನ ಪಾಡ್ಯದಂದು ಸರಸ್ವತಿಯ ಪೂಜೆಯನ್ನು ಮಾಡುವದರ ಜೊತೆಗೆ ಕೆಲವು ಕುಟುಂಬಗಳಲ್ಲಿ ಆಕಳ ಸೆಗಣಿಯಿಂದ ಹಟ್ಟಿ ಹಾಕುವ ಸಂಪ್ರದಾಯವನ್ನು ಕಾಣುತ್ತೇವೆ. ನರಕ ಚತುರ್ದಶಿ ಮತ್ತು ಪಾಡ್ಯದ ದಿನ ಸಹೋದರಿಯರು ಸಹೋದರರಿಗೆ ಆರತಿ ಮಾಡುವ ಸಂಪ್ರದಾಯವು ಇದೆ. ಪಾಡ್ಯದ ದಿನವನ್ನು ಬಲಿಪಾಡ್ಯವೆಂದು ಕರೆಯುತ್ತಿದ್ದು, ಬಲಿ ಚಕ್ರವರ್ತಿಯ ದಾನ-ವೀರಗುಣಗಳನ್ನು ನೆನಪಿಸಿಕೊಳ್ಳುವ ದಿನವು ಇದಾಗಿದೆ.

ಗೊಂದಲಿಗರು ಶಕ್ತಿದೇವಿಯ ಆರಾಧಕರಾಗಿರುವದರಿಂದ ಲಕ್ಷ್ಮೀ-ಸರಸ್ವತಿ ದೇವಿಯರ ಆರಾಧನಾ ಹಬ್ಬವಾಗಿರುವ ದೀಪಾವಳಿಯನ್ನು ಆಚರಿಸುತ್ತಾರೆ. ಇತ್ತಿತ್ತಲಾಗಿ ವ್ಯಾಪಾರ-ವ್ಯವಹಾರಗಳಲ್ಲಿ ತೊಡಗಿಕೊಂಡಿರುವ ಗೊಂದಲಿಗರು ಅಂಗಡಿಯಲ್ಲಾಗಲೀ, ಮನೆಯಲ್ಲಾಗಲೀ ಲಕ್ಷ್ಮೀಪೂಜೆಯನ್ನು ಮಾಡುತ್ತಾರೆ. ಹಿಂದೂಗಳಲ್ಲಿ ಆಚರಿಸುವಂತೆ ನರಕಚತುರ್ದಶಿ ಹಾಗೂ ಪಾಡ್ಯದ ದಿನದಂದು ಮುಂಜಾನೆಯ ಸಮಯದಲ್ಲಿ ಅಕ್ಕ ತಂಗಿಯರು ತಮ್ಮ ಅಣ್ಣ ತಮ್ಮಂದಿರಿಗೆ ಆರತಿಯನ್ನು ಬೆಳಗಿ ಶುಭ ಹಾರೈಸುತ್ತಾರೆ. ಸಹೋದರರು ಆರತಿಯ ತಟ್ಟೆಗೆ ಕಾಣಿಕೆಯನ್ನು ನೀಡಿ, ಸಹೋದರಿಯರಿಗೆ ನಮಸ್ಕರಿಸುತ್ತಾರೆ. ಈ ಹಬ್ಬದ ಸಂದರ್ಭದಲ್ಲಿ ಹೊಸದಾಗಿ ಮದುವೆಯಾಗಿ ಗಂಡನ ಮನೆಗೆ ಹೋಗಿರುವ ಹೆಣ್ಣುಮಕ್ಕಳು

ತವರು ಮನೆಗೆ ಬರುವುದು, ಪಾಡ್ಯದ ದಿನದಂದು ಅಳಿಯನು ಬರುವುದು, ಇತ್ತಿತ್ತಲಾಗಿ ಬೆಳೆದು ಬಂದಿರುವ ವಾಡಿಕೆಯಾಗಿದೆ. ಗೊಂದಲಿಗರ ಕಲೆಯನ್ನು ಕಲಿಯಲು ಸಹ ಈ ದಿನವೂ ಪ್ರಶಸ್ತವಾಗಿದೆ ಎಂಬ ನಂಬಿಕೆಯು ಬೆಳೆದು ಬಂದಿದೆ. ಅಂದರೆ ಗೊಂದಲ ಪೂಜೆ, ಜ್ಯೋತಿಷ್ಯ, ಬುಡಬುಡಿಕೆ ವಿದ್ಯೆಯನ್ನು ಗೋಮಾತೆಯ ಪೂಜೆಯನ್ನು ಮಾಡಿ ತಮ್ಮ ಹಿರಿಯರಿಂದ ಹೇಳಿಸಿಕೊಳ್ಳುವರು.

**೪.೨.೨. ಜಾತ್ರೆಗಳು**

**ದುರ್ಗಾದೇವಿಯ ಜಾತ್ರೆ (ಆಷಾಢದ ಹಬ್ಬ)** : ಗೊಂದಲಿಗರು ವರ್ಷ ಪೂರ್ತಿ ಸಂಚಾರದಲ್ಲಿದ್ದರೂ, ಆಷಾಢ ಮಾಸದಲ್ಲಿ ಮಾತ್ರ ಕಡ್ಡಾಯವಾಗಿ ತಮ್ಮ-ತಮ್ಮ ಕುಟುಂಬದ ಸದಸ್ಯರೊಡಗೂಡಿ ತಮ್ಮ ಮೂಲ ನೆಲೆಗೆ ಬರಲೇಬೇಕಲ್ಲದೇ, ಈ ಅವಧಿಯಲ್ಲಿ ಸಮುದಾಯದವರೊಡಗೂಡಿ ಒಟ್ಟಾಗಿ ದೇವಿಯ ಆರಾಧನೆ ಮಾಡುವುದು, ಜಾತ್ರೆಯನ್ನು ಮಾಡುವುದು, ಪ್ರಾರಂಭದಿಂದಲೂ ಬೆಳೆಸಿಕೊಂಡು ಬಂದ ಸತ್‌ಸಂಪ್ರದಾಯವನ್ನು ಈಗಲೂ ಮುಂದುವರೆಸಿಕೊಂಡು ಬಂದಿದ್ದಾರೆ. ತಮ್ಮ-ತಮ್ಮ ಮೂಲ ನೆಲೆಯಲ್ಲಿರುವ ದುರ್ಗಾದೇವಿ ಅಥವಾ ದುರ್ಗವ್ವನ ಹಬ್ಬವನ್ನು ಎರಡು ವರ್ಷಕ್ಕೊಮ್ಮೆ ಯಾಗಲೀ, ಕೆಲವರು ಮೂರು ವರ್ಷಕ್ಕೊಮ್ಮೆ ಆಚರಿಸುತ್ತಾರೆ.

ಆಷಾಢದ ಮಾಸದಲ್ಲಿ ಈ ರೀತಿಯ ದೇವಿಯ ಆರಾಧನೆ ಜಾತ್ರೆಯನ್ನು ಮಾಡುವುದು, ವಿಶೇಷವಾಗಿ ಗೊಂದಲಿಗರ ಸಮುದಾಯಗಳಲ್ಲಿ ಮಾತ್ರ ಕಂಡುಬರುತ್ತದೆ. ಇದು ಗ್ರಾಮದೇವತೆಯ ಆರಾಧನೆಯೂ ಆಗಿದೆ. ಸಾಮಾನ್ಯವಾಗಿ ಆಷಾಢಮಾಸದ ಕೊನೆಯಲ್ಲಿ ಅಥವಾ ಶ್ರಾವಣಮಾಸದ ಪ್ರಾರಂಭದಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ. ಈ ಮಾಸವನ್ನು ವ್ಯವಸಾಯ ಪ್ರಧಾನ ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ 'ಅನ್ನದೇವಿಯ ಕಾಲ' ಎಂದೇ ಕರೆಯುತ್ತಾರೆ. ರೈತರು ತಮ್ಮ-ತಮ್ಮ ವ್ಯವಸಾಯದ ಕಾರ್ಯಗಳನ್ನು ಪ್ರಾರಂಭಿಸುವ ಅವಧಿಯೂ ಇದಾಗಿದೆ.

ಗೊಂದಲಿಗರ ಸಮುದಾಯದ ಪಂಚರೆಲ್ಲಾ ನಿರ್ದಿಷ್ಟ ದಿನದಂದು ಸಭೆ ಸೇರಿ ಆಷಾಡಮಾಸದಲ್ಲಿ ದುರ್ಗಾದೇವಿ/ದುರ್ಗವ್ವನ ಹಬ್ಬ / ಜಾತ್ರೆಯನ್ನು ಯಾವ ದಿನದಂದು ಆಚರಿಸಬೇಕು ಎಂಬುದನ್ನು ಚರ್ಚಿಸಿ ಕೈಗೊಳ್ಳಬೇಕಾದ ಅಥವಾ ಆಚರಿಸಬೇಕಾದ ರೀತಿ-ರಿವಾಜುಗಳು ಹಾಗೂ ಕಾರ್ಯ ಚಟುವಟಿಕೆ ಗಳಿಗೆ ಸಂಬಂಧಪಟ್ಟಂತೆ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಸಾಮಾನ್ಯವಾಗಿ ಈ ಹಬ್ಬವನ್ನು ಮಂಗಳವಾರ ಅಥವಾ ಶುಕ್ರವಾರದಂದು ಆಚರಿಸಬೇಕೆಂಬ ನಿರ್ಧಾರವನ್ನು ಕೈಗೊಳ್ಳುತ್ತಾರೆ. ಈ ಹಬ್ಬಕ್ಕಾಗಿ ಊರಿಗೆ ಸಂಬಂಧಪಟ್ಟ ಗೊಂದಲಿಗರು ಯಾವುದೇ ಊರಿನಲ್ಲಿ, ರಾಜ್ಯದಲ್ಲಿ ನೆಲೆಯನ್ನು, ಉದ್ಯೋಗವನ್ನು ಕಂಡು ಕೊಂಡಿದ್ದರೂ, ಅವಾಗ್ಗೆ ಕುಟುಂಬದಲ್ಲಿಯ ಚಿಕ್ಕ ಮಕ್ಕಳಾದಿಯಾಗಿ ಎಲ್ಲಾ ಸದಸ್ಯರು ಕಡ್ಡಾಯವಾಗಿ ಬರಲೇಬೇಕು (ಶ್ರೀ ಜ್ಞಾನೇಶ್ವರ ಬಾಗಲೇ ವಯಸ್ಸು ೬೦, ಭಾಂಡೆ ವ್ಯಾಪಾರ- ಇವರು ಗೋವಾದಲ್ಲಿ ಕುಟುಂಬ ಸಮೇತರಾಗಿ ಅಲ್ಲಿಯೇ ನೆಲೆಗೊಂಡಿದ್ದು, ಭಾಂಡೇ ವ್ಯಾಪಾರವನ್ನು ಮಾಡುತ್ತಿದ್ದಾರೆ. ಇವರ ಮೂಲ ಸ್ಥಾನ ಗದಗ ಜಿಲ್ಲೆಯ ನರಗುಂದ ತಾಲೂಕಿನ ಕೊಣ್ಣೂರ ಗ್ರಾಮ. ಇಲ್ಲಿಗೆ ಪ್ರತಿ ಎರಡು ವರ್ಷಗಳಿಗೊಮ್ಮೆ ಬಂದು ದುರ್ಗವ್ವನ ಜಾತ್ರೆಯನ್ನು

ಮಾಡುತ್ತಾರೆ. ನಂತರ ಕುಟುಂಬದ ಚಿಕ್ಕ ಮಕ್ಕಳು ಸಹಿತ ಎಲ್ಲಾ ಸದಸ್ಯರು ಬರಬೇಕು ಇಲ್ಲದಿದ್ದರೆ. ದಂಡ ಅಥವಾ ಬಹಿಷ್ಕಾರಕ್ಕೆ ಒಳಗಾಗಬೇಕಾಗುತ್ತದೆ ಎಂಬ ಮಾಹಿತಿಯನ್ನು ನೀಡಿದ್ದಾರೆ.)

ಗೊಂದಲಿಗರು ಆಷಾಢದಲ್ಲಿ ಆಚರಿಸುವ ಹಬ್ಬವನ್ನು ಮೂರು ದಿನಗಳವರೆಗೆ ಆಚರಣೆಯನ್ನು ಮಾಡುತ್ತಾರೆ. ಸಾಮಾನ್ಯವಾಗಿ ಆಚರಿಸುವ ಈ ಹಬ್ಬಕ್ಕಾಗಿ ಹೊಸದಾಗಿ ಮರದಿಂದ ಕುದುರೆಯ ಮೇಲೆ ಕುಳಿತು ದೇವಿಯ ಮೂರ್ತಿಯನ್ನು ಮಾಡಿಸಿ ಬಣ್ಣದಿಂದ ಅಲಂಕಾರ ಮಾಡಿ ಬಂಡಿ ಅಥವಾ ಪುಟ್ಟಗಾಡಿಯಲ್ಲಿ ಮೆರವಣಿಗೆ ಮಾಡುತ್ತಾ ತಾತ್ಕಾಲಿಕವಾಗಿ ನಿರ್ಮಿಸಿರುವ ಅಥವಾ ಓಣಿಯಲ್ಲಿ ಇರುವ ದೇವಿಯ ಗುಡಿಯಲ್ಲಿ ಪ್ರತಿಷ್ಠಾಪಿಸಿ, ಆ ದೇವಸ್ಥಾನವನ್ನು ಬಾಳೆಕಂಬ, ಕಬ್ಬು, ಹೂ, ದೀಪಗಳಿಂದ ಅಲಂಕೃತಗೊಳಿಸಿರುತ್ತಾರೆ. ಪ್ರಾರಂಭದ ದಿನ ಎಲ್ಲರೂ ದೇವಿಗೆ ಸಿಹಿ ಅಡುಗೆ, ಹಣ್ಣು-ಕಾಯಿ ಅರಿಷಿಣ-ಕುಂಕುಮಗಳೊಂದಿಗೆ ನೈವೇದ್ಯ ಮಾಡುವರು. ಮರುದಿನ ದೇವಿಯನ್ನು ಸರ್ವಾಲಂಕಾರ ಮಾಡಿ, ದೇವಿಯ ಗುಡಿಯ ಮುಂದೆ ಆಡು-ಕುರಿಗಳನ್ನು ಬಲಿ ಕೊಡುತ್ತಾರೆ. ಈ ಸಂದರ್ಭದಲ್ಲಿ ಓಣಿಯವರೆಲ್ಲರೂ ಡೊಳ್ಳು-ಕುಣಿತಗಳೊಂದಿಗೆ ಎಲ್ಲ ಹೆಣ್ಣು ಮಕ್ಕಳು ಹೊಸ ಬಟ್ಟೆಗಳನ್ನು ಹಾಕಿಕೊಂಡು ಬುಟ್ಟಿಯಲ್ಲಿ ಉಡಿತುಂಬುವ ಸಾಮಾನುಗಳನ್ನು ತೆಗೆದುಕೊಂಡು ಮೆರವಣಿಗೆಯ ಮೂಲಕ ಊರಿನಲ್ಲಿರುವ ಎಲ್ಲಾ ದೇವರುಗಳಿಗೆ ಉಡಿ ತುಂಬಿ, ನಂತರ ಪ್ರತಿಷ್ಠಾಪಿಸಿರುವ ದೇವಿಯ ಸನ್ನಿಧಿಗೆ ಬಂದು ಸೀರೆ-ಕುಪ್ಪಸ ಉಡಿಯನ್ನು ತುಂಬುವರು. ಈ ಸಂದರ್ಭದಲ್ಲಿ ಓಣಿಯ ಹಿರಿಯರು ಯುವಕರು ಮಕ್ಕಳಾದಿಯಾಗಿ ಎಲ್ಲರೂ ಅರಿಷಿಣ ಭಂಡಾರವನ್ನು ಹಚ್ಚಿಕೊಳ್ಳುತ್ತಾರೆ ಮತ್ತು ಪರಸ್ಪರ ಒಬ್ಬರಿಗೊಬ್ಬರು ಎರಚಾಡುತ್ತಾರೆ. ದೇವಿಗೆ ಬಲಿಕೊಟ್ಟ ಪ್ರಾಣಿಗಳೆಲ್ಲವನ್ನು ತೆಗೆದುಕೊಂಡು ಸಾಮೂಹಿಕವಾಗಿ ಒಂದು ಸ್ಥಳದಲ್ಲಿ ಅಡುಗೆ ತಯಾರಿಸಿ, ಸಮುದಾಯದ ಎಲ್ಲರೂ ಸಾಮೂಹಿಕವಾಗಿ ಸೇವನೆ ಮಾಡುವರು. ಗೊಂದಲಿಗರೆಲ್ಲರೂ ಸೇರಿ ಆಷಾಢದ ಈ ಹಬ್ಬವು ಅತ್ಯಂತ ಸಂಭ್ರಮದಿಂದ-ಸಡಗರದಿಂದ ಆಚರಿಸುತ್ತಿರುವ ಹಬ್ಬವಾಗಿದೆ. ಈ ಹಬ್ಬದಲ್ಲಿ ಮಾಂಸದ ಅಡಿಗೆಯನ್ನು ಮಾಡಲೇಬೇಕು. ಮೊದಲು ಈ ಹಬ್ಬದಂದು ಕೋಣವನ್ನು ಬಲಿ ಕೊಡುತ್ತಿದ್ದರಂತೆ. ಆದರೆ ಈಗ ಆಡು-ಕುರಿ ಕೋಳಿಗಳ ಬಲಿ ಕೊಡುತ್ತಾರೆ. ಸಾಯಂಕಾಲ ಗೊಂದಲದ ಪೂಜೆ ಮಾಡುವುದರ ಜೊತೆಗೆ ಕಲಾವಿದರ ಮೂಲಕ ಬೆಳತನಕ ಗೊಂದಲದ ಹಾಡು-ಕಥೆಗಳನ್ನು ಹೇಳಿಸುತ್ತಾರೆ. ಈ ಹಬ್ಬಕ್ಕೆ ತಮ್ಮ ತಮ್ಮ ಸಂಬಂಧಿಕರನ್ನು ಕರೆಯಿಸುತ್ತಾರೆ. ಕೆಲ ಪ್ರದೇಶಗಳಲ್ಲಿ ಈ ಹಬ್ಬದಂದು "ದೇವತೆಗೆ ಹೋತವನ್ನು, ಉಣ್ಣೆ ಗುರಿಯನ್ನೋ ಬಲಿ ಕೊಡುತ್ತಾರೆ. ಈ ಬಲಿಯು ಇತರ ಬಲಿಗಳಂತಲ್ಲ, ಅದಕ್ಕಾಗಿಯೇ ಮೀಸಲಾಗಿರುವ ದೊಡ್ಡ ಮಚ್ಚಿನಿಂದ ಒಂದೇ ಏಟಿಗೆ ನಡುದೇಹಕ್ಕೆ ಹೊಡೆಯುತ್ತಾರೆ. ತಲೆ ಮತ್ತು ಮುಂದಿನ ಕಾಲುಗಳು ಒಂದುಕಡೆಗೆ, ಹಿಂದಿನ ಕಾಲುಗಳು ಉಳಿದರ್ಧ ದೇಹದೊಂದಿಗೆ ಇನ್ನೊಂದು ಕಡೆಗೆ ಬೀಳುತ್ತದೆ. ಈ ಬಲಿಯ ಕೆಲಸ ಮುಗಿದ ಮೇಲೆ ದುರ್ಗವ್ವನ ಮೂರ್ತಿಯನ್ನು ಗಾಡಿ ಸಹಿತ ಹೊತ್ತು ಊರಿನ ದಕ್ಷಿಣ ದಿಕ್ಕಿನಲ್ಲಿರುವ ದುರ್ಗವ್ವನದೇ ಸ್ಥಿರ ಗುಡಿಯಲ್ಲಿ ಬಿಟ್ಟು, ಅಲ್ಲಿಯೂ ಬಲಿಕೊಟ್ಟು ಬರುತ್ತಾರೆ".[೨]

ಗೊಂದಲಿಗ ಸಮುದಾಯದ ಹಿರಿಯ ಪಂಚರು, ಎಲ್ಲಾರು ಸಭೆ ಸೇರಿ ಯಾವುದೇ ರೀತಿ ಕಂಡುಬಂದ ವ್ಯಾಜ್ಯಗಳನ್ನು ಕುರಿತು ನ್ಯಾಯ-ನಿರ್ಣಯಗಳನ್ನು ಮಾಡಿ ಸಮುದಾಯದಲ್ಲಿ ಸಾಮರಸ್ಯ ಉಂಟು ಮಾಡುವ ಪ್ರಯತ್ನ ಮಾಡುತ್ತಾರೆ. ಆ ಮೇಲೆ ಎಲ್ಲರೂ ತಮ್ಮ ತಮ್ಮ ಉದ್ಯೋಗದ ಸ್ಥಳಗಳಿಗೆ ತಿರುಗಿ ಹೋಗುವರು.

**೪.೨.೩. ಇತರೆ ಹಬ್ಬಗಳು**

ಗೊಂದಲಿಗರ ಸಮುದಾಯದ ಹಿರಿಯರನ್ನು ಕೇಳಿದಾಗ ಸಾಮಾನ್ಯವಾಗಿ ಹಿಂದುಗಳು ಆಚರಿಸುವ ಎಲ್ಲ ಹಬ್ಬಗಳನ್ನು ಅಂದರೆ ಅಮಾವಾಸ್ಯೆ ಹುಣ್ಣಿಮೆಗಳನ್ನು ನಾವು ಆಚರಿಸುತ್ತೇವೆ. ಅಂದು ಮನೆಯನ್ನು ಸ್ವಚ್ಛ ಮಾಡುವುದರ ಜೊತೆಗೆ ಸಿಹಿ ಅಡುಗೆಯನ್ನು ಮಾಡಿ ದೇವರಿಗೆ ನೈವೇದ್ಯ ಮಾಡುತ್ತೇವೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ದೇವಿ ಆರಾಧನೆಯ ಹಬ್ಬಗಳನ್ನು ಆಚರಿಸುವುದರ ಜೊತೆಗೆ ಇತರ ಹಬ್ಬಗಳನ್ನು ಆಚರಿಸುವ ಗೊಂದಲಿಗರು **ಕಾಮನ ಹಬ್ಬ** ಅಥವಾ **ಹೋಳಿ ಹಬ್ಬ**ವನ್ನೂ ಆಚರಿಸುತ್ತಾರೆ.

ಹಿಂದೂ ಸಾಂಸ್ಕೃತಿಕ ಪರಂಪರೆಯಲ್ಲಿ ಆಚರಿಸುತ್ತಿರುವ ಹಬ್ಬಗಳಲ್ಲಿ ಕೊನೆಯ ಹಬ್ಬವೇ ಹೋಳಿಹಬ್ಬವಾಗಿದೆ. ಹಿಂದೂ ಧರ್ಮದಲ್ಲಿ ಬೆಳೆದು ಬಂದ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ ಮೋಕ್ಷಗಳು ಜೀವನದ ಗುರಿಗಳಾಗಿವೆ. ಬದುಕಿನ ಅರ್ಥಪೂರ್ಣತೆಗೆ ಈ ಪುರುಷಾರ್ಥಗಳು ಆಧಾರವಾಗಿವೆ. ಈ ಹಿನ್ನೆಲೆಯಲ್ಲಿ ನಮ್ಮ ಋಷಿ-ಮುನಿಗಳು ಧರ್ಮ, ಅರ್ಥದ ಜೊತೆಗೆ ಪುರುಷಾರ್ಥಗಳಲ್ಲಿ ಕಾಮಕ್ಕೂ ಸ್ಥಾನ ಕೊಟ್ಟಿದ್ದಾರೆ. ಅಲ್ಲದೆ ಪ್ರತಿಯೊಂದು ದೇವಸ್ಥಾನಗಳ ಗೋಪುರಗಳಲ್ಲಿ ಕಾಮ ಪ್ರಚೋದಿತ ಮೂರ್ತಿಗಳ ಚಿತ್ರಗಳನ್ನು ಕೆತ್ತಿರುವುದನ್ನು ಕಾಣಬಹುದಾಗಿದೆ. ಈ ಹಬ್ಬದಂದು ಆಚರಿಸುವ ರತಿ-ಕಾಮ ಸ್ಮರಣೆ, ಕಾಮದಹನದ ಆಚರಣೆಯು ಧರ್ಮದಿಂದ ಪ್ರಚೋದಿತವಾದ ಕಾಮದ ಪೂರೈಕೆಯು ಸದ್ಗತಿಯನ್ನು ಕೊಡುವುದು. ನಮ್ಮ ಆಶೆ-ಆಕಾಂಕ್ಷೆಗಳಲ್ಲಿ ಧರ್ಮಸೂಕ್ಷ್ಮತೆಯನ್ನು ಒಳಗೊಂಡು ಅಂತರಂಗ-ಬಹಿರಂಗ ಶುದ್ಧಿಯಿಂದ ಪವಿತ್ರತೆಯುಂಟಾಗಬೇಕು ಎಂಬ ಸಂದೇಶವನ್ನು ಸಾರುವ ಕಾಮನ ಹಬ್ಬವು ಒಂದು ನಿತ್ಯ ಶಾಶ್ವತ, ಸತ್ಯದ ಬೆಳಕಿನ ಹಬ್ಬವಾಗಿದೆ.

ಇತರ ಸಮುದಾಯಗಳೊಂದಿಗೆ ತಮ್ಮದೇ ಆದ ಬದುಕನ್ನು ಕಳೆಯುತ್ತಿರುವ, ಕಟ್ಟಿಕೊಂಡಿರುವ ಗೊಂದಲಿಗರು ಇತರ ಸಮುದಾಯದವರ ಜೊತೆಗೂಡಿ ಈ ಹೋಳಿ ಹಬ್ಬವನ್ನು ಆಚರಿಸುತ್ತಾರೆ. ಬಾಗಲಕೋಟೆಯ ಜಿಲ್ಲೆಗಳಲ್ಲಿಯ ಅನೇಕ ಭಾಗಗಳಲ್ಲಿ ತಮ್ಮ ತಮ್ಮ ಓಣಿಗಳಲ್ಲಿ ರತಿ-ಕಾಮರ ಮೂರ್ತಿಯನ್ನು ಇಲ್ಲವೇ ಬಿಳಿ ಹಾಳೆಯಲ್ಲಿ ಅವರಿರುವ ಚಿತ್ರವನ್ನು ತೆಗೆದು ಪೂಜೆಯನ್ನು ಮಾಡಿ ಎಲ್ಲರೂ ಸೇರಿ ಕಾಮದಹನ ಮಾಡುತ್ತಾರೆ. ಕಾಮದಹನದ ನಂತರ ಪರಸ್ಪರ ಗಂಡಸರು ಬೂದಿಯನ್ನು ಎರಚುವದು, ಆನಂತರ ಒಬ್ಬರಿಗೊಬ್ಬರು ಬಣ್ಣವನ್ನು ಹಚ್ಚುತ್ತಾರೆ. ಅಷ್ಟೇ ಅಲ್ಲದೇ ರಣ ಹಲಗೆಗಳನ್ನು ಬಾರಿಸುತ್ತಾ ತಮ್ಮ ಬಂಧು ಬಳಗದವರಿಗೆ, ಸ್ನೇಹಿತರಿಗೆ ಬಣ್ಣ ಹಚ್ಚುವ ಪ್ರಯತ್ನ ಮಾಡುತ್ತಾರೆ. ಈ ಸಂದರ್ಭದಲ್ಲಿ ಗಂಡಸರು ವಿಕಾರ ರೂಪಗಳನ್ನು ತಳೆಯುವುದರ ಜೊತೆಗೆ

ಅವಾಚ್ಯ ಶಬ್ದಗಳಿಂದ ಒದರುತ್ತಾ ಬಾಯಿ-ಬಾಯಿ ಹೊಯ್ಕೊಳ್ಳುತ್ತಾರೆ, ಬಣ್ಣ ಎರಚುವುದು ಮುಗಿದ ನಂತರ ವಿವಿಧ ವೇಷಗಳ ಸೋಗು ಹಾಕಿಕೊಂಡು, ಊರ ತುಂಬಾ ಮೆರವಣಿಗೆಯ ರೂಪದಲ್ಲಿ ಹೋಗಿ ಬರುವರು. ಇತ್ತೀಚಿನ ದಿನಗಳಲ್ಲಿ ಹೊಸದಾಗಿ ಮದುವೆಯಾದ ದಂಪತಿಗಳು, ಹೆಣ್ಣು ಮಕ್ಕಳು ಸಹ ಬಣ್ಣ ಆಡುವುದರಲ್ಲಿ ತೊಡಗುವುದನ್ನು ಕಾಣುತ್ತೇವೆ.

**ಮೊಹರಂ** : ಹಿಂದೂ ಹಬ್ಬಗಳನ್ನು ಆಚರಿಸುವುದರ ಜೊತೆಗೆ ಗೊಂದಲಿಗರು ಆಚರಿಸುವ ಇತರ ಹಬ್ಬಗಳಲ್ಲಿ ಪ್ರಮುಖವಾಗಿ ಭಾವೈಕ್ಯತೆಯ ಸಂಕೇತವಾದ ಮೊಹರಂನ್ನು ವಿಶೇಷವಾಗಿ ಆಚರಿಸುತ್ತಾರೆ.

"ಮೊದಲನೆಯ ಮಾಸದ ಹತ್ತನೆಯ ದಿನ ಮೊಹರಂ ಆಚರಿಸುವರು. ಈ ಹತ್ತು ದಿನಗಳೂ ಇದರ ಆಚರಣೆಯುಂಟು. ಇದೊಂದು ಸಂಭ್ರಮದ ಹಬ್ಬವಲ್ಲ. ಸಂತಾಪ ಸೂಚನೆಗಾಗಿ ಮೀಸಲಾದ ಶ್ರದ್ಧಾಂಜಲಿ-ಸಮರ್ಪಣೆಯ ದಿನಗಳ ಕಾಲ. ಕಾರ್ಬಲದಲ್ಲಿ ಮಹಮ್ಮದ ಪೈಗಂಬರರ ಎರಡನೆಯ ಮೊಮ್ಮಗ ಹಜರತ್ ಇಮಾಮ್ ಹುಸೇನರ ದುರಂತ ಸಾವಿನ ಸಂತಾಪ ಸೂಚಕವಾಗಿ ಮೊಹರಂ ಹಬ್ಬವನ್ನು ಆಚರಿಸುತ್ತಾರೆ. ಗ್ರಾಮಗಳಲ್ಲಿ ಪಟ್ಟಣಗಳಲ್ಲಿ ಮೊಹರಂ ಆಚರಣೆಯ ಸಂದರ್ಭದಲ್ಲಿ ಹಸ್ತ ಸಂಕೇತಗಳನ್ನು ಪೂಜಿಸುವ, ಹರಕೆ ಹೊತ್ತವರು ಬೆಂಕಿಯನ್ನು ಹಾಯುವ, ಕೆಲವರು ಹುಲಿವೇಷಗಳನ್ನು, ಅಳ್ಳೊಳ್ಳಿಬವ್ವ ವೇಷ ಹಾಕಿಕೊಳ್ಳುವ ಪದ್ಧತಿಯನ್ನು ಕಾಣುತ್ತೇವೆ. ನಿಜವಾದ ಮುಸ್ಲಿಂರು ಈ ಹಬ್ಬವನ್ನು ಹೆಚ್ಚು ಸಂಭ್ರಮದಿಂದ ಆಚರಿಸುವದಿಲ್ಲವಾದರೂ ದಕ್ಷಿಣಭಾರತದಲ್ಲಿ ಮಾತ್ರ ಈ ಹಬ್ಬವನ್ನು ಎಲ್ಲಾ ಸಮುದಾಯದವರನ್ನು ಒಳಗೊಂಡು ಸಂಭ್ರಮದಿಂದ ಆಚರಿಸುವದನ್ನು ಕಾಣುತ್ತೇವೆ".[೨೫]

ಹಿಂದೂ ಸಂಸ್ಕೃತಿಯ ಹಿನ್ನೆಲೆಯನ್ನು ಹೊಂದಿರುವ ಗೊಂದಲಿಗರು ಮುಸ್ಲಿಂರ ಹಬ್ಬವಾಗಿರುವ ಮೊಹರಂನ್ನ ಆಚರಿಸುತ್ತಾ ಬಂದಿರುವ ಸಂಪ್ರದಾಯವಾಗಿದೆ. ಗೊಂದಲಿಗರ ಕುರಿತಾದ ಡಾ. ಸುಭದ್ರಾ ಚನ್ನಾರ ಸಂಪಾದನೆಯ Encyclopaedia of India Tribes and castes Vol-೭ರಲ್ಲಿ ಗೊಂದಲಿಗರು ಕುರಿತಾದ ವಿವರಣೆಯಲ್ಲಿ 'ಗೊಂದಲಿಗರು ಮೊಹರಂ ಹಬ್ಬವನ್ನು ಆಚರಿಸುತ್ತಾರೆ'. ಎಂದು ವಿವರಣೆ ಕೊಟ್ಟಿದ್ದಾರೆ. ಮುಸ್ಲಿಂ ಸಮುದಾಯದ ಅನೇಕ ಪ್ರವಾದಿಗಳನ್ನು ಅತ್ಯಂತ ನಂಬಿಕೆ ಶ್ರದ್ಧೆಯಿಂದ ನಡೆದುಕೊಳ್ಳುವ ಗೊಂದಲಿಗರು ಮೊಹರಂ ಹಬ್ಬವನ್ನು ಭಕ್ತಿಯಿಂದಲೇ ಆಚರಿಸುತ್ತಾರೆ. ಗೊಂದಲಿಗ ಕುಟುಂಬದವರಲ್ಲಿ ಕೆಲವರು ಹರಕೆಯನ್ನು ಹೊತ್ತಿದ್ದರೆ, ಮನೆಯಲ್ಲಿಯ ಒಬ್ಬರಿಗೆ ಹುಲಿವೇಷವನ್ನು ಹಾಕಿಸುತ್ತಾರೆ ಅಥವಾ ಫಕೀರರನ್ನಾಗಿ ಮಾಡುತ್ತಾರೆ. ಅಂಥವರು ಕಚ್ಚೆಯ ರೀತಿಯ ಲುಂಗಿಯನ್ನು ಹಾಕಿಕೊಳ್ಳುತ್ತಾರೆ. ಅದನ್ನು ಬಿಟ್ಟು ಬೇರೆ ಬಟ್ಟೆಯನ್ನು ಹಾಕಿ ಕೊಳ್ಳುವುದಿಲ್ಲ. ಬದಲಾಗಿ ಮೈತುಂಬ ಬಣ್ಣವನ್ನು ಬಳೆದು ಕೊಂಡಿರುತ್ತಾರಲ್ಲದೇ ಕಾಲಿಗೆ ಗೆಜ್ಜೆ ಕಟ್ಟಿಕೊಂಡಿರುತ್ತಾರೆ. ಹೀಗೆ ಮೋಹರಂ ಹಬ್ಬದವರೆಗೂ ಅದೇ ವೇಷದಲ್ಲಿ ಇದ್ದು, ಪರಿಚಿತರ ಹತ್ತಿರ ಮನೆ-ಅಂಗಡಿಗಳ ಮುಂದೆ ಒಂದು ರೀತಿಯ ನೃತ್ಯವನ್ನು/ಕುಣಿತವನ್ನು ಮಾಡುವರು. ಮೊಹರಂದ ಹಿಂದಿನ ದಿನ

ಕತ್ತಲೆ ರಾತ್ರಿಯಂದು ದೇವರನ್ನು ಕೂಡ್ರಿಸಿರುವ ಮಸೀದಿಗಳಿಗೆ ಹೋಗಿ ಸಕ್ಕರೆಯನ್ನು ಹಂಚಿ ಬರುತ್ತಾರೆ. ಮೊಹರಂ ದಿವಸ 'ಚೊಂಗೆ' ಎನ್ನುವ ಸಿಹಿ ಅಡುಗೆಯನ್ನು ಮಾಡುವ ಪದ್ಧತಿಯನ್ನು ಕಾಣುತ್ತೇವೆ. ಕೆಲವರು ಮಾದಿಲಿಯನ್ನು (ಗೋದಿ ರೊಟ್ಟಿ ಜೊತೆ ಬೆಲ್ಲವನ್ನು ಕೂಡಿಸಿ ಕುಟ್ಟಿ ಮಾಡಿದ ಸಿಹಿ ಆಹಾರ) ಮಾಡುತ್ತಾರೆ.

### ೪.೨.೪. ದೈವಗಳು

**ಗೊಂದಲಿಗರ ಸಮುದಾಯದವರು ನಡೆದುಕೊಳ್ಳುವ ದೈವಗಳು :** ಗೊಂದಲಿಗರು ಮೂಲತಃ ಅಂಬಾಭವಾನಿ ಆರಾಧಕರು. ಈ ದೃಷ್ಟಿಯಲ್ಲಿ ಸಾಮಾನ್ಯವಾಗಿ ಗೊಂದಲಿಗರು ನಮ್ಮ ಮನೆಯ ದೇವರು ಅಂದರೆ ಅಂಬಾಭವಾನಿ ಎಂತಲೇ ಹೇಳುತ್ತಾರೆ. ಆದರೆ ಸ್ಥಳೀಯವಾಗಿ ಬೇರೆ-ಬೇರೆ ಭಾಗಗಳಲ್ಲಿ ಹರಡಿಕೊಂಡಿರುವ ಗೊಂದಲಿಗರು ತಮ್ಮ ಮೂಲ ದೈವದ ದೇವಸ್ಥಾನ ದೂರವಿರುವುದ ರಿಂದಲೂ, ಇಲ್ಲವೇ ಸ್ಥಳೀಯವಾಗಿ ಅಕ್ಕ-ಪಕ್ಕದ ಊರಿನಲ್ಲಿರುವ ದೇವರುಗಳ ಪ್ರಭಾವ ದಿಂದಲೂ ಆಯಾ ಭಾಗದಲ್ಲಿಯ ದೇವರುಗಳನ್ನೇ ಮನೆ ದೇವರನ್ನಾಗಿ ಮಾಡಿಕೊಂಡಿದ್ದಾರೆ. ಹೀಗಾಗಿ ಗೊಂದಲಿಗರು ಆರಾಧಿಸುವ ದೈವಗಳು ಸ್ತ್ರೀ-ಪುರುಷ ದೈವಗಳ ಜೊತೆಗೆ ಮುಸ್ಲಿಂ ದೈವಗಳನ್ನು ಆರಾಧನೆ ಮಾಡುತ್ತಿದ್ದಾರೆ. ಕುಟುಂಬಗಳ ಸಮೀಕ್ಷೆಯ ಸಂದರ್ಭದಲ್ಲಿ ಕಂಡು ಬಂದ ಗೊಂದಲಿಗರ ಮನೆ ದೇವರುಗಳ ಹಿನ್ನೆಲೆಯಲ್ಲಿ ಸಮುದಾಯದವರು ನಡೆದುಕೊಳ್ಳುವ ದೈವಗಳನ್ನು ನೋಡಲಾಗಿ-

**ಕೋಷ್ಟಕ ೪.೨ ಗೊಂದಲಿಗರ ಸಮುದಾಯ ಸ್ತ್ರೀ ದೈವಗಳು**

| ಸ್ತ್ರೀ ದೈವಗಳು | ದೈವಗಳ ನೆಲೆಗಳು |
|---|---|
| ತುಳಜಾಭವಾನಿ / ಅಂಬಾಭವಾನಿ | ತುಳಜಾಪುರ (ಮಹಾರಾಷ್ಟ್ರ) |
| ಮಹಾಲಕ್ಷ್ಮೀ | ಕೊಲ್ಲಾಪುರ (ಮಹಾರಾಷ್ಟ್ರ) |
| ಯಲ್ಲಮ್ಮ | ಸವದತ್ತಿ, ಬೆಳಗಾಂ ಜಿಲ್ಲೆ |
| ಹುಲಿಗೆಮ್ಮ | ಹುಲಗಿ, ಹೊಸಪೇಟೆಯ ಹತ್ತಿರ |
| ನೀರಮಾನ್ವಿ ಯಲ್ಲಮ್ಮ | ನೀರಮಾನ್ವಿ, ಮಾನ್ವಿ ತಾಲೂಕು |
| ದುರಗಮ್ಮ | ಅಮರಗೋಳ |
| ದ್ಯಾಮವ್ವ | ಲೋಕುರ ತಾ. ಧಾರವಾಡ |
| ಮಾರಿಕಾಂಬಾ ದೇವಿ | ಶಿರ್ಶಿ |
| ಕೋಣಮ್ಮ ದೇವಿ | ಬದಾಮಿ |
| ಗಾಳೆಮ್ಮ ದೇವಿ | ಗಾಳೆಮ್ಮನ ಗುಡಿ ತಾ. ಹೊಸ ಪೇಟೆ |
| ದುರ್ಗಮ್ಮ | ದುಗ್ಗಲಮರಿ ತಾ.ಹುನಗುಂದ, ಲೋಕಾಪುರ, ಕೊಡಗಾನೂರು, ದೇವದುರ್ಗ |

| | |
|---|---|
| ಲಕ್ಷ್ಮೀ ದೇವಿ | ಹಂದಿಗನೂರ, ದೇವರ ಹಿಪ್ಪರಗಿ |
| ಲಕ್ಷ್ಮೀ ದೇವಿ | ಅಂಕಲಗಿ, ಕಲಾದಗಿ ಹತ್ತಿರ |
| ಕನಕಲ ಶ್ರೀದೇವಿ | ಕನಕಾಲ, ಬ. ಬಾಗೇವಾಡಿ ಹತ್ತಿರ |
| ಬನಶಂಕರಿದೇವಿ | ಬನಶಂಕರಿ, ಬಾದಾಮಿ |

**ಕೋಷ್ಟಕ ೪.೩ ಗೊಂದಲಿಗರ ಸಮುದಾಯದ ಪುರುಷ ದೈವಗಳು**

| ಪುರುಷ ದೈವಗಳು | ದೈವಗಳ ನೆಲೆಗಳು |
|---|---|
| ಶ್ರೀ ಸಿದ್ದೇಶ್ವರ | ಶೇಡಬಾಳ, ಫಂಡರಾಪುರ ಹತ್ತಿರ |
| ಶ್ರೀ ಸಿದ್ದೇಶ್ವರ | ತೊದಲಬಾಗಿ, ಜಮಖಂಡಿ ಹತ್ತಿರ |
| ಶ್ರೀ ಕಲ್ಲೊಳೆಪ್ಪಾ ದೇವರು / ಮಾರುತೇಶ್ವರ | ಕಲ್ಲೋಳ್ಳಿ, ತಾ ಗೋಕಾಕ |
| ಶ್ರೀ ಆಂಜನೇಯ ಸ್ವಾಮಿ | ಬೇಲೂರ ತಾ ಬದಾಮಿ |
| ಶ್ರೀ ಮಾರುತೇಶ್ವರ | ವಡ್ಡರಟ್ಟಿ ತಾ ಬದಾಮಿ |
| ಶ್ರೀ ಏಳೂರು ಆಂಜನೇಯಸ್ವಾಮಿ | ಏಳೂರ, ಧನ್ನೂರ ಹತ್ತಿರ,ಮುದ್ದೇಬಿಹಾಳ |
| ಮತ್ತಿಕಟ್ಟೇಶ್ವರ | ಕೆರೂರು ತಾ ಬದಾಮಿ |
| ಕನಕಾಚಲಪತಿ | ಕನಕಗಿರಿ. ತಾ ಗಂಗಾವತಿ |

**ಕೋಷ್ಟಕ ೪.೪ ಗೊಂದಲಿಗ ಸಮುದಾಯದ ಇಸ್ಲಾಂ ದೈವಗಳು**

| ಪುರುಷ ದೈವಗಳು | ದೈವಗಳ ನೆಲೆಗಳು |
|---|---|
| ರಾಜಾಬಾಗಸವಾರ / ರಾಜಾಭಕ್ಷಾವಲಿ | ಯಮನೂರ, ನವಲಗುಂದ |
| ದಾವಲ್ ಮಲ್ಲಿಕ | ಇಲಕಲ್ಲ್, ಹುನಗುಂದ |
| ಖ್ವಾಜಾ ಬಂದೇ ನವಾಜ | ಗುಲ್ಬರ್ಗಾ |
| ಮಾಬು ಸುಬಾನಿ | ಹತ್ತಿಕುಣಿ, ದರ್ಗಾದೇವರು |

ಗೊಂದಲಿಗರು ಇತ್ತೀಚಿನ ದಶಕಗಳಲ್ಲಿ ಹಲವಾರು ಸ್ತ್ರೀ-ಪುರುಷ ದೈವಗಳನ್ನು ಆರಾಧನೆ ಮಾಡುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಈ ದೈವಗಳು ಒಂದೊಂದು ಸ್ಥಳದಲ್ಲಿ ಮೂಲ ನೆಲೆಯನ್ನು ಕಂಡುಕೊಂಡ ಒಂದೊಂದು ಬೆಡಗಿನವರು ಆರಾಧನೆ ಮಾಡುತ್ತಾ ಬಂದಿರುವುದನ್ನು ಕಾಣುತ್ತೇವೆ. ವಾರಕರಿಗಳಾಗಿರುವ ಪುರುಷರು ಏಕಾದಶಿಯಂದು ನಿರಾಹಾರ/ಉಪವಾಸ ವ್ರತವನ್ನು,

ದೇವಿವಾರ ಎಂದೇ ಗುರುತಿಸುವ ಮಂಗಳವಾರ-ಶುಕ್ರವಾರದಂದು ಮನೆಯಲ್ಲಿರುವ ಮಹಿಳೆಯರು ದೇವಿಪೂಜೆಯ ಜೊತೆಗೆ ಉಪವಾಸ ವೃತವನ್ನು ಮಾಡುತ್ತಾರೆ. ಅಮವಾಸ್ಯೆ, ಶ್ರಾವಣ ಮಾಸದಲ್ಲಿ ಶುಕ್ರಗೌರಿ, ಮಂಗಳಗೌರಿ ವಿಶೇಷ ಪೂಜೆಯ ಮೂಲಕ ದೇವಿಯ ಸೇವೆ ಸಲ್ಲಿಸುತ್ತಾರೆ.

### ೪.೨.೫. ಗೊಂದಲ ಪೂಜೆ

ಗೊಂದಲವು ಹಲವು ವಾದ್ಯಗಳಿಂದ ದೇವಿಯ ಆರಾಧನೆ ಮಾಡುವ ವಿಧಾನ. ಗೊಂದಲ ಎಂಬ ಶಬ್ದವನ್ನು ಗೊಂದಣ, ಗೊಂದಳ, ಗೊಂದ್ಲಿ, ಗೊಂಡಲೀ, ಗೌಂಡ್ಲಿ, ದುಂಡಲೀ, ಗೋಧಳ್, ಎಂಬ ಪದಗಳನ್ನು ಬಳಸುತ್ತಿದ್ದು. ಗುಂಪು, ಭಜನೆ, ಗುಂಪು, ಸಾಮೂಹಿಕ ಪ್ರಾರ್ಥನೆಯ ದೈವಾವೇಶದಿಂದ ಕುಣಿಯುವದು. ಸಮೂಹ ನೃತ್ಯ, ಸಮೂಹ ಪೂಜೆಯ ಹಿನ್ನೆಲೆಯಲ್ಲಿಯೇ ಗೊಂದಲ ಪೂಜೆಯ ಆಚರಣೆ ಬೆಳೆದು ಬಂದಿದೆ. ಅಂದರೆ "ಗೊಂದಲ ಎಂಬುದು ಒಂದು ಪೂಜಾ ವಿಧಾನವಾಗಿದ್ದು. ಮುಖ್ಯವಾಗಿ ಶಕ್ತಿದೇವತೆ ಅಂಬಾಭವಾನಿಯ ಆರಾಧನಾ ಕ್ರಮವಾಗಿದೆ. ಆರಾಧ್ಯದೈವವಾದ ಅಂಬಾಭವಾನಿ ಮುಂದೆ ಇಡೀ ರಾತ್ರಿ ಯಾವದಾದರೊಂದು ಕಥೆಯನ್ನು ಹಾಡುತ್ತಾ, ಕುಣಿಯುತ್ತಾ, ಅಭಿನಯಿಸುತ್ತಾ, ಕೊನೆ-ಮೊದಲುಗಳಂತೆ, ನಡು-ನಡುವೆಯೂ ದೇವಿಸ್ತುತಿ ಮಾಡುತ್ತಾ ಬೆಳಕು ಹರಿಸುವದೇ ಈ ಪೂಜಾ ವಿಧಾನ, ಗೊಜಲುಕುಣಿತ ಎಂಬ ಅರ್ಥಕೊಡುವ ತಮ್ಮ ಪೂಜಾ ವಿಧಾನವಾದ 'ಗೊಂದಲ' ಎಂಬುದರಿಂದ ಇವರಿಗೆ ಗೊಂದಲಿಗರೆಂದು ಹೆಸರು ಬಂದಿದೆ".[೨೬] ಈ ಹಿನ್ನೆಲೆಯಲ್ಲಿ ಗೊಂದಲಿಗರು ಜಮದಗ್ನಿ ಮಹರ್ಷಿ ಹಾಗೂ ಪತ್ನಿ ರೇಣುಕಾ ದೇವಿಯು ನಮ್ಮ ವಂಶದ ಸ್ಥಾಪಕರು, ಅಂಬಾಭವಾನಿಯ ಪರಮ ಭಕ್ತರು ಎಂದೇ ಹೇಳಿಕೊಳ್ಳುತ್ತಾರೆ. ಧಾರ್ಮಿಕ ವೃತ್ತಿಗಾಯಕ ವರ್ಗದಲ್ಲಿ ಬರುವ ಗೊಂದಲಿಗರು ಗೊಂದಲ ಪೂಜಾ ಆಚರಣೆಯ ಹಿನ್ನೆಲೆಯಲ್ಲಿ ಬಂದವರಾಗಿದ್ದು, ಪರಂಪರಾಗತವಾಗಿ ಅವರು ನಿರ್ವಹಿಸುತ್ತಾ ಬಂದ ಉದ್ಯೋಗ ಗೊಂದಲ ಹಾಕುವದು, ದೇವಿಯ ಪವಾಡಗಳನ್ನು ರಸವತ್ತಾಗಿ ಹಾಡುವದು, ಕಥೆ ಹೇಳುವದಾಗಿದೆ. ಅಂದರೆ ಅವರ ಆನುವಂಶಿಕ ವೃತ್ತಿಯ ಹೆಸರೇ ಅವರ ಕುಲದ/ಜಾತಿಯ ಹೆಸರಾಗಿದೆ.

"ಯಾದವ ಕಾಲದ ವಾಙ್ಮಯದಲ್ಲಿ ಗೊಂದಲದ ಉಲ್ಲೇಖವಿದ್ದು. ಅದು ಭೂತ ಮಾತೆಯ ಹೆಸರಿನಲ್ಲಿ ನಡೆಯುತ್ತಿತ್ತು. ಜ್ಞಾನೇಶ್ವರ, ನಾಮದೇವ ದತ್ತೋಪಂತ ಮುಂತಾದ ಸಂತರು ರಚಿಸಿದ ಪದ್ಯಗಳಲ್ಲಿ, ಅಭಂಗಗಳಲ್ಲಿ ಹಲವಾರು ಗೊಂದಲ ಆಚರಣೆಗೆ ಸಂಬಂಧಪಟ್ಟಿದೆ".[೨೭]

ಪ್ರಾಚೀನ ಮಧ್ಯಕಾಲೀನ ಕಾವ್ಯಗಳು ಗೊಂದಲದ ನೃತ್ಯದ ಬಗ್ಗೆ ವಿವರಣೆ ನೀಡಿರುವುದು ಕಂಡುಬರುತ್ತದಲ್ಲದೇ ಈ ನೃತ್ಯವು ಅಥವಾ ಧಾರ್ಮಿಕ ಆಚರಣೆಯು ಪ್ರಾಚೀನ ಕಾಲದಿಂದಲೂ ಆಚರಣೆಯಲ್ಲಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಶಿವಾಜಿ ಮಹಾರಾಜರು ಯುದ್ಧಕ್ಕೆ ಹೋಗುವಾಗ ತಮ್ಮ ಕುಲದೈವ ಅಂಬಾಭವಾನಿಗೆ ಗೊಂದಲದ ಪೂಜೆಯನ್ನು ಮಾಡಿಸುತ್ತಿದ್ದರಂತೆ. ಕರ್ನಾಟಕದ ಬಹುತೇಕ ರಾಜಮನೆತನದವರ ಕುಲದೇವತೆ ಅಂಬಾಭವಾನಿಯಾಗಿರುವುದರಿಂದ ಗೊಂದಲಿಗರಿಂದ

ವಿಶೇಷ ಗೊಂದಲ ಪೂಜೆ ಮಾಡಿಸುತ್ತಿದ್ದರಂತೆ. ಈ ಎಲ್ಲ ಹಿನ್ನೆಲೆಯಲ್ಲಿ ಗೊಂದಲ ಪೂಜಾ ಆಚರಣೆಯು ಗೊಂದಲಿಗರ ಮೂಲ ವೃತ್ತಿಯಾಗಿತ್ತಲ್ಲದೇ ಗೊಂದಲಿಗರು ಎಂಬ ಹೆಸರು ಅದರಿಂದಲೇ ಬಂದಿದೆ ಎನ್ನಲಾಗಿದೆ.

**ಗೊಂದಲ ಪೂಜಾ ಆಚರಣಾ ವಿಧಾನ**

"ಗೊಂದಲವು ದೈವಿಕತೆಗೆ ಬದ್ಧವಾದ ಒಂದು ಆರಾಧನೆ. ಇದೊಂದು ಸಾಮೂಹಿಕ ವಿಧಿಕ್ರಿಯೆ ಕುಲಧರ್ಮ ಪಾಲನೆಯ ಸಂಪ್ರದಾಯ. ಅಂಬಾಭವಾನಿಯ ಭಕ್ತರಾದವರು ನವರಾತ್ರಿ, ದೀಪಾವಳಿ, ಮದುವೆ–ಮುಂಜಿವೆಗಳಲ್ಲಿ ಶುಭಕಾಮನೆಯ ಸಂಕೇತವಾಗಿ, ಸಂಕಷ್ಟಗಳ ನಿವಾರಣೆಗಾಗಿ, ಹರಕೆಯ ರೂಪದಲ್ಲಿ ತಮ್ಮ-ತಮ್ಮ ಮನೆಗಳಲ್ಲಿ ಭಕ್ತಿ-ಶ್ರದ್ಧೆಗಳಿಂದ ಧಾರ್ಮಿಕ ವಾತಾವರಣದಲ್ಲಿ ಆಹ್ವಾನಿತ ಗೊಂದಲಿಗರಿಂದ ಗೊಂದಲ ಏರ್ಪಡಿಸಿಕೊಳ್ಳುತ್ತಾರೆ".[೨೪]

ಶಕ್ತಿ ದೇವತೆಯ ಆರಾಧನೆ–ಪೂಜೆಯ ಜೊತೆಗೆ ಭಾವಾವೇಶದಿಂದ ದೇವಿಯ ಮಹಿಮೆಗಳನ್ನು ಎತ್ತಿತೋರಿಸುವ ಪುರಾಣಗಳನ್ನು ಸುಶ್ರಾವ್ಯವಾಗಿ ಹಾಡು–ಕಥೆಗಳ ಮೂಲಕ ಮಾಡುವ ವೃತಾಚರಣೆಯೇ ಗೊಂದಲ ಪೂಜೆಯಾಗಿದೆ. "ಗೊಂದಲವನ್ನು ವಿಶೇಷ ಮದುವೆಯ ಕಾಲದಲ್ಲಿ ಮದುವೆಯ ನಂತರ ದೇವಿ ಆರಾಧನೆಯಲ್ಲಿ ಹರಕೆ ಹೊತ್ತ ಸಂದರ್ಭದಲ್ಲಿ ಭಕ್ತಿಯ ಮಹಿಮೆಗಾಗಿ ಇತ್ಯಾದಿ ಪ್ರಸಂಗಗಳಲ್ಲಿ ಹಾಕುತ್ತಾರೆ. ಬ್ರಾಹ್ಮಣರು ಮದುವೆಯ ಕಾಲದಲ್ಲಿ ಮತ್ತು ಹರಕೆಯ ಕಾರ್ಯದಲ್ಲಿ ಹಾಕುವುದುಂಟು. ಕೆಲವರು ಉಪನಯನ ಕಾಲದಲ್ಲೂ ಗೊಂದಲವನ್ನು ಮಾಡಿಸುವುದುಂಟು. ದೇಶಸ್ಥ ಬ್ರಾಹ್ಮಣರು, ಗೊಂದಲಿಗರು, ಮರಾಠರು, ಕ್ಷತ್ರೀಯರು, ಪತ್ತಾರರು, ಸಿಂಪಿಗರು, ಬಡಿಗರು, ಕಮ್ಮಾರರು, ಉಪ್ಪಾರರು, ಬೇಡರು, ಕುರುಬರು, ಲಿಂಗಾಯತರು ಗೊಂದಲವನ್ನು ಹಾಕಿಸುವ ಸಂಪ್ರದಾಯ ನಡೆದು ಬಂದಿದೆ".[೨೫] ಶಕ್ತಿ ದೇವತೆ ಅಂಬಾಭವಾನಿಯ ಭಕ್ತರು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲಿ ಕಂಡುಬರುವುದ ರಿಂದ ಅಂದರೆ ಮೇಲ್ಜಾತಿಯ ಜನರಿಂದ ಹಿಡಿದು ಕೆಳಜಾತಿಯ ಜನರು ಸಹ ಹರಕೆಯ ಹಿನ್ನೆಲೆ ಯಲ್ಲಿ ಮದುವೆ–ಉಪನಯನದ ಸಂದರ್ಭದಲ್ಲಿ ಗೊಂದಲಪೂಜೆ ಮಾಡಿಸುವ ಪರಿಪಾಠ ಬೆಳೆದು ಬಂದಿದೆ, ಎಂಬುದು ಕಂಡುಬರುತ್ತದೆ. ಗೊಂದಲ ಪೂಜಾ ಆಚರಣೆಯು ಪ್ರಾದೇಶಿಕವಾಗಿ ಮತ್ತು ಸಂದರ್ಭಗಳ ಹಿನ್ನೆಲೆಯಲ್ಲಿ ವಿಭಿನ್ನತೆಯು ಕಂಡುಬರುತ್ತದೆ.

"ಗೊಂದಲಿಗರು ವಿಶೇಷವಾಗಿ ಮರಾಠಾ ಬ್ರಾಹ್ಮಣರು ಮತ್ತಿತರ ಮರಾಠಾ ಜಾತಿಯವರ ಮದುವೆ ಸಮಾರಂಭಗಳಲ್ಲಿ ದೇವಿಭವಾನಿಯ ಗೌರವಾರ್ಥವಾಗಿ ಗೊಂದಲ ಪೂಜೆಯನ್ನು ಮಾಡುತ್ತಾರೆ. ಗೊಂದಲ ಎನ್ನುವದು ಕೋಲಾಹಲ ಗದ್ದಲ, ಆವೇಶಮಯವಾದ ನೃತ್ಯ. ಈಸಂದರ್ಭದಲ್ಲಿ ಗೊಂದಲಿಗರ ಐದು ಜನರ ತಂಡವು ಹಗಲು–ರಾತ್ರಿ ಔತಣದ ಊಟದ ನಂತರ ರಾತ್ರಿ ೧೦ ಗಂಟೆಗೆ ತಮ್ಮ ನರ್ತನವನ್ನು ಪ್ರಾರಂಭಿಸುತ್ತಾರೆ. ಅದಕ್ಕಿಂತ ಪೂರ್ವದಲ್ಲಿ ಶ್ರೀದೇವಿ ಹಾಗೂ ಅವಳ ಒಡೆಯ ಶಂಕರನನ್ನು ನೀರು ತುಂಬಿದ ಕುಂಭ(ಕೊಡ) ವೀಳ್ಯದ ಎಲೆ ಮತ್ತು ಅಡಿಕೆ ಮೇಲೊಂದು ತೆಂಗಿನಕಾಯಿ ಇಟ್ಟು ಪೂಜಿಸುತ್ತಾರೆ. ಇಬ್ಬರೂ ದೇವತೆಗಳನ್ನು ಒಂದು ಕಟ್ಟಿಗೆ

ಮನೆಯ ಮೇಲೆ ಪ್ರತಿಷ್ಠಾಪಿಸಿ, ಕುಬಸದ ಖಣ ಏರಿಸಿ ಅರಿಷಿಣ ಮತ್ತು ಕುಂಕುಮ ಹಚ್ಚುತ್ತಾರೆ. ನಿಲ್ಲಿಸಿದ ಮೂರು ಕಬ್ಬಿನ ಗಳಗಳಿಗೆ ಹೂ-ಮಾಲೆಗಳನ್ನು ಜೋತು ಬಿಡಲಾಗುತ್ತದೆ. ಪುಷ್ಪಾರ್ಚನೆ, ತುಪ್ಪದ ದೀಪಗಳ ಬೆಳಗುವಿಕೆ, ದೂಪ, ಮತ್ತು ಕರ್ಪೂರದ ಆರತಿಗಳನ್ನು ಒಳಗೊಂಡ ಪೂಜೆಯನ್ನು ಮನೆಯ ಹಿರಿಯರು ನೆರವೇರಿಸುತ್ತಾರೆ. ಪ್ರತಿ ಗೊಂದಲವು ಉದೋ, ಉದೋ (ದೇವತೆಗೆ ಜಯ ವಾಗಲಿ) ಎಂಬ ಘೋಷದಿಂದ ಶುರುವಾಗುತ್ತದೆ. ಖಂಡೋಬಾ-ಝುಜುರಿಯಾ, ತುಕೈ-ಯಾಮೈ, ತಾಯಿಭವಾನಿ ಮತ್ತಿತರ ದೇವತೆಗಳ ಪ್ರಾರ್ಥನೆಯಿಂದ ಪ್ರಾರಂಭವಾಗುತ್ತದೆ. ಗುಂಪಿನಲ್ಲಿ ಒಬ್ಬ ಉರಿವ ಪಂಜು/ದೀವಟಿಗೆಯನ್ನು ಹಿಡಿದಿರುತ್ತಾರೆ. ಅಗ್ರನಾಯಕ ಎಣ್ಣೆಯ ಗೌನನ್ನು ಧರಿಸಿ, ಕವಡೆ-ಕಂಠಹಾರಗಳನ್ನು ಧರಿಸಿ ಟಣಟಣಿಸುವ ಕಾಲುಕಡಗ ಧರಿಸಿ, ಪಂಜಿಗೆ ಗಂಧ ಮತ್ತು ಕುಂಕುಮವನ್ನು ಹಚ್ಚಿ ಬಾಗಿ ವಂದಿಸುತ್ತಾರೆ. ಮನೆಯ-ಹೊರಗಿನ ಹೆಣ್ಣು-ಗಂಡುಗಳನ್ನೊಳಗೊಂಡ ಪ್ರೇಕ್ಷಕರಿಗೆ ರಾಮಾಯಣ ಇತರ ಪುರಾಣ ಕಥೆಗಳನ್ನು ಹಾಡುತ್ತಾ-ನರ್ತಿಸುತ್ತಾ ಹೇಳುತ್ತಾನೆ. ಈವೇಳೆಯಲ್ಲಿ ಆತನ ಮೂವರು ಸಂಗಾತಿಗಳು ಮೃದಂಗ, ತಾಳ, ಹಾಗೂ ಪೀಟಿಲನ್ನು ಆತನ ಹಿಂದೆ ನಿಂತು ಬಾರಿಸುತ್ತಾರೆ. ಕಥಾ ನಿರೂಪಣೆ ಮಧ್ಯದಲ್ಲಿ ನಿರೂಪಕ ಹಾಸ್ಯ-ಪ್ರಸಂಗಗಳನ್ನು, ಹಾಸ್ಯ-ಚಟಾಕಿಗಳನ್ನು ಹೇಳುತ್ತಾ ನಿರೂಪಣೆಗೆ ಜೀವಂತಿಕೆ ತುಂಬುತ್ತಾನೆ. ಈಪ್ರದರ್ಶನ ಮುಂಜಾವಿನವರೆಗೂ ಮುಂದುವರೆ ದಿರುತ್ತದೆ. ಭವಾನಿ ದೇವಿಯ ಕೃಪೆಗಾಗಿ ಪ್ರಾರ್ಥನೆಯೊಂದಿಗೆ ಗೊಂದಲ ಮುಕ್ತಾಯವಾಗುತ್ತದೆ".[೨೦]

ಪ್ರಾರಂಭದಿಂದಲೂ 'ಗೊಂದಲ' ಪೂಜಾ ವಿಧಾನವು ಅಥವಾ ಶಕ್ತಿ ದೇವಿಯ ಉಪಾಸನಾ ಕ್ರಮವು ಶ್ರದ್ದೆ-ಭಕ್ತಿಗಳಿಂದ ದೇವಿಯ ಆರಾಧನಾ ಮಾಡುತ್ತಾ, ಪದ್ಯ-ಗದ್ಯಗಳ ಸಂಮಿಶ್ರಿತ ದೇವಿ ಸ್ತುತಿ-ಪುರಾಣಗಳನ್ನು ಹೇಳುವದರ ಜೊತೆಗೆ ನೃತ್ಯಮಾಡುವ ಸನ್ನಿವೇಶವನ್ನು ಪ್ರತಿಬಿಂಬಿಸುತ್ತಾರೆ. ಹೀಗಾಗಿ ಗೊಂದಲಿಗರು ಧಾರ್ಮಿಕ ವೃತ್ತಿ ಗಾಯಕ ವರ್ಗದಲ್ಲಿ ಬರುವವರಾಗಿದ್ದಾರೆ.

Encyclopaedia of India Tribes & Castes – Vol. 7ರಲ್ಲಿ ಸಂ.ಸುಭದ್ರಾ ಚನ್ನಾರವರು-ಗೊಂದಲ ಪೂಜೆಯ ಕುರಿತು ಈ ರೀತಿ ವಿವರಿಸಿದ್ದಾರೆ. "ಗೊಂದಲಿ ನೃತ್ಯ ಮಾಡುವುದು ಹಾಗೂ ದೇವಿಯ ಹೆಸರಲ್ಲಿ ಭಿಕ್ಷೆ ಬೇಡುವ ಮೂಲಕ ಜೀವನೋಪಾಯ ನಡೆಸುತ್ತಾರೆ. ಡೆಕ್ಕನ್ನಿನ ಶಿಂಪಿಗಳು, ಮರಾಠರು, ಸೋನಾರರು, ಹಾಗೂ ಇತರ ಜಾತಿಗಳಲ್ಲಿ ಉಪನಯನ, ವಿವಾಹ ಸಮಾರಂಭದಲ್ಲಿ ಗೊಂದಲಿ ನೃತ್ಯ ನಡೆಸುವುದು ಸಾಮಾನ್ಯವಾಗಿದೆ. ಅದರ ವಿವರಣೆ- ಸಮಾರಂಭದ ಕೆಲದಿನ ಮೊದಲು ಗೊಂದಲಿಗರನ್ನು ಭೋಜನಕ್ಕೆ ಅಹ್ವಾನಿಸಿ ಭೋಜನವನ್ನು ಮಾಡಿಸಲಾಗುತ್ತದೆ. ಸಂಜೆ ಸ್ನೇಹಿತರು ಹಾಗೂ ಸಂಬಂಧಿಗಳನ್ನು ನೃತ್ಯ ನೋಡಲು ಅಹ್ವಾನಿಸಲಾಗುತ್ತದೆ. ಹಜಾರದ ಮಧ್ಯದಲ್ಲಿ ಒಂದು ಮಣೆಯ ಮೇಲೆ ಗೊಂದಲ ನಾಯಕ ಒಂದು ಖಣವನ್ನು ಹರಡಿ ಅದರ ಮೇಲೆ ಒಂದು ಮುಷ್ಠಿ ಅಕ್ಕಿಯನ್ನು ಹಾಕಿ, ನೀರು ತುಂಬಿದ ಬಿಂದಿಗೆಯನ್ನು ಇಡುತ್ತಾನೆ. ಬಿಂದಿಗೆಯ ಬಾಯಲ್ಲಿ ಕೆಲ ಮಾವಿನ ಎಲೆಗಳನ್ನು ಇಡುತ್ತಾನೆ. ಬಿಂದಿಗೆಯ ಮೇಲೆ ಹರಿವಾಣದಲ್ಲಿ ಅಕ್ಕಿ ತುಂಬಿ ಭವಾನಿದೇವಿ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ.

ಆಗ ಮನೆ ಮಾಲೀಕ ದೇವಿಯನ್ನು ಗಂಧ-ಕುಂಕುಮ-ಅರಿಷಿಣಗಳಿಂದ ಪೂಜಿಸಿ ಧೂಪ ಹಾಕುತ್ತಾನೆ. ಈಗ ಗೊಂದಲಿ ನಾಯಕ ದೇವಿಯ ಮುಂದೆ ನಿಲ್ಲುತ್ತಾನೆ. ಅವನ ಸಂಗಾತಿಯೊಬ್ಬ ಉರಿವ ದೀವಟಿಗೆಯೊಂದಿಗೆ ಬಲಕ್ಕೆ ನಿಲ್ಲುತ್ತಾನೆ. ಉಳಿದವರು ಅತನ ಹಿಂದಿರುತ್ತಾರೆ. ಒಬ್ಬನು ಜೋಡು ವಾದ್ಯವಾದ ಸಂಭಾಳ ಭಾರಿಸುತ್ತಾನೆ. ಮತ್ತೊಬ್ಬನು ತಂತಿವಾದ್ಯವಾದ ತುಂತುಣಿ ನುಡಿಸುತ್ತಾನೆ. ಮೂರನೆಯವನು ಲೋಹದ ಲೋಟಗಳ ರೀತಿಯಲ್ಲಿರುವ ತಾಳಗಳನ್ನು ಕುಟ್ಟುತ್ತಾನೆ. ಈಗ ಗೊಂದಲಿ ನಾಯಕ ಗಂಧ ಅರಿಷಿಣ ಮತ್ತು ಹೂವುಗಳಿಂದ ದೇವಿಯನ್ನು, ಉರಿವ ದೀವಟಿಗೆಯನ್ನು ಪೂಜಿಸುತ್ತಾ. "ತುಳಜಾಪುರದ ಅಂಬಾಭವಾನಿ, ಗೊಂದಲಿ ನೃತ್ಯವನ್ನು ಸಾಕ್ಷೀಕರಿಸು ಬಾ" ಎಂದು ಹೇಳುತ್ತಾನೆ. ಹೀಗೆ ಅನೇಕ ದೇವಾನುದೇವತೆಗಳನ್ನು ತಮ್ಮ ಪ್ರದರ್ಶನವನ್ನು ಸಾಕ್ಷೀಕರಿಸಲು ಅಹ್ವಾನಿಸುತ್ತಾರೆ. ಆಗ ಆತ ಭವಾನಿ, ಮಲ್ಹಾರಿ, ರಾಮ, ಅಥವಾ ಇತರ ನಾಯಕರ ಕಾರ್ಯಗಳ ಹಾಡನ್ನು ಹಾಡುತ್ತಾನೆ. ಅವನ ಸಂಗಾತಿಗಳು ವಾದ್ಯಗಳನ್ನು ನುಡಿಸುತ್ತಾರೆ. ಕೆಲನಿಮಿಷದ ನಂತರ ಹಾಡನ್ನು ನಿಲ್ಲಿಸಿ ಪ್ರೇಕ್ಷಕರಿಗೆ ಆ ಹಾಡಿನ ಅರ್ಥವನ್ನು ವಿವರಿಸುತ್ತಾ, ಬೆಳಗಿನವರೆಗೂ ಕಥೆ ಮುಂದು ವರೆಸುತ್ತಾನೆ. ಕಥಾ ನಿರೂಪಣೆ ಮುಗಿದ ನಂತರ ಪ್ರೇಕ್ಷಕರ ಕೋರಿಕೆ ಮೇರೆಗೆ ಶಿವಾಜಿ ಅಥವಾ ಇತರ ಮರಾಠ ನಾಯಕರ ಬಗೆಗಿನ ಹಾಡನ್ನು ಹಾಡುತ್ತಾನೆ. ಕೆಲವೊಮ್ಮೆ ಮೈದುಂಬಿದಾಗ ಗೊಂದಲನು ಭವಿಷ್ಯವಾಣಿ ನುಡಿಯುವಂತೆ ವರ್ತಿಸುತ್ತಾನೆ. ಬೆಳಗಾದಾಗ ದೀಪ ಹಚ್ಚುತ್ತಾರೆ ಅಥವಾ ದೇವಿಗೆ ಕರ್ಪೂರ ಆರತಿ ಮಾಡುತ್ತಾರೆ. ನಂತರ ದೇವಿಯನ್ನು ಇಳಿಸಿ ಉರಿವ ದೀವಟಿಗೆಯನ್ನು ಹಾಲಿನಲ್ಲಿ ಅಥವಾ ಶುದ್ಧ ಬೆಣ್ಣೆಯಲ್ಲಿ ನಂದಿಸಲಾಗುತ್ತದೆ. ಅಲ್ಲಿಗೆ ಈ ಗೊಂದಲ ಪೂಜೆಯು ಮುಕ್ತಾಯವಾಗುತ್ತದೆ. ಈ ರೀತಿ ಗ್ರಂಥದಲ್ಲಿ ಗೊಂದಲ ಪೂಜೆಯ ಸಂಪೂರ್ಣ ವಿವರಣೆಯನ್ನು ಕೊಟ್ಟಿರುವದು ಕಂಡು ಬರುತ್ತದೆ.

ಸಾಮಾನ್ಯವಾಗಿ ಗೊಂದಲ ಪೂಜೆಯು ದೇವಿಯ ಆರಾಧನೆಯಾಗಿದ್ದು, ದೇವಿಸ್ತುತಿಯನ್ನು ಮಾಡುವುದಾಗಿದೆ. ಈ ರೀತಿಯ ಆಚರಣೆಯು ರಾತ್ರಿಯಿಂದ ಬೆಳಗಿನವರೆಗೂ ನಡೆಯುವ ಧಾರ್ಮಿಕ ಕ್ರಿಯೆಯಾಗಿದೆ.

ಇದೇ ರೀತಿ ಗೊಂದಲ ಪೂಜಾ ಆಚರಣೆಗೆ ಸಂಬಂಧಪಟ್ಟಂತೆ ಕರ್ನಾಟಕದಲ್ಲಿ ಆಚರಿಸುವ ಕ್ರಮಗಳ ಹಿನ್ನೆಲೆಯಲ್ಲಿ ಮುದೇನೂರು ಸಂಗಣ್ಣನವರು- 'ಗೊಂದಲಿಗರ ದೇವೇಂದ್ರಪ್ಪನವರ ಆಟಗಳು' ಎನ್ನುವ ಗ್ರಂಥದಲ್ಲಿ ವಿವರಣೆ ಕೊಟ್ಟಿದ್ದು- "ಅಹ್ವಾನಿಸುವವರ ಮನೆಯಲ್ಲಿ ನಿಗದಿತ ದಿನದಂದು ರಾತ್ರಿ ೯-೧೦ ಗಂಟೆಯ ನಂತರ ಗೊಂದಲಿಗರು ತಮ್ಮ ಪದ್ಧತಿಯಂತೆ ಕಲಶ ಸ್ಥಾಪನೆ ಮಾಡಿ ಅಂಬಾಭವಾನಿಯನ್ನು ಅಹ್ವಾನಿಸುತ್ತಾರೆ. ಗೊಂದಲದ ಆರಂಭದಲ್ಲಿ ತಮ್ಮ ವಾದ್ಯಮೇಳದೊಂದಿಗೆ ದೇವತೆಗಳ ಶ್ರವಣರೂಪದ ಹಾಡುಗಳನ್ನು ಹಾಡುತ್ತಾರೆ. ಅವರಲ್ಲೊಬ್ಬ ಈಪವಿತ್ರ ಸಂದರ್ಭಕ್ಕೆ ನಿಗದಿಯಾದ ಎಣ್ಣೆಯ ಕಿಮಟು ಮುಳಗಿದ ನಿಲುವಂಗಿ ತೊಟ್ಟು, ತಲೆಗೊಂದು ಅದರದೇ ಕವಡಿ ಹೆಣೆದ ಕುಲಾಯಿ ಹಾಕಿಕೊಂಡಿರುತ್ತಾನೆ. ಕೊರಳಲ್ಲಿ ಕವಡಿಸರ, ಎದೆಯ ಮೇಲೆ ಜಗದಂಬೆಯ

ಉಬ್ಬು ಶಿಲ್ಪವಿರುವ ಓತ್ತಾಳೆ ತಗಡು ಧರಿಸಿರುತ್ತಾರೆ. ಕುಂಕುಮ-ಸಾದಗಳಿಂದ ಮುಖಾಲಂಕಾರ ಮಾಡಿಕೊಂಡಿರುತ್ತಾರೆ. ಆತನ ಎರಡೂ ಕೈಗಳಲ್ಲಿ ಬಟ್ಟೆಗಳನ್ನು ಹುರಿಮಾಡಿ ನಿರ್ಮಿಸಿದ ಒಂದೊಂದು ಉರಿವ ಕಕ್ಕಡಗಳಿರುತ್ತವೆ. ಆತನನ್ನು 'ಪೈಂತ್‌ಮಾಮ್' ಎನ್ನುತ್ತಾರೆ. ಹಿಮ್ಮೇಳಿಗರ ಹಾಡು ವಾದ್ಯಗಳ ಸಾಂಗತ್ಯದೊಂದಿಗೆ ರಾತ್ರಿಯೆಲ್ಲಾ ಆತ ಆಗಾಗ ನರ್ತಿಸುತ್ತಾನೆ. ಆತನ ಭಾವಾವೇಶ ಇಡೀ ವಾತಾವರಣ ವನ್ನೇ ಭಕ್ತಿಮಯವಾಗಿರಿಸುತ್ತದೆ.

ಗೊಂದಲಿಗರು ತಮ್ಮ ಗೊಂದಲಕ್ಕೆ 'ಬನ್ನಿ ಮಹಾಂಕಾಳಿ'ಯಂಥಾ 'ರೇಣುಕಾ ಮಹಾತ್ಮೆ'ಯ ಭಕ್ತಿ ಪ್ರಧಾನ ಕಥೆಗಳನ್ನು ಆಯ್ದುಕೊಳ್ಳುವದೇ ಹೆಚ್ಚು. ಜೊತೆಗೆ ಜಯರಾಣಿ, ಬಾಳವತಿ, ರಸ್ತಾಳರಾಜ, ಶೀಲಾವತಿ, ಬಾಳಭಿಕ್ಷುಕ, ಅರಣ್ಯಕುಮಾರ ಮುಂತಾದ ನೀತಿಪರ ಕಥೆಗಳನ್ನು ಬಳಸುತ್ತಾರೆ. ಗೊಂದಲದ ಆಟಗಳಲ್ಲಿ ದೇವಿಸ್ತುತಿ ಮತ್ತು ಕುಣಿತಗಳಿಗೆ ಪ್ರಾಧಾನ್ಯತೆ ಹೆಚ್ಚು. ಆಟದ ಮಧ್ಯೆ ಉಪಕಥೆ-ತತ್ವಪದ ಗಳು ಬೇಸರ, ಯಾಂತ್ರಿಕತೆಗಳನ್ನು ನೀಗಿ ಮನರಂಜನೆ ಮೂಲಕ ನಡುರಾತ್ರಿ ಕಳೆಯಲು ಸಹಾಯಕ ವಾಗುತ್ತದೆ" ಎಂಬ ವಿವರಣೆಯನ್ನು ನೀಡಿದ್ದಾರೆ.

ಪಂಜಿನ ಬೆಳಕಿನ ಮಧ್ಯದಲ್ಲಿ ದೇವಿಯ ಆರಾಧನೆ ಹಾಡು-ಕಥೆ ಸಂಕೀರ್ತನೆ ಮಾಡುವ ಈ ಆಚರಣೆಯು ದೈವಿಭಾವನೆಯನ್ನು ಮೂಡಿಸುವದರ ಜೊತೆಗೆ ನೈತಿಕಮೌಲ್ಯಗಳನ್ನು ಜಾಗೃತಗೊಳಿಸುವ ಪಾರಂಪರಿಕ ವೃತಾಚರಣೆಯಾಗಿದೆ. ಗೊಂದಲ ಪೂಜೆಯ ಆಚರಣೆಗೆ ಸಂಬಂಧಪಟ್ಟಂತೆ ಕೆಲವು ಭಾಗಗಳಲ್ಲಿ ಗುಡಿಯ ಮುಂದೆ ಅಥವಾ ಗುಡಿಯ ಒಳಗಡೆ ಹಾಕುವ ಗೊಂದಲಕ್ಕೆ 'ಗುಡಿ ಗೊಂದಲ'ವೆಂದು, ಗುಡಿಯ ಮಗ್ಗುಲಲ್ಲಿ ಹಾಕುವ ಗೊಂದಲಕ್ಕೆ 'ಬಯಲು ಗೊಂದಲ' ಎಂದು ಕರೆಯುತ್ತಾರೆ. ಇದಷ್ಟೇ ಅಲ್ಲ, ಗೊಂದಲ ಪೂಜಾಚರಣೆಯ ಸಂದರ್ಭದಲ್ಲಿ ಪಾಲ್ಗೊಳ್ಳುವ/ ನೆರವೇರಿಸಲ್ಪಡುವ ಗೊಂದಲಿಗರ ಸಂಖ್ಯೆಗೆ ಅನುಗುಣವಾಗಿ ಅದರಲ್ಲಿ ಪ್ರಕಾರಗಳನ್ನು ಕಾಣುತ್ತೇವೆ.

"ಗೊಂದಲಿಗರು ಶಕ್ತಿಯ ಆರಾಧನೆಯನ್ನು ಮಾಡಿ, ತಾವು ಶಕ್ತಿಯನ್ನು ಅಹ್ವಾನಿಸುವ ಪದ್ಧತಿಗೆ ಗೊಂದಲ ಪೂಜೆ, ಗೋಂಧಳ ಪೂಜೆ, ಗೊಂದಲ ಹೀಗೆ ಕರೆಯುವುದುಂಟು ಗೊಂದಲ ಕಾರ್ಯಕ್ರಮವನ್ನು 'ಉತ್ತಮ ಗೊಂದಲ', ಮದ್ಯಮ ಗೊಂದಲ ಮತ್ತು 'ಸಾಧಾರಣ ಗೊಂದಲ' ವೆಂದು ಮೂರು ಬಗೆಯಾಗಿ ನಡೆಸುತ್ತಾರೆ".[೫]

ಇದೇ ರೀತಿ ಅಮಲಿಕಾ ಗ್ರಾಮ ಮಹಾತ್ಮೈ (ಮಾಹೂರ ಕ್ಷೇತ್ರ ವರ್ಣನೆ) ಎಂಬ ಸಂಸ್ಕೃತ ಗ್ರಂಥದಲ್ಲಿ "ಕವಡೆಗಳ ಮಾಲೆಯನ್ನು ಹಾಕಿಕೊಂಡು ದೀವಟಿಗೆ ಹಿಡಿದು ಗೊಂದಳ ಹಾಕಬೇಕು. ಎಲ್ಲಿ ಗೊಂದಲ ಹಾಕಬೇಕೋ ಅಲ್ಲಿ ಆ ಸ್ಥಳದಲ್ಲಿರುವ ಎಲ್ಲರನ್ನೂ ಆಮಂತ್ರಿಸಬೇಕು ಗೋಂದಳಕ್ಕೆ ದೀವಟಿಗೆ, ಕವಡೆಗಳ ಮಾಲೆ, ಮಾತೃವಾದ್ಯ (ತುಂತುಣಿ), ತಾಳ, ಶಂಖ, ಮೃದಂಗ, ಬೆಟಗಿ, ವೀಣೆ, ಚಂಡೆ, ಮುರಜ ಇತ್ಯಾದಿ ವಾದ್ಯಗಳ ಅಗತ್ಯ ಇರುತ್ತದೆ. ಗೊಂದಲಿ ವೃಂದದಲ್ಲಿ ಉತ್ತಮ, ಮಧ್ಯಮ ಹಾಗೂ ಕನಿಷ್ಟ ಹೀಗೆ ಮೂರು ಬೇಧಗಳಿವೆ"[೬] ಎಂಬ ವಿವರಣೆಯನ್ನು ಕಾಣುತ್ತೇವೆ.

ಈ ಹಿನ್ನೆಲೆಯಲ್ಲಿ ಗೊಂದಲ ಪೂಜೆಯಲ್ಲಿ ಪಾಲ್ಗೊಳ್ಳುವ ಆಚಾರಕ ಗೊಂದಲಿಗ ವೃಂದಕ್ಕನು ಗುಣವಾಗಿ ಮಾಡಿರುವ ಬೇಧಗಳು:

೧. ಉತ್ತಮ ಗೊಂದಲ: ಬೃಹತ್ತಾದ ಗೊಂದಲ ಮೇಳವಾಗಿ ಇದರಲ್ಲಿ ೩೨ ಮಂದಿ ಪಾಲ್ಗೊಂಡಿರುತ್ತಾರೆ.

೨. ಮಧ್ಯಮ ಗೊಂದಲ: ಹೆಸರಿಗನುಗುಣವಾಗಿ ಮಧ್ಯಮ ತೆರನಾದ ಗೊಂದಲ ಮೇಳವಾಗಿರುವ ಇದರಲ್ಲಿ ೧೬ ಜನರು ಇರುತ್ತಾರೆ.

೩. ಕನಿಷ್ಟ ಗೊಂದಲ: ಈ ಗೊಂದಲ ಆಚರಣೆಯು ೮ ಜನರನ್ನು ಒಳಗೊಂಡಿರುತ್ತದೆ. ಇದರ ಜೊತೆಗೆ ಇನ್ನೊಂದು ತೆರನಾದ ಗೊಂದಲ ಆಚರಣೆಯನ್ನು ಕಾಣುತ್ತೇವೆ.

೪. ಅತಿ ಕನಿಷ್ಟ ಗೊಂದಲ: ಈ ಗೊಂದಲ ಆಚರಣೆಯ ವೃಂದದಲ್ಲಿ ಕೇವಲ ೩-೫ ಜನರು ಮಾತ್ರ ಇರುತ್ತಾರೆ.

ಗೊಂದಲ ಪೂಜಾ ಆರಾಧನೆಯ ಹಿನ್ನೆಲೆಯಲ್ಲಿಯೇ ಗುರುತಿಸಿಕೊಂಡಿರುವ ಗೊಂದಲಿಗರು ತಮ್ಮ ದೈವಾರಾಧನೆಯ ಪ್ರತಿಯೊಂದು ಸಂದರ್ಭಗಳಲ್ಲಿ ಗೊಂದಲ ಪೂಜೆಯನ್ನು ಮಾಡುವುದು ಸರ್ವೇಸಾಮಾನ್ಯ. ಒಂದು ದೃಷ್ಟಿಯಲ್ಲಿ ಗೊಂದಲ ಪೂಜೆಯ ನಂತರವೇ ಅವರ ದೈವಾಚರಣೆಯ ಚಟುವಟಿಕೆಗಳು ಪ್ರಾರಂಭವಾಗುತ್ತವೆ. ಅವರ ವಾರ್ಷಿಕಾವರ್ತನ ಆಚರಣೆಗಳು ಅಥವಾ ಹಬ್ಬಗಳ ಸಂದರ್ಭದಲ್ಲಿಯೂ ಗೊಂದಲ ಆಚರಿಸುತ್ತಿರುವುದು ಅವರ ಸಂಪ್ರದಾಯವಾಗಿದೆ.

ಸಾಮಾನ್ಯವಾಗಿ ವಿಜಯದಶಮಿ, ಮದುವೆ ,ಉಪನಯನದ ಸಂದರ್ಭದಲ್ಲಿ ಹಾಗೂ ಆಷಾಢದಲ್ಲಿ ಆಚರಿಸುವ ದುರ್ಗಾದೇವಿಯ ಹಬ್ಬ/ಜಾತ್ರೆಯ ಸಮಯದಲ್ಲಿ, ಗೊಂದಲ ಹಾಕುವುದು ಕಂಡುಬರುತ್ತದೆ. ವಿವಾಹದ ಸಂದರ್ಭದಲ್ಲಿ ಗೊಂದಲ ಪೂಜೆಯು ಮನೆಯಲ್ಲಿ ಅಥವಾ ಮನೆಯ ಹೊರಗಿನ ಹಜಾರ ಅಥವಾ ಕಟ್ಟೆಯ ಮೇಲೆ ನಡೆಯುತ್ತದೆ. ನವರಾತ್ರಿ, ಆಷಾಡದಲ್ಲಿ ಆಚರಿಸುವ ತಮ್ಮ ಸಾಮುದಾಯಿಕ ಹಬ್ಬದಲ್ಲಿ ಸಮುದಾಯದ ದುರ್ಗಾದೇವಿ ಗುಡಿಯ ಮುಂದೆ ಗೊಂದಲ ಪೂಜೆಯನ್ನು ಆಚರಿಸುತ್ತಾರೆ.

ಗೊಂದಲ ಪೂಜೆಯಲ್ಲಿ **ಪೂರ್ವರಂಗ** ಮತ್ತು **ಉತ್ತರರಂಗ** ಎಂಬ ಎರಡು ಭಾಗಗಳನ್ನು ಮಾಡುತ್ತಾರೆ. ಈ ಎರಡು ಭಾಗಗಳನ್ನು ಕೆಲವರು ಪೂರ್ವಪೂಜೆ ಮತ್ತು ಉತ್ತರ ಪೂಜೆ ಎಂದು ಕರೆಯುತ್ತಾರೆ. ಪೂರ್ವರಂಗದಲ್ಲಿ ಕಳಶಸ್ಥಾಪನೆ, ದೇವಿಯ ಪ್ರತಿಷ್ಠಾಪನೆ, ಕಳಶದೇವಿ ಪೂಜೆ, ದೀವಟಿಗೆ ಮತ್ತು ಕಕ್ಕಡಗಳನ್ನು ಉರಿಸುವುದು ಪ್ರಮುಖವಾಗಿ ಕಂಡುಬರುತ್ತದೆ. ಹಾಗೆಯೇ ಉತ್ತರ ರಂಗದಲ್ಲಿ ಶಕ್ತಿದೇವತೆಗಳ ಆರಾಧನೆ, ಹಾಡು ಕೀರ್ತನೆ, ಕುಣಿತ ಮುಂತಾದವುಗಳ ಜೊತೆಗೆ ದೇವಿಕಳಸಕ್ಕೆ ಪೂಜೆ ಮಾಡುವದನ್ನು ಕಾಣುತ್ತೇವೆ.

## ವಿವಾಹ ಸಂದರ್ಭದಲ್ಲಿ ಆಚರಿಸುವ ಗೊಂದಲ ಪೂಜೆ

ಗೊಂದಲಿಗರು ವಿವಾಹದ ಸಂದರ್ಭದಲ್ಲಿ ಹೊರಗಿನ ದೇವರು-ಒಳಗಿನ ದೇವರು ಅಂತಾ ಪ್ರಾರಂಭಿಕವಾಗಿ ದೇವತಾಕಾರ್ಯಗಳನ್ನು ಮಾಡುತ್ತಾರೆ. ಹೊರಗಿನ ದೇವತಾ ಕಾರ್ಯವನ್ನು ಊರ ಹೊರಗೆ ೫-೬ ಕಿ.ಮೀ. ದೂರ ಹೋಗಿ ಯಾವದಾದರೂ ಹೊಲದಲ್ಲಿ ಅಥವಾ ಗುಡ್ಡ/ಕಾಡಿನಲ್ಲಿ ಹೊನ್ನಿಗಿಡ/ಅವರೇಗಿಡದ ಹತ್ತಿರ ಮೂರ್ತಿಯನ್ನು ಮಾಡಿ ಅದಕ್ಕೆ ಪೂಜೆ ನಂತರ ಬಲಿ ಕೊಡುವ ಪದ್ಧತಿಯನ್ನು ಅನುಸರಿಸುತ್ತಿದ್ದರೆ, ಒಳಗಿನ ದೇವತಾರಾಧನೆಯ ಕಾರ್ಯವನ್ನು ದೇವಿಯ ಪೂಜೆಯನ್ನು ಮಾಡುವುದರ ಮೂಲಕ ಆಚರಿಸುತ್ತಾ ಬಂದಿದ್ದಾರೆ. ಸಾಮಾನ್ಯವಾಗಿ ಈ ಸಂದರ್ಭದಲ್ಲಿ ಸಾಯಂಕಾಲ ಗೊಂದಲ ಪೂಜೆಯನ್ನು ನೇರವೇರಿಸುತ್ತಾರೆ.

ವಿವಾಹದ ಸಂದರ್ಭದಲ್ಲಿ ಸೂಲಿಗೆ/ಸುರಿಗಿ ನೀರಿನ ಸ್ನಾನವಾದ ನಂತರ ಸಾಯಂಕಾಲದ ಅವಧಿಯಲ್ಲಿ ಗೊಂದಲದ ಕಾರ್ಯಕ್ರಮವನ್ನು ಪ್ರಾರಂಭಿಸುತ್ತಾರೆ. ಗೊಂದಲದ ಕಾರ್ಯಕ್ರಮದ ದಿನ ಮನೆಯವರು ಗೊಂದಲ ಹಾಕುವ ಗೊಂದಲಿಗರನ್ನು ಅಹ್ವಾನಿಸಬೇಕು. ಅವರು ಗೊಂದಲದ ಪೂಜೆಗೆ ಬೇಕಾಗುವ ಎಲ್ಲಾ ಸಾಮಗ್ರಿಗಳನ್ನು ತರಿಸಿಕೊಂಡು ರಾತ್ರಿಯಾಗುತ್ತಿದ್ದಂತೆ ಗೊಂದಲ ಪೂಜಾ ಕಾರ್ಯಗಳ ಸಿದ್ಧತೆಯನ್ನು ಮಾಡಿಕೊಳ್ಳುತ್ತಾರೆ. ಸಾಮಾನ್ಯವಾಗಿ ಗೊಂದಲಿಗರ ಮನೆಯ ಹಜಾರವು ಚಿಕ್ಕದಾಗಿರುವುದರಿಂದ ಮನೆಯ ಮುಂದೆಯೇ ಮಾಡುತ್ತಾರೆ. ಮನೆಯ ಮುಂದಿರುವ ಕಟ್ಟೆಯನ್ನು ಸಗಣಿಯಿಂದ ಸಾರಿಸುವ ಹಾಗಿದ್ದರೆ ಸಾರಿಸುತ್ತಾರೆ, ಇಲ್ಲದಿದ್ದರೆ ಕಟ್ಟೆಯನ್ನು ನೀರಿನಿಂದ ಸ್ವಚ್ಛವಾಗಿ ತೊಳೆದು ಶುಚಿಗೊಳಿಸುತ್ತಾರೆ. ನಂತರ ಅದರ ಮೇಲೆ ಜಮಖಾನ ಅಥವಾ ಕಂಬಳಿಯನ್ನು ಹಾಸುತ್ತಾರೆ. ಅವಾಗ್ಗೆ ಗೊಂದಲ ಪೂಜೆ ಕಾರ್ಯ ಮಾಡುವವನು ಜಮಖಾನ ಅಥವಾ ಕಂಬಳಿಯ ಮೇಲೆ ಮಣೆಯನ್ನು ಇಟ್ಟು ಅದರ ಮೇಲೊಂದು ಬಟ್ಟೆಯನ್ನು ಹಾಸಿ ಅದರ ಮೇಲೆ ಸಾಮಾನ್ಯವಾಗಿ ಐದು ಸೇರು ಅಕ್ಕಿಯನ್ನು ಸುರುವಿ, ಅದನ್ನು ಚಚ್ಚೌಕಾರಕ್ಕೆ ಸಮತಟ್ಟು ಮಾಡುತ್ತಾನೆ. ಅದರ ಮಧ್ಯದಲ್ಲಿ ಕುಂಭವನ್ನಿಟ್ಟು, ಕುಂಭದೊಳಗೆ ಐದು ಎಲೆಗಳನ್ನು ಇಟ್ಟು, ಅದರಲ್ಲಿ ತೆಂಗಿನಕಾಯಿಯನ್ನು ಇಡುತ್ತಾನೆ. ಅದಕ್ಕೆ ಕುಂಕುಮ-ಅರಿಷಿಣವನ್ನು ಹಚ್ಚಿ ಪೂಜೆ ಮಾಡುತ್ತಾರೆ. ಕೆಲವರು ಕುಂಭದ ಮೇಲಿರುವ ಕಾಯಿಗೆ ದೇವಿ ಅಂಬಾಭವಾನಿಯ ಮೂರ್ತಿಯನ್ನು ಹಾಕುತ್ತಾರೆ, ಇನ್ನು ಕೆಲವರು, ಕುಂಭದ ಮುಂದುಗಡೆ ದೇವಿಯ ಮುಖವನ್ನು ಇಟ್ಟು ಪ್ರತಿಷ್ಠಾಪಿಸುತ್ತಾರೆ. ಕುಂಭದೇವಿಗೆ ಬಂಗಾರದ ಆಭರಣಗಳನ್ನು ಹಾಕಿ ಅಲಂಕಾರ ಮಾಡಿ ಹೊಸ ಕುಪ್ಪಸದ ಖಣವನ್ನು ಇಟ್ಟು, ಹೂ-ಮಾಲೆಗಳಿಂದ ಶೃಂಗರಿಸುತ್ತಾರೆ. ಕುಂಭದ ಸುತ್ತಲೂ ಬಾಳೆ ಕಂಬ ಹಾಗೂ ಕಬ್ಬಿನಗಳಗಳನ್ನು ಕಟ್ಟಿರುತ್ತಾರೆ. ಕುಂಭದ ನಾಲ್ಕು ದಿಕ್ಕಿಗೂ ೫ ಎಲೆ, ೫ ಅಡಿಕೆ, ೫ ಅರಿಷಿಣ ಬೇರು, ೫ ಲಿಂಬೆ ಹಣ್ಣು, ೫ ಬಾಳೆಹಣ್ಣು, ೫ ಉತ್ತತ್ತಿ, ೫ ನಾಣ್ಯಗಳನ್ನು ಇಟ್ಟಿರುತ್ತಾರೆ. ದೇವಿಯ ಮುಂದೆ ಧೂಪ ದುಂಡಿಗೆ, ಅರಿಷಿಣ-ಕುಂಕುಮದ ಬಟ್ಟಲು, ಪಂಚಾರತಿಯನ್ನು ಇಡುವುದರ ಜೊತೆಗೆ ಗೋಧಿ ಹಿಟ್ಟಿನ ಕನಕದ ೫ ಹಣತೆಯಲ್ಲಿ ದೀಪವನ್ನು ದೇವಿಯ ಬಲ ಭಾಗಕ್ಕೆ ಹಾಗೂ ದೀವಟಿಗೆಯನ್ನು ಹಚ್ಚಲಾಗುತ್ತದೆ. (ದೀವಟಿಗೆಯು ಕಬ್ಬಿಣದಿಂದ ಮಾಡಿದ್ದು ಅದರ ತುದಿಗೆ ಜೋಳದ ಹಿಟ್ಟನ್ನು

ದಪ್ಪವಾಗಿ ಮೆತ್ತಿ ಅದಕ್ಕೆ ಡಬ್ಬಳ ಚುಚ್ಚಿ ಆ ಡಬ್ಬಳಕ್ಕೆ ಎಣ್ಣೆಯಲ್ಲಿ ಅದ್ದಿದ ಗಗ್ಗರದ ಗಾತ್ರದ ಸಿಂಬಿಗಳನ್ನು ಸಿಕ್ಕಿಸಿ ಹೊತ್ತಿಸುತ್ತಾರೆ.) ಗೊಂದಲ ಹಾಕುವವನು ಗಂಧ, ಅರಿಷಿಣ, ಕುಂಕುಮ ಹಚ್ಚಿ ಹೂವುಗಳಿಂದ ಶೃಂಗರಿಸಿ ಪೂಜೆ ಮಾಡಿ, ಮನೆಯಲ್ಲಿ, ಮಾಡಿದ ಪ್ರಸಾದವನ್ನು ನೈವೇದ್ಯ ಮಾಡಿ ನಮಸ್ಕರಿಸುತ್ತಾನೆ. ಈ ಸಂದರ್ಭದಲ್ಲಿ ತಮ್ಮ ಮೂಲ ವಾದ್ಯಗಳಾದ ಸಂಬಾಳ–ಚೌಡಿಕೆಯನ್ನು ದೇವಿಯ ಮುಂದುಗಡೆ ಇಟ್ಟು ಅದನ್ನು ಪೂಜಿಸುತ್ತಾರೆ. ನಂತರ ಬಂದಿರುವ ಎಲ್ಲರಿಗೂ ದೇವಿ ಯನ್ನು ನಮಸ್ಕರಿಸಲು ಸೂಚಿಸುತ್ತಾನೆ. ಈ ರೀತಿ ದೇವಿ ಆರಾಧನೆಯ ಪೂಜೆಯ ಕೈಂಕರ್ಯಗಳು ಮುಗಿದ ನಂತರ ಪೂಜೆ ಮಾಡಿರುವ ಸಂಭಾಳ-ಚೌಡಿಕೆಯನ್ನು ತೆಗೆದುಕೊಂಡು ಗೊಂದಲವನ್ನು ಪ್ರಾರಂಭಿಸುತ್ತಾರೆ. ಇಲ್ಲಿ ಸಂಭಾಳ ಹೊಂದಿರುವ ವ್ಯಕ್ತಿಯೇ ಮುಖ್ಯ ಗಾಯಕ, ಇನ್ನೊಬ್ಬನು ಚೌಡಿಕೆಯನ್ನು ಹಿಡಿದಿರುತ್ತಾನೆ. ಗೊಂದಲಿಗರು ವಾದ್ಯಗಳ ಮೂಲಕ ನಾದ ಮಾಡುತ್ತಾ ಪ್ರಾರಂಭದಲ್ಲಿ ದೇವಿಸ್ತುತಿ, ಗಣಪತಿ ಸ್ತೋತ್ರಗಳನ್ನು ಹಾಡುವುದರ ಮೂಲಕ ಕಥೆ-ಹಾಡುಗಳನ್ನು ಮುಂದುವರೆಸುತ್ತಾ ಬೆಳಗು ಹರಿಸುತ್ತಾರೆ.

ಬೆಳಗಿನ ವೇಳೆಯಲ್ಲಿ ಮನೆಯ ಹೊರಗೆ ಬಂದು ತುಂಬಿದ ಚರಿಗೆ, ತೆಂಗಿನಕಾಯಿ ಹಾಗೂ ಕರ್ಪೂರ ಹಚ್ಚಿ ಉತ್ತರಿ ಪೂಜೆಯನ್ನು ಮಾಡುತ್ತಾ ಸಂಬಾಳ-ಚೌಡಿಕೆಯನ್ನು ದೀವಟಿಗೆಯನ್ನು ಹಿಡಿದವರು ಕುಣಿಯುತ್ತಾ ಕೊನೆಗೆ ದೇವಿಗೆ ನಮಸ್ಕರಿಸುತ್ತಾರೆ. ನಂತರ ದೀವಟಿಗೆಯನ್ನು ಹಾಲಿನಲ್ಲಿ ಎದ್ದಿ ನಂದಿಸುವುದರ ಮೂಲಕ ಗೊಂದಲ ಕಾರ್ಯಕ್ರಮವನ್ನು ಮುಗಿಸುತ್ತಾರೆ.

**ದೇವಸ್ಥಾನದಲ್ಲಿ ಮಾಡುವ ಗೊಂದಲ ಪೂಜೆ**

ದೇವಸ್ಥಾನದಲ್ಲಿ ಮಾಡುವ ಗೊಂದಲ ಪೂಜೆ ಸಾಮಾನ್ಯವಾಗಿ ನವರಾತ್ರಿಯ ಹಾಗೂ ಆಷಾಡ ದಲ್ಲಿ ಆಚರಿಸುವ ಸಂದರ್ಭದಲ್ಲಿ ತಮ್ಮ ಸಮುದಾಯದಲ್ಲಿ ನಿರ್ಮಿಸಿರುವ ದೇವಿಯ ಗುಡಿಯ ಮುಂದೆ ಗೊಂದಲ ಹಾಕುತ್ತಾರೆ. ದೇವಿಯ ಗುಡಿಯ ಮುಂದೆ ಗೊಂದಲ ಹಾಕಬೇಕಾದಾಗ ಅದರ ಏರ್ಪಾಡುಗಳನ್ನು ಮಾಡುವುದು ಸುಲಭವಾಗುತ್ತದೆ. ಆದರೆ ಮನೆಯಲ್ಲಿ ಹಾಕುವ ಗೊಂದಲದ ರೀತಿಯಲ್ಲಿಯೇ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ.

ಗೊಂದಲ ಪೂಜೆ ಮಾಡುವ ದಿನದಂದು ಸಮುದಾಯದ ಎಲ್ಲರಿಗೂ ಬೆಳಗಿನ ಸಮಯದಲ್ಲಿ ಸೇರಲು ಸೂಚಿಸಲಾಗಿರುತ್ತದೆ. ಸಮುದಾಯದವರು ತಮ್ಮ-ತಮ್ಮ ಬಂಧು-ಬಳಗದವರಿಗೂ ಮುಂಚಿತ ವಾಗಿಯೇ ಅಹ್ವಾನಿಸಿರುತ್ತಾರೆ. ಬೆಳಗಿನ ಸಮಯದಲ್ಲಿ ಎಲ್ಲರೂ ಸೇರಿದ ಮೇಲೆ ಗೊಂದಲದ ಪೂರ್ವರಂಗ ಪ್ರಾರಂಭವಾಗುತ್ತದೆ.

ಗೊಂದಲದ ಪೂಜೆಯ ಸ್ಥಳದಲ್ಲಿ ಚೌಕಾಕಾರದ ಮಣೆಯನ್ನಿಟ್ಟು, ಅದರ ನಾಲ್ಕು ತುದಿಗಳಿಗೂ ಅಕ್ಕಿಕಾಳನ್ನು ಹಾಕಿ, ಮದ್ಯದಲ್ಲಿ ಕಳಸವನ್ನು ಇಡುತ್ತಾರೆ. ಕೆಲವು ಕಡೆ ದೇವಿಯಮೂರ್ತಿ ಇದ್ದರೆ ಕಳಸದ ಮುಂದೆ ಇಡುತ್ತಾರೆ. ಕುಬಸದ ಖಣವನ್ನು ಅದರ ಮುಂದೆ ಇಟ್ಟು, ದೇವಿ ಪ್ರತಿಷ್ಠಾಪನೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಪೂಜೆಯ ಪಕ್ಕದಲ್ಲಿ ತಮ್ಮ ಮೂಲವಾದ್ಯಗಳನ್ನು ಇಟ್ಟು,

ದೇವಿಗೆ ಹಾಗೂ ವಾದ್ಯಗಳಿಗೆ ಅರಿಷಿಣ-ಕುಂಕುಮಗಳಿಂದ ಪೂಜೆ ಮಾಡುತ್ತಾರೆ. ಹೂವು, ಹಣ್ಣು, ಬಾಳೆಕಂಬ, ಕಬ್ಬುಗಳಗಳಿಂದ ಪ್ರತಿಷ್ಟಾಪನೆ ಮಾಡಿದ ದೇವಿಯ ಸನ್ನಿಧಿಯನ್ನು ಅಲಂಕೃತಗೊಳಿಸಿ, ಧೂಪ, ದೀಪ, ಕರ್ಪೂರಗಳನ್ನು ಬೆಳಗಿ, ನೈವೇದ್ಯ ಮಾಡಿದ ನಂತರ ಎಲ್ಲರೂ ಆ ದೇವಿಗೆ ನಮಸ್ಕರಿಸುತ್ತಾರೆ. ನಂತರ ಪೂಜೆ ಮಾಡಿದ ವಾದ್ಯಗಳನ್ನು ತೆಗೆದುಕೊಂಡು ವಾದ್ಯಗಾರರು ತಮ್ಮ-ತಮ್ಮ ವಾದ್ಯಗಳನ್ನು ನುಡಿಸಲು ಪ್ರಾರಂಭಿಸುತ್ತಾರೆ. ನಮಸ್ಕರಿಸಲು ಬಂದ ಭಕ್ತರಿಗೆ ಅರಿಷಿಣ-ಕುಂಕುಮವನ್ನು ಹಚ್ಚುತ್ತಾರೆ. ಪೂಜೆ ಮಾಡಿದ ಮುಖ್ಯ ಗೊಂದಲಿಗನು ಸಂಭಾಳ ವಾದ್ಯವನ್ನು ಬಾರಿಸುತ್ತಾ ದೇವಿಗೆ ಸ್ತುತಿಯನ್ನು ಆವೇಶಭರಿತನಾಗಿ ಹೇಳುತ್ತಿರುವಾಗ ಬಂದ ಭಕ್ತರು ದೇವಿಗೆ ಉದೋ-ಉದೋ ಎಂದು ಹೇಳುತ್ತಾ, ಕೆಲವರು ಸ್ತ್ರೀ-ಪುರುಷರೆನ್ನದೇ ಕುಣಿಯುತ್ತಾರೆ. ಕೆಲವು ಕಡೆ ಸರದಿಯ ಮೇಲೆ ಕುಣಿಯುವುದುಂಟು. ಹೀಗೆ ಈ ಕಾರ್ಯಕ್ರಮವು ಮಧ್ಯಾಹ್ನದವರೆಗೂ ಮುಂದುವರೆಯುತ್ತದೆ. ನಂತರ ಎಲ್ಲರಿಗೂ ಊಟದ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ ಸಾಮೂಹಿಕವಾಗಿ ಊಟ ಮಾಡುತ್ತಾರೆ.

ಸಾಯಂಕಾಲದ ಅವಧಿಯಲ್ಲಿ ಕಳಸಕ್ಕೆ ಪೂಜೆ-ಆರತಿ ಬೆಳಗುವುದರ ಮೂಲಕ ಗೊಂದಲದ ಉತ್ತರರಂಗವು ಪ್ರಾರಂಭವಾಗುತ್ತದೆ. ಹೊತ್ತಿರುವ ದೀವಟಿಗೆ-ಕಕ್ಕಡಗಳ ಮಧ್ಯದಲ್ಲಿ ಮುಖ್ಯ ಹಾಡುಗಾರನು ಇನ್ನುಳಿದ ವಾದ್ಯಗಾರರೊಂದಿಗೆ, ಶಕ್ತಿ ದೇವತೆಗಳಿಗೆ ಸಂಬಂಧಿಸಿದ ಪುರಾಣ-ಕಥೆಗಳನ್ನು ಹಾಗೂ ಅವರನ್ನು ಸ್ತುತಿಸುವ ಹಾಡುಗಳನ್ನು ಹೇಳುತ್ತಾ ಮಧ್ಯದಲ್ಲಿ ಹಾಸ್ಯಗಳನ್ನು ಹೇಳುತ್ತಾನೆ. ಹೀಗೆ ಹಾಡು-ಕಥೆಗಳ ಸಂಕೀರ್ತನ ಬೆಳಗಿನವರೆಗೆ ನಡೆಯುತ್ತದೆ. ನಂತರ ಶಕ್ತಿದೇವಿಯ ಕಳಸಕ್ಕೆ ಪೂಜೆ ಮಾಡಿ ಆರತಿ ಬೆಳಗಿ ನಮಸ್ಕರಿಸುತ್ತಾರೆ. ಆಮೇಲೆ ಗೊಂದಲ ಪೂಜೆ ನಡೆಸಿಕೊಟ್ಟ ತಂಡದವರಿಗೆ ನಿರ್ದಿಷ್ಟ ಪಡಿಸಿದ ದಕ್ಷಿಣೆಯನ್ನು ಕೊಡುತ್ತಾರೆ.

ಹೀಗೆ ಗೊಂದಲ ಪೂಜೆಯು ದೈವಿಕತೆಗೆ ಬದ್ಧವಾದ ಒಂದು ಆರಾಧನೆಯಾಗಿದ್ದು, ಗೊಂದಲಿಗರ ಆನುವಂಶಿಕ-ಪಾರಂಪರಿಕ ವೃತ್ತಿಯೇ ಆಗಿದೆ. ಗೊಂದಲಿಗರ ಸಮುದಾಯದ ವಿಶೇಷ ಆಚರಣಾ ಕ್ರಮವು ಇದಾಗಿದೆ. "ಗೊಂದಲಿಗೆ ಕಲಾವಿದರು ವೃತ್ತಿಗಾಯಕರಾಗಿದ್ದು, ಸಂಬಾಳ, ಚೌಡಿಕೆ, ತಾಳ ಇವುಗಳ ಸಮ್ಮಿಳನ ವಾದ್ಯಗಳಿಂದ ತನ್ನ ವೃತ್ತಿ ಕುಲ ಕಸುಬಿನ ಮುಖಾಂತರ ಜನಪ್ರಿಯರಾಗಿ ಗೊಂದಲಿಗರೆಂದೇ ಜನಪದ ಶಬ್ದದಿಂದ ಕರೆಯಲ್ಪಡುತ್ತಾರೆ. ಇವರ ವಾದ್ಯಗಳು ವಿಶೇಷವಾಗಿರುತ್ತವೆ. ಮುಖ್ಯವಾಗಿ ಮದುವೆ, ಮುಂಜಿವೆ ದೈವಿ ಆಚರಣೆಗಳಲ್ಲಿ ಈ ಗೊಂದಲಿಗರ ಗೊಂದಳ ಅಥವಾ ಗೊಂದಲಿಗರ ಕಥೆಗಳನ್ನು ಹೇಳಿಸುತ್ತಾರೆ. ಅಲ್ಲದೇ ಹಿಂದಿನ ಕಾಲದಲ್ಲಿ ಊರಲ್ಲಿ ಯಾವದಾದರೂ ಕಾಡಾಟ ಅಥವಾ ಮಳೆ ಬಾರದ ಇದ್ದ ಪಕ್ಷದಲ್ಲಿ ಗೊಂದಲಿಗರನ್ನು ಕರೆಯಿಸಿ ರಾತ್ರಿಯಿಂದ ಬೆಳಗಿನವರೆಗೂ ಕಥೆ ಹೇಳಿಸುತ್ತಿದ್ದರು. ಮುಂದೆ ೫-೬ ದಿನಗಳಲ್ಲಿ ಮಳೆಯಾಗುತ್ತಿತ್ತು. ಇದರಿಂದ ಜನರ ಅನೇಕ ರೀತಿಯ ಸಮಸ್ಯೆಗಳು ದೂರಾಗುತ್ತಿದ್ದವು. ಆದ್ದರಿಂದಲೇ ಗೊಂದಲಿಗರ ಕಲೆಗೆ ಸಮಾಜದಲ್ಲಿ ಗೌರವ ಇತ್ತು. ವಿಶೇಷ ನಂಬಿಕೆಯೂ ಇತ್ತು. ಈಗಲೂ ಸಹ ಈ ಜನಪದ ಕಲೆಗೆ

ಅತ್ಯಂತ ವಿಶೇಷವಾದ ಗೌರವವಿದೆ".[೮] ಅಷ್ಟೇಅಲ್ಲ ಮನೆಗಳಲ್ಲಿಯೂ ಈ ಗೊಂದಲಿ ಪೂಜೆಯನ್ನು ನೆರವೇರಿಸುವುದರಿಂದ ದುಷ್ಟಶಕ್ತಿಗಳು ಮಾಯವಾಗಿ ಸಕಲ ಸಿದ್ಧಿಗಳು ಲಭಿಸುತ್ತವೆ ಎಂಬ ನಂಬಿಕೆಯೂ ಶಕ್ತಿದೇವತೆಯ ಆರಾಧಕರಲ್ಲಿ ಬೆಳೆದು ಬಂದಿದೆ.

"ಗೊಂದಲಿಗರ ಈ ಕಲೆಯು ಸಂಪ್ರದಾಯಗಳಿಂದ ಕೂಡಿದ ಸ್ವಚ್ಛಂದವಾದ ದೇಶಿಯ ಕಲೆಯಾಗಿದೆ. ರಾತ್ರಿ ಪ್ರಾರಂಭವಾಗಿ ಬೆಳಿಗ್ಗೆ ಮುಗಿಯುವ ಸಂಪ್ರದಾಯವನ್ನು ಹೊಂದಿರುವ ಈ ಕಲೆಯ ಕಾರ್ಯಕ್ರಮವು ನೋಡುಗರ ಮನಸ್ಸನ್ನು ಬೆಳಿಗ್ಗೆಯವರೆಗೆ ಸೆಳೆದಿಟ್ಟು ಕೊಳ್ಳುತ್ತದೆ. ಇಡೀ ರಾತ್ರಿ ಬೆಳಿಗ್ಗೆಯಾಗಿರುವದೇ ಗೊತ್ತಾಗುವದಿಲ್ಲ. ಏಕೆಂದರೆ ಗೊಂದಲಿಗರ ಹಾಡಿನ ಜೊತೆಗೆ ಹಗುರ ವಾದ ಅಥವಾ ನಯವಾದ ನೃತ್ಯ, ಲಯ, ತಾಳ, ಧ್ವನಿ ನೋಡುಗರ ಮನಸ್ಸು ಕಲೆಯ ಕಡೆಗೆ ಕೇಂದ್ರಿಕರಿಸುತ್ತದೆ. ಮಧ್ಯದಲ್ಲಿ ಗೊಂದಲಿಗರು ಹಾಸ್ಯ, ವಿಡಂಬನೆಗಳನ್ನು ಹೇಳಿ ಪ್ರೇಕ್ಷಕರ ಮನಸ್ಸನ್ನು ಸಂತೋಷಪಡಿಸುತ್ತಾರೆ. ಸಾಮಾನ್ಯವಾಗಿ ಈ ಗೊಂದಲಿಗರ ಕಲೆಯು ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತದಲ್ಲಿದೆ."[೯]

ಆಧುನಿಕತೆಯ ಇಂದಿನ ಸಂದರ್ಭದಲ್ಲಿ ಗೊಂದಲ ಪೂಜೆಯ ಆಚರಣೆಯು ಕಡಿಮೆಯಾಗುತ್ತಿದೆ. ಗೊಂದಲ ಪೂಜೆ ನಡೆಸುವವರ ಸಂಖ್ಯೆಯೂ ಕಡಿಮೆಯಾಗಿದೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಲ್ಲಲ್ಲಿ ನಡೆಯುತ್ತಿರುವ ಗೊಂದಲಿಗರ ಆಟಗಳ ಅವಧಿಯು ಕಡಿಮೆಯಾಗಿದ್ದು, ಕೇವಲ ೩ ಜನರಿಂದ ನಡೆಯಲ್ಪಡುವ ಈ ಗೊಂದಲವು ೩-೪ ಗಂಟೆಗಳ ಅವಧಿಯಲ್ಲಿ ಮುಗಿಸುವ ಕ್ರಮವು ಬೆಳೆದು ಬಂದಿರುವುದನ್ನು ಕಾಣುತೇವೆ.

### ಅಡಿಟಿಪ್ಪಣಿಗಳು

೧. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು, ಪು. ೧೯೪, ೨೦೧೧-೧೨
೨. ಬರಗೂರು ರಾಮಚಂದ್ರಪ್ಪ, ಗೊಂಡರ ಸಂಸ್ಕೃತಿ, ಸೈಯದ್ ಜಮೀರುಲ್ಲಾ ಷರೀಪ್, ಪು. ೨೦. (ಪ್ರಸ್ತಾವನೆ), ೧೯೯೩
೩. ಅದೇ, ಪು. ೨೫.
೪. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು, ಪು. ೧೭೭, ೨೦೧೧-೧೨
೫. ಅದೇ, ಪು. ೧೭೭
೬. ಬರಗೂರು ರಾಮಚಂದ್ರಪ್ಪ, ಗೊಂಡರ ಸಂಸ್ಕೃತಿ, ಸೈಯದ್ ಜಮೀರುಲ್ಲಾ ಷರೀಪ್, ಪು. ೧೦. (ಪ್ರಸ್ತಾವನೆ), ೧೯೯೩
೭. ಅದೇ, ಪು. ೧೩-೧೪.
೮. ಶಂಕರರಾವ್ ಚ.ನ., ಭಾರತೀಯ ಸಮಾಜ ಪು. ೫೯, ೧೯೯೫
೯. ಶಿವಾನಂದ ಪಾಚಂಗಿ, ಗೋಂದಳಿ, ಪು. ೩೩, ೨೦೦೮

೧೦. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು ಮತ್ತು ಸಾಮಾಜಿಕ ಸಂಸ್ಥೆಗಳು ಮತ್ತು ಸಮೂಹಗಳ ಅಧ್ಯಯನ, ಪು. ೪೭, ೨೦೦೬

೧೧. ಅದೇ, ಪು. ೪೭

೧೨. ಅದೇ, ಪು. ೪೭

೧೩. ಗಂಗಾಧರ ದೈವಜ್ಞ, ಗೊಂದಲಿಗರು, ಪು. ೩೫, ೨೦೧೦

೧೪. ರಂಗಸ್ವಾಮಿ ಡಿ.ಟಿ., ಭಾರತದ ಹಬ್ಬಗಳು, ಪು. ೯, ೨೦೦೩

೧೫. ರಾಮಣ್ಣ ಕ್ಯಾತನಹಳ್ಳಿ, ಗೊಂದಲಿಗರು : ಒಂದು ಅಧ್ಯಯನ, ಪು. ೧-೨, ೧೯೮೨

೧೬. ಪಾಟೀಲ ಬಿ.ಪಿ., ಗ್ರಾಮದೇವತೆಗಳು, ಪು. ೭-೮, ೧೯೯೬

೧೭. ಅದೇ, ಪು. ೧೧.

೧೮. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ಪು. ೭೫, ೧೯೯೩

೧೯. ರಂಗಸ್ವಾಮಿ ಡಿ.ಟಿ., ಭಾರತದ ಹಬ್ಬಗಳು, ಪು. ೧೯-೨೦, ೨೦೦೩

೨೦. ಅದೇ, ಪು. ೩೦-೩೧.

೨೧. ಅದೇ, ಪು. ೩೨-೩೩.

೨೨. ಅದೇ, ಪು. ೩೩.

೨೩. ಅದೇ, ಪು. ೭೩.

೨೪. ರಾಮಣ್ಣ ಕ್ಯಾತನಹಳ್ಳಿ, ಗೊಂದಲಿಗರು- ಒಂದು ಅಧ್ಯಯನ, ಪು. ೩೨, ೧೯೮೨

೨೫. ರಂಗಸ್ವಾಮಿ ಡಿ.ಟಿ., ಭಾರತದ ಹಬ್ಬಗಳು, ಪು. ೧೫೬, ೨೦೦೩

೨೬. ರಾಮಣ್ಣ ಕ್ಯಾತನಹಳ್ಳಿ, ಗೊಂದಲಿಗರು : ಒಂದು ಅಧ್ಯಯನ, ಪು. ೪, ೧೯೮೨

೨೭. ಮುದೇನೂರು ಸಂಗಣ್ಣ, ಗೊಂದಲಿಗರ ದೇವೆಂದ್ರಪ್ಪನವರ ಹಾಡುಗಳು, ಪು. ೨೭, ೧೯೯೩

೨೮. ಅದೇ, ಪು. ೧೯.

೨೯. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ, ಪು. ೧೦೪, ೧೯೯೩

30. Syed siraj ul Hassan., The Castes and Tribes of HEH the Nizam's Dominions rpt-1989, P-235-236.

31. Enthoven R.E., The Tribes and Castes of Bombay Vol-2, P-13, 1922

೩೨. ರಾಮಣ್ಣ ಕ್ಯಾತನಹಳ್ಳಿ, ಗೊಂದಲಿಗರು : ಒಂದು ಅಧ್ಯಯನ, ಪು. ೯, ೧೯೮೨

೩೩. ಶಿವಾನಂದ ಪಾಚಂಗಿ, ಗೋಂದಳಿ, ಪು. ೩೩, ೨೦೦೮

೩೪. ಬಸವರಾಜ ಎಸ್. ಹಿರೇಮಠ, ಅಂಜಲಿ ಸಾಳುಂಕೆ, ಘಿಸಾಡಿ, ಪು. ೭೫, ೨೦೦೮

ಅಧ್ಯಾಯ - ೫

# ಗೊಂದಲಿಗರ ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಸ್ಥಿತಿಗತಿ

೫.೧ ಆರ್ಥಿಕ ಜೀವನ

- ೫.೧.೧ ಸಮುದಾಯದ ಪಾರಂಪರಿಕ ವೃತ್ತಿಗಳು
- ೫.೧.೨ ಗೊಂದಲಿಗ ಮಹಿಳೆಯರ ವೃತ್ತಿಗಳು
- ೫.೧.೩ ಪಾರಂಪರಿಕ ವೃತ್ತಿಯ ಸ್ಥಿತಿಗತಿಗಳು
- ೫.೧.೪ ವರ್ತಮಾನದ ವೃತ್ತಿಗಳು- ಭಾಂಡೆ ವ್ಯಾಪಾರ, ಕೃಷಿ ಹಾಗೂ ಇತರೆ ವೃತ್ತಿಗಳು

೫.೨ ಶೈಕ್ಷಣಿಕ ಸ್ಥಿತಿಗತಿಗಳು

೫.೩ ರಾಜಕೀಯ ಸ್ಥಿತಿಗತಿಗಳು

## ಅಧ್ಯಾಯ ಐದು

# ಗೊಂದಲಿಗರ ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯ ಸ್ಥಿತಿಗತಿ

"**ಮಾ**ನವನ ಬಯಕೆಗಳು ಅನಿಯಮಿತವಾಗಿವೆ. ಪ್ರಪಂಚದಲ್ಲಿ ಹುಟ್ಟಿರುವ ಪ್ರತಿಯೊಬ್ಬ ಮಾನವನಿಗೆ ಅನೇಕಾನೇಕ ಜೀವನಾವಶ್ಯಕ, ಸುಖದಾಯಕ ವಸ್ತುಗಳು ಬೇಕೆನಿಸುತ್ತವೆ. ಅವನ ಬಯಕೆಗೆ ಮಿತಿ ಎನ್ನುವದು ಇರುವುದಿಲ್ಲ. ಆದರೆ ಈ ಎಲ್ಲ ವಸ್ತುಗಳು ಪ್ರಪಂಚದಲ್ಲಿ ಮಿತವಾಗಿ ಲಭಿಸುತ್ತಿರುವುದರಿಂದ ಅವುಗಳನ್ನು ಅವನು ಬೆಲೆಕೊಟ್ಟು ಅಥವಾ ಅದಕ್ಕೆ ಪ್ರತಿಯಾಗಿ ಯಾವುದಾದರೂ ವಸ್ತಗಳನ್ನು ಕೊಟ್ಟು ಪಡೆದುಕೊಳ್ಳಬೇಕಾಗುತ್ತದೆ. ಸೂರ್ಯನ ಬೆಳಕು, ಗಾಳಿ, ನದಿಯ ನೀರುಗಳಂತೆ ಅವು ಅಮಿತ ಪ್ರಮಾಣದಲ್ಲಿ ಲಭಿಸುತ್ತಿದ್ದರೆ, ಅವುಗಳಿಗೆ ಬೆಲೆ ತೆರುವ ಸಂದರ್ಭವೇ ಉದ್ಭವಿಸುತ್ತಿರಲಿಲ್ಲ. ಬೆಲೆಕೊಟ್ಟು ಈ ವಿರಳವಾದ ಆರ್ಥಿಕ ವಸ್ತುಗಳನ್ನು ಪಡೆದುಕೊಳ್ಳಲು ಅವನಿಗೆ ಹಣ ಬೇಕಾಗುತ್ತದೆ. ಅದನ್ನು ಸಂಪಾದಿಸಬೇಕಾಗುತ್ತದೆ. ಸಂಪಾದಿಸಲು ದುಡಿಯಬೇಕಾಗುತ್ತದೆ, ಶ್ರಮಿಸಬೇಕಾಗುತ್ತದೆ. ಅಂದರೆ ಯಾವುದಾದರೊಂದು ಆರ್ಥಿಕ ಚಟುವಟಿಕೆಯನ್ನು ಕೈಗೊಳ್ಳಬೇಕಾಗುತ್ತದೆ".[೧] ಹೀಗೆ ತನ್ನ ಅವಶ್ಯಕತೆಗಳ ಪೂರೈಕೆಯ ಹಿನ್ನೆಲೆಯಲ್ಲಿ ಪ್ರತಿಯೊಬ್ಬ ಮಾನವ ಒಂದಿಲ್ಲೊಂದು ವೃತ್ತಿಯಲ್ಲಿ ತೊಡಗಿರುವುದು, ಅನುಸರಿಸುವುದು ಕಂಡುಬರುತ್ತದೆ. ಮುಂದುವರೆದಂತೆಲ್ಲ, ಬೆಳೆದು ಬಂದ ಕುಲ ಜಾತಿಯ ಪರಿಕಲ್ಪನೆಯಲ್ಲಿ, ಸಮಾಜದ ಅವಶ್ಯಕತೆಗಳ ಹಿನ್ನೆಲೆಯಲ್ಲಿ ಒಂದೊಂದು ಜಾತಿ-ಕುಲಗಳು ಒಂದೊಂದು ವೃತ್ತಿಗಳನ್ನು ನಿರ್ದಿಷ್ಟಪಡಿಸಿಕೊಂಡಿರುವದಾಗಲಿ, ಅನುಸರಿಸುತ್ತಾ ಬಂದಿರುವುದನ್ನಾಗಲಿ ಕಾಣುತ್ತೇವೆ.

ವ್ಯಕ್ತಿಗತವಾಗಿ ಅನುಸರಿಸುತ್ತಿರುವ ವೃತ್ತಿ ಅದರಿಂದ ಬರುವ ಅದಾಯವು ಅವನ ಆರ್ಥಿಕ ಸ್ಥಿತಿ-ಗತಿಯನ್ನು ಆರ್ಥಿಕ ಜೀವನವನ್ನು ನಿರ್ದೇಶಿಸುತ್ತದೆಯಲ್ಲದೇ, ಜೀವನ ವಿಧಾನದ ಮೇಲೆ

ಪರಿಣಾಮ ಬೀರುತ್ತದೆ. ಹಾಗೆ ಸಮುದಾಯದ ಜೀವನ ವಿಧಾನದಲ್ಲಿ ಆರ್ಥಿಕತೆಯು ತುಂಬಾ ಮಹತ್ವದ ಪಾತ್ರ ವಹಿಸುತ್ತದೆ. ಸಾಮಾನ್ಯವಾಗಿ ಆರ್ಥಿಕ ವ್ಯವಸ್ಥೆಯ ಒಂದು ಸಮುದಾಯದ ಸ್ಥಾನಮಾನ ನಿರ್ಧರಿಸುವುದರ ಜೊತೆಗೆ ಆ ಸಮುದಾಯದ ಜೀವನ ವಿಧಾನದ ಸ್ಥಿತಿ-ಗತಿಗಳನ್ನು ನಿರ್ದೇಶಿಸುತ್ತದೆ.

"ಒಂದು ಸಮುದಾಯದ ಸರ್ವಾಂಗೀಣ ಆಶಯಗಳು ರೂಪುಗೊಳ್ಳುವದು, ಆರ್ಥಿಕವಾಗಿ ಆ ಸಮುದಾಯ ಯಾವ ಸ್ಥಿತಿಯಲ್ಲಿ ಇದೆ ಎಂಬುವದನ್ನು ಆಧರಿಸಿರುತ್ತದೆ. ಭಾರತದಂತಹ ಸಂಪ್ರದಾಯಶೀಲ ಸಮಾಜದಲ್ಲಿ ಸಮುದಾಯವೊಂದರ ವರ್ತಮಾನದ ಸ್ಥಿತಿಗತಿಗೆ ನಿನ್ನೆಗಳಲ್ಲಿ ಕಾರಣಗಳಿರುತ್ತವೆ. ಆದ್ದರಿಂದ ಸಮುದಾಯವೊಂದರ ಇವತ್ತಿನ ಸ್ಥಿತಿ-ಗತಿಗಳನ್ನು ಅರ್ಥ ಮಾಡಿಕೊಳ್ಳಲು ಅದರ ಅರ್ಥಿಕ ಚಟುವಟಿಕೆಗಳ ಚಾರಿತ್ರಿಕ ರೂಪಾಂತರಗಳನ್ನು ಅಧ್ಯಯನ ಮಾಡುವುದು ಅವಶ್ಯಕ".[೨] ಅಂದರೆ ಒಂದು ಸಮುದಾಯದ ಬದುಕಿನ ಚಿತ್ರಣವು ರೂಪುಗೊಳ್ಳುವದು, ಆ ಸಮುದಾಯವು ಯಾವ ಬಗೆಯ ಉತ್ಪಾದನಾ ಚಟುವಟಿಕೆಯಲ್ಲಿ ಪಾಲ್ಗೊಂಡಿದೆ ಎಂಬುದನ್ನು ಅವಲಂಬಿಸಿದ್ದು ಆ ಸಮುದಾಯದ ಬದುಕನ್ನು ನಿರ್ದೇಶಿಸುತ್ತದೆ. ಅಂದರೆ ಸಮುದಾಯದ ಸಾಮಾಜಿಕ ಜೀವನ ನಿರ್ಧರಿಸುವಲ್ಲಿ ಆರ್ಥಿಕವಾಗಿ ನಿರ್ವಹಿಸುವ ವೃತ್ತಿಗಳು ಮುಖ್ಯ ಪಾತ್ರ ವಹಿಸುತ್ತದೆ. ಈ ಹಿನ್ನೆಲೆಯಲ್ಲಿ ಸಮುದಾಯದ ಅಧ್ಯಯನಕ್ಕೆ ಪೂರಕವಾಗಿ ಕೈಗೊಂಡ ವೃತ್ತಿಗಳು, ಆರ್ಥಿಕ ಚಟುವಟಿಕೆಗಳ ರೂಪಾಂತರಗಳನ್ನು ಅವಲೋಕನ ಮಾಡಬೇಕಾದುದು ಅವಶ್ಯಕ.

'ಸಾಮಾನ್ಯವಾಗಿ ತಮ್ಮದೇ ಆದ ಭಾಷೆ, ಕಲೆ, ಸಾಹಿತ್ಯ ಜೀವನ ಕ್ರಮಗಳನ್ನು ಹೊಂದಿರುವ ನಿರ್ದಿಷ್ಟ ಸ್ಥಳ, ಕೇರಿ, ಗ್ರಾಮಗಳಲ್ಲಿ ವಾಸಿಸಿದರೂ ಶಾಶ್ವತವಾಗಿ ನೆಲೆ ನಿಲ್ಲದೆ ಜೀವನೋಪಾಯಕ್ಕಾಗಿ ಬದುಕಿನ ನಿರ್ವಹಣೆಗಾಗಿ ಗ್ರಾಮ, ನಗರಗಳೆಡೆಗೆ ಊರೂರು ಅಲ್ಲಿಯುತ್ತಾ ಸಂಚಾರಿ ಜೀವನವನ್ನು ಕಳೆಯುವವರೇ ಅಲೆಮಾರಿ ಸಮುದಾಯ'ಗಳೆಂದು ಹೇಳಬಹುದು. ಅಲೆಮಾರಿ ಸಮುದಾಯಗಳಿಗೆ ತಮ್ಮ ಜೀವನ ನಿರ್ವಹಣೆಗಾಗಿ ಚಲನಶೀಲತೆ ಎನ್ನುವುದು ಅನಿವಾರ್ಯವು ಹಾಗೂ ಅವಶ್ಯಕವೂ ಆಗಿದೆ.

ಅಲೆಮಾರಿ-ಅರೆಅಲೆಮಾರಿ ಸಮುದಾಯಗಳು ವಿಶೇಷವಾಗಿ ಗ್ರಾಮೀಣ, ನಗರ ಸಮುದಾಯ ಗಳಲ್ಲಿ ಸಂಚರಿಸುತ್ತಾ, ಜೀವನೋಪಾಯಕ್ಕಾಗಿ ವಿವಿಧ ರೀತಿಯ ತಮ್ಮ ಮೂಲ ಕಲೆಗಳನ್ನು ಅಂದರೆ, ಹಾಡು, ಹಚ್ಚೆ, ಗಿಳಿಶಾಸ್ತ್ರ ಹೇಳುವುದು, ಡೊಂಬರಾಟ ಮಾಡುವುದು, ದುರಗಿಮುರಗಿ, ವಿವಿಧ ವೇಷಗಳನ್ನು ಹಾಕುವುದು, ಶಾಸ್ತ್ರ-ಜ್ಯೋತಿಷ್ಯ ಹೇಳುವುದು ಮುಂತಾದವುಗಳನ್ನು ಪ್ರದರ್ಶಿಸುತ್ತಾ, ಆ ಮೂಲಕ ನಾಗರೀಕ ಸಮಾಜದ ಜನರಿಂದ ಹಣ, ದವಸ-ಧಾನ್ಯಗಳನ್ನು ಪಡೆದುಕೊಳ್ಳುತ್ತಾ, ಗ್ರಾಮ, ನಗರದ ಸ್ವಲ್ಪ ದೂರದಲ್ಲಿ ನೀರಿನ ಆಶ್ರಯ ಇರುವಲ್ಲಿ, ಸಾಧ್ಯವಾದಷ್ಟು ಎತ್ತರ ಪ್ರದೇಶ ಅಥವಾ ಬಯಲು ಪ್ರದೇಶಗಳಲ್ಲಿ ಗುಡಾರಗಳನ್ನು ಹಾಕಿಕೊಂಡು ಜೀವನ ಸಾಗಿಸುವಂತಹವರು. ಜೀವನೋಪಾಯಕ್ಕಾಗಿ, ಗ್ರಾಮ-ನಗರಗಳಲ್ಲಿ ಸಂಚರಿಸುವ ಈ ಅಲೆಮಾರಿ ಸಮುದಾಯಗಳು

ಒಂದು ನಿರ್ದಿಷ್ಟ ಕಲೆಗಳನ್ನು ರೂಢಿಸಿಕೊಂಡು ಬಂದವರಾಗಿದ್ದು, ಅದೇ ಅವರ ಮುಖ್ಯ ಕಸಬು ಅಥವಾ ಉದ್ಯೋಗವಾಗಿರುತ್ತದೆ.

ಅಕ್ಷರ ಲೋಕದ ಮಂಡಿವಂತ ಸಮಾಜದ ಸಂಸ್ಕೃತಿಗಿಂತಲೂ ಜೀವಪರ ನೆಲೆಯ ಜಾನಪದ ಲೋಕವನ್ನು ಶ್ರೀಮಂತಗೊಳಿಸಿರುವ ಅಲೆಮಾರಿ ಸಮುದಾಯಗಳು ಪಾರಂಪರಿಕವಾಗಿ ಅನುಸರಿಸುತ್ತಾ, ಬಂದ ಕಲೆಗಳೇ ಅವರ ಜೀವನೋಪಾಯದ ಆಧಾರಗಳಾಗಿವೆ. "ಅಲೆಮಾರಿಗಳು ಸಾಂಸ್ಕೃತಿಕ ಮಾಧ್ಯಮಗಳಾಗಿ ಲೋಕದ ಕಲ್ಯಾಣಕ್ಕಾಗಿ ಸಾಧ್ಯವಾದಷ್ಟು ಶ್ರಮಿಸಿದ ವರ್ಗಗಳು ಸಾಮಾಜಿಕ ವ್ಯವಸ್ಥೆಗಳನ್ನು ಸಂಪರ್ಕ ಸೇತುವೆಯಂತೆ ರಂಜಕರಾಗಿ, ಕಲಾವಿದರಾಗಿ, ಇತಿಹಾಸಕಾರರಾಗಿ, ವ್ಯಾಪಾರಿಗಳಾಗಿ, ಕರಕುಶಲ ಕಾರ್ಮಿಕರಾಗಿ ದುಡಿಯುವವರು. ತಮ್ಮ ಉಪಜೀವನಕ್ಕಾಗಿ ಲೋಕವನ್ನು ಸುತುವುದರೊಂದಿಗೆ ಲೋಕದ ಜ್ಞಾನವನ್ನು ಅರಗಿಸಿಕೊಳ್ಳುವುದರ ಮೂಲಕ ಲೋಕ ತನಗೇನು ಕೊಟ್ಟಿದೇ? ಎನ್ನುವುದನ್ನು ಗಣನೆಗೆ ತೆಗೆದುಕೊಳ್ಳದೇ, ಲೋಕದ ಶ್ರೇಯಸ್ಸಿಗಾಗಿ ತಮ್ಮ ಸಾರ್ಥಕ ಸೇವೆಯನ್ನು ಸಲ್ಲಿಸುವ ಸಮೂಹಗಳಾಗಿವೆ".[೩] ಈ ದೃಷ್ಟಿಯಲ್ಲಿ ಅಲೆಮಾರಿಗಳು ಒಂದೇ ಭಾಗ ಅಥವಾ ಸ್ಥಳದಲ್ಲಿ ನೆಲೆಯಾಗಿ ನಿಲ್ಲದೇ, ಜೀವನೋಪಾಯಕ್ಕಾಗಿ ಕುಟುಂಬ ಸಮೇತ, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಲೆದಾಡುವುದು ಅನಿವಾರ್ಯವಾಗಿದೆ.

ಸಾಮಾನ್ಯವಾಗಿ ಅಲೆಮಾರಿಗಳ ಬದುಕು ಆಧುನಿಕ ಸಮಾಜ ಜೀವನಕ್ಕಿಂತ ಭಿನ್ನವಾದುದು. ತಮ್ಮೆಲ್ಲಾ ಅವಶ್ಯಕತೆಗಳನ್ನು ಪೂರ್ಣವಾಗಿಸಿಕೊಂಡ ಆಧುನಿಕ ಸಮಾಜ ಜೀವನವು ಒಂದೆಡೆ ಆದರೆ, ಕನಿಷ್ಟ ಅವಶ್ಯಕತೆಗಳಲ್ಲಿ ತಮ್ಮ ಬದುಕನ್ನು ಚಲನಶೀಲವಾಗಿಡುವಲ್ಲಿ ಹೆಣಗುತ್ತಿರುವ, ಬದುಕುತ್ತಿರುವ ಅಲೆಮಾರಿಗಳು ಇನ್ನೊಂದೆಡೆಗೆ ಕಂಡು ಬರುತ್ತಿದ್ದಾರೆ. ನೆಲೆ ಇಲ್ಲದವರು ನೆರಳಿಲ್ಲದ, ಸೂರಿಲ್ಲದ ಬದುಕು-ಜೀವನ ಕಳೆಯುವ ಅಲೆಮಾರಿಗಳು ನಿರಂತರ ವಾತಾವರಣಕ್ಕೆ ಮೈ ಒಡ್ಡಿ, ಮಳೆ, ಚಳಿ, ಬಿಸಲನ್ನು ಅನುಭವಿಸುತ್ತಾ, ಬದುಕನ್ನು ಕಳೆಯುತ್ತಿದ್ದಾರೆ. ಇದಕ್ಕೆ ಮುಖ್ಯ ಕಾರಣ, "ಇವತ್ತು ಅಲೆಮಾರಿಗಳೆಂದು ಕರೆಸಿಕೊಳ್ಳುವ ಬಹುತೇಕ ಸಮುದಾಯಗಳಿಗೆ ಅವುಗಳ ಚರಿತ್ರೆಯಲ್ಲಿಯೇ ನಿಶ್ಚಿತ ಆದಾಯಗಳನ್ನು ತಂದುಕೊಡುವ ಸ್ಥಿರಾಸ್ತಿಗಳಿಲ್ಲ. ಆರ್ಥಿಕವಾಗಿ ಅಲೆಮಾರಿಗಳು ಉತ್ಪಾದಕ ಸಮುದಾಯಗಳನ್ನು ಅವಲಂಬಿಸಬೇಕಿತ್ತು. ಭಾರತದ ಬಹುಸಂಖ್ಯಾತ ಜನರ ಮುಖ್ಯ ಉದ್ಯೋಗ ವಾಗಿರುವ ಕೃಷಿಯನ್ನು ಕೈಗೊಳ್ಳುವ ಯಾವ ಪಾರಂಪರಿಕ ಸಿದ್ಧತೆಗಳು ಇಲ್ಲದ ಕಾರಣಕ್ಕಾಗಿ ಅವರು ಕೃಷಿಕರಾಗುವ ಸಾಧ್ಯತೆಗಳಿರಲಿಲ್ಲ. ಪಾರಂಪರಿಕವಾಗಿ ಬಂದ ಪ್ರದರ್ಶನ ಕಲೆ, ಕರಕುಶಲ ಕಲೆ, ವೃತ್ತಿಗಾಯನ ಕಲೆಗಳನ್ನು ಅನುಸರಿಸುತ್ತಾ ಬಂದಿದ್ದಾರೆ".[೪] ಈ ಹಿನ್ನೆಲೆಯಲ್ಲಿ ಅಲೆಮಾರಿ ಸಮುದಾಯಗಳು ಆರ್ಥಿಕವಾಗಿ ಪರಾವಲಂಬಿಗಳಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಅನುತ್ಪಾದಕ ವರ್ಗವಾಗಿ ತಮ್ಮ ಪಾರಂಪರಿಕ ವೃತ್ತಿಯ ಮೂಲಕ ಮೇಲ್ವರ್ಗಗಳನ್ನು ಆರ್ಥಿಕವಾಗಿ ಅವಲಂಬಿಸಲೇ ಬೇಕಿತ್ತಲ್ಲದೇ, ನಿಶ್ಚಿತ ಆರ್ಥಿಕ ಮೂಲಗಳನ್ನು ಹುಡುಕಿಕೊಂಡು ಅಲೆದಾಡುವದು ಅನಿರ್ವಾಯ ವಾಯಿತು. ಈ ಎಲ್ಲ ಅಂಶಗಳ ಅಡಿಯಲ್ಲಿ, ಅಲೆಮಾರಿ ಸಮುದಾಯಗಳು ಅರ್ಥಿಕವಾಗಿ

ಸ್ಥಿರತೆಯನ್ನು ಹೊಂದಿರದ ಸಮುದಾಯಗಳಾಗಿವೆ ಎಂದು ಹೇಳಬೇಕಲ್ಲದೇ, ಅಸ್ಥಿರ ಬದುಕಿಗೆ ಅವರು ಕೈಗೊಂಡ ವೃತ್ತಿಗಳೇ ಕಾರಣ ಎಂದು ಹೇಳಬಹುದು.

### ೫.೧ ಗೊಂದಲಿಗರ ಆರ್ಥಿಕ ಜೀವನ

ಗೊಂದಲಿಗರು ಹಾಡುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ನಿರ್ದಿಷ್ಟ ದೈವವೊಂದಕ್ಕೆ ಅರ್ಪಿಸಿಕೊಂಡವರಾಗಿದ್ದು, ಆ ದೈವದ ನಿಷ್ಠಾವಂತ ಭಕ್ತರಾಗಿ ಆ ದೈವದ ಪವಾಡಗಳ ಕುರಿತು ಹಾಡುತ್ತಾ ಬದುಕನ್ನು ಕಳೆಯುತ್ತಾ ಬಂದವರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ವೃತ್ತಿಗಾಯಕ ವರ್ಗದಲ್ಲಿ ಬರುವ ಗೊಂದಲಿಗರು ಗೊಂದಲ ಪೂಜಾ ಆಚರಣೆಯ ಹಿನ್ನೆಲೆಯಲ್ಲಿಯೇ ಸಮುದಾಯದ ಹೆಸರು ಬರಲು ಕಾರಣವಾಗಿದೆ.

ವೃತ್ತಿಗಾಯಕ ವರ್ಗದ ಒಂದು ಪ್ರಮುಖ ಸಂಪ್ರದಾಯವನ್ನೂ ಪ್ರತಿನಿಧಿಸುತ್ತಿರುವ ಗೊಂದಲಿಗರು, ವೃತ್ತಿ ಗಾಯನದ ಮೂಲಕ ಭಿಕ್ಷಾಟನೆ ಮಾಡುತ್ತಾ ಜೀವನ ನಿರ್ವಹಣೆ ಮಾಡುತ್ತಾ ಬಂದವರು. ಪರಿಣಾಮ ನಿರ್ವಹಿಸುವ ವೃತ್ತಿಯ ಹಿನ್ನೆಲೆಯಲ್ಲಿಯೇ ಅಲೆಮಾರಿತನ ಬದುಕನ್ನು ಕಳೆಯುತ್ತಾ ಬಂದಿದ್ದಾರೆ. ಅಷ್ಟೇಅಲ್ಲ ಗೊಂದಲಿಗರು ನಿರ್ವಹಿಸುತ್ತಾ ಬಂದ ವೃತ್ತಿಯು, ವ್ಯಕ್ತಿಗತವಾಗಿ ಪ್ರದರ್ಶಿಸುವ ಪ್ರತಿಭೆ-ಕೌಶಲ್ಯವನ್ನು ಪ್ರತಿಬಿಂಬಿಸಿದರೂ, ಅದನ್ನು ಜೀವನೋಪಾಯದ ಆದಾಯದ ಮಾರ್ಗವಾಗಿ ಕಂಡುಕೊಳ್ಳಬೇಕಾದರೆ, ಇನ್ನುಳಿದ ಸಮುದಾಯಗಳ ಮೇಲೆ ಅವಲಂಬಿಸಲೇಬೇಕು. ಈ ಸ್ಥಿತಿಯು ಅವರ ಆರ್ಥಿಕ ಸ್ಥಿತಿಗತಿ ಮೇಲೆ ಸಹಜವಾಗಿ ಪರಿಣಾಮ ಬೀರುತ್ತದೆ.

#### ೫.೧.೧. ಸಮುದಾಯದ ಪಾರಂಪರಿಕ ವೃತ್ತಿಗಳು

ಪ್ರಾರಂಭದಿಂದಲೂ ಗೊಂದಲಿಗರು ತುಳಜಾಭವಾನಿ, ಎಲ್ಲಮ್ಮದೇವಿಯ ಸಂಪ್ರದಾಯಕ್ಕೆ ಸೇರಿದವರಾಗಿದ್ದು, ಆ ಶಕ್ತಿದೇವಿಯ ಹೆಸರಿನಲ್ಲಿ ಗೊಂದಲ ಸ್ತುತಿ, ಹಾಡು, ನೃತ್ಯ ಮಾಡುವದೇ ಅವರ ಪರಂಪರಾಗತವಾದ ಮೂಲ ವೃತ್ತಿ. ಸಮುದಾಯಗಳ ಕುರಿತು ಪ್ರಾರಂಭಿಕವಾಗಿ ಅಧ್ಯಯನ ಮಾಡಿದ Edger Thurrston, R.E.Enthoven, Siraj ul Hasan ಮುಂತಾದವರು– ಗೊಂದಲಿಗರು ದುರ್ಗೆಯ ಆರಾಧಕರಾಗಿದ್ದು, ಅವರ ಉದ್ಯೋಗ ಅವರ ಹೆಸರೇ ಹೇಳುವಂತೆ ಗೊಂದಳ ಮಾಡುವುದು, ಸಾಮಾನ್ಯವಾಗಿ ಅಂಬಾಭವಾನಿ ಹೆಸರಿನಲ್ಲಿ, ಗೌರವಾರ್ಥ ನೆರವೇರಿಸಲ್ಪಡುವ, ಪಂಜಿನ ನೃತ್ಯವನ್ನು ಮಾಡುವ ಗೊಂದಳ, ಇವರ ಮೂಲ ವೃತ್ತಿಯಾಗಿದೆ. ಅಂದರೆ ಗೊಂದಲಿಗರು ಗೊಂದಲ ನೃತ್ಯ ಮಾಡುವುದು ಹಾಗೂ ದೇವಿಯ ಹೆಸರಿನಲ್ಲಿ ಧಾರ್ಮಿಕ ಐತಿಹಾಸಿಕ ಹಾಗೂ ಶೃಂಗಾರಮಯ ಹಾಡುಗಳನ್ನು ಹಾಡುತ್ತಾ ಭಿಕ್ಷೆ ಬೇಡುವ ಮೂಲಕ ಜೀವನೋಪಾಯ ನಡೆಸುತ್ತಾರೆ. ಕಾರಣ ದೇವಿಯ ಆರಾಧನೆಯಲ್ಲಿ ಧಾರ್ಮಿಕ ಆಚರಣೆಯಾಗಿರುವ ಗೊಂದಲವನ್ನು ಹಾಕುವುದು, ಸಂಭಾಳ, ಚೌಡಿಕೆ, ತಾಳಗಳ ವಾದ್ಯಗಳೊಂದಿಗೆ ದೇವಿಯ ಸ್ತುತಿ, ಹಾಡು-ಕಥೆಗಳನ್ನು, ಮೈದುಂಬಿ ರೋಮಾಂಚನ ಗೊಳ್ಳುವಂತೆ ನೃತ್ಯ ಮಾಡುವ ಪರಂಪರೆಯನ್ನು ಅನುಸರಿಸುತ್ತಾ ಬಂದ ಜನಸಮೂಹ ಗೊಂದಲಿಗರು.

ಸಾಮಾನ್ಯವಾಗಿ ಮದುವೆ ಮುಂಜಿವೆಯಂತಹ ಸಂದರ್ಭಗಳಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ವೃತ್ತಿಯ ವಿರಾಮದ ಅವಧಿಯಲ್ಲಿ ಗೊಂದಲಿಗರ ಕಥೆ-ಹಾಡುಗಳನ್ನು ಹೇಳಿಸುವ ಪರಿಪಾಟ ಬೆಳೆದು ಬಂದಿರುವುದನ್ನು ಸಾಮಾನ್ಯವಾಗಿ ಕಾಣುತ್ತೇವೆ.

ಕಾಲಘಟ್ಟದಲ್ಲಿ ಕಂಡುಬರುವ ಬದಲಾವಣೆ, ಏರು-ಪೇರುಗಳ ಮಧ್ಯದಲ್ಲಿ ಸಾಂಪ್ರದಾಯಿಕವಾಗಿ ಅನುಸರಿಸುತ್ತಾ ಬಂದ ವೃತ್ತಿಗೆ ಸರಿಯಾದ ರೀತಿಯಲ್ಲಿ ಪ್ರೋತ್ಸಾಹ ದೊರೆಯದಿರುವ ಕಾರಣ ಇರಬಹುದು. ಇನ್ನು ಕೆಲವರು ಗೊಂದಳಿ ಸಮುದಾಯದ ಹಿರಿಯರು ಹೇಳುವಂತೆ, ಶಿವಾಜಿ ಮಹಾರಾಜರು ನಮ್ಮನ್ನು ಗೂಢಚಾರಿಕೆ ಕೆಲಸದಲ್ಲಿ ತೊಡಗಿಸಿಕೊಂಡ ಸಂದರ್ಭದಲ್ಲಿ ಗೊಂದಲ ಪೂಜಾರಾಧನೆಯ ಜೊತೆಗೆ ಬೇರೆ-ಬೇರೆ ಕಲಾ ವೃತ್ತಿಯಲ್ಲಿ ತೊಡಗಿರುವ ಮಾಹಿತಿಯ ಹಿನ್ನೆಲೆಯಲ್ಲಿ ಗೊಂದಲಿಗ ಸಮುದಾಯದಲ್ಲಿಯ ಜನರು ಅನೇಕ ವೃತ್ತಿಯಲ್ಲಿ ತೊಡಗಿರುವದು ಕಂಡು ಬರುತ್ತದೆ.

ಗೊಂದಲಿಗ ಸಮುದಾಯದಲ್ಲಿ ಕಂಡುಬರುವ ವೃತ್ತಿಗಳು

೧. ಗೊಂದಲ ವೃತ್ತಿಗಾಯಕರು – ೧. ಗೊಂದಲ-ಕಥೋಪಜೀವಿಗಳು
 ೨. ಬೀದಿ ಹಾಡುಗಾರರು

೨. ಬುಡಬುಡಿಕೆಯವರು

೩. ಭಾಟರು

೪. ಸಿಂಗದವರು

೫. ವಾಸುದೇವರು

೬. ಚಿತ್ರಪಟದವರು

೭. ಗಿಳಿಶಾಸ್ತ್ರದವರು

೮. ಜ್ಯೋತಿಷಿಗಳು

೯. ಭೂತೇರು / ಎಣ್ಣೆ ಜೋಗಿಗಳು

**೧. ಗೊಂದಲ ವೃತ್ತಿಗಾಯಕರು**

ಸಾಮಾನ್ಯವಾಗಿ ಜಾತಿ-ಮತ-ಬೇಧಗಳಿಲ್ಲದೇ ಆದಿಶಕ್ತಿ ಅಥವಾ ಶಕ್ತಿದೇವತೆಯರನ್ನು ಕುಲದೈವ ವನ್ನಾಗಿ ಮಾಡಿಕೊಂಡ ಆರಾಧನೆ, ಪೂಜಿಸುವ ಕುಟುಂಬಗಳು ತಮ್ಮ ಮನೆಯಲ್ಲಿ ನಡೆಯುತ್ತಿರುವ ವಿವಾಹ, ಉಪನಯನದಂತಹ ಸಂದರ್ಭದಲ್ಲಿ ಗೊಂದಲ ಪೂಜೆ ಮಾಡಿಸುತ್ತಾರೆ. ಇನ್ನು ಕೆಲವರು ಮನೆಯಲ್ಲಿ ಯಾವುದೇ ರೀತಿಯ ಕಾಡಾಟ ಅಥವಾ ನಿರಂತರ ತೊಂದರೆಗಳು ಕಂಡುಬರುತ್ತಿದ್ದಾಗ, ದುಷ್ಟಶಕ್ತಿಗಳ ನಿವಾರಣೆಗಾಗಿ ಗೊಂದಲಿಗರಿಂದ ಗೊಂದಲ ಪೂಜೆಯನ್ನು ಮಾಡಿಸುತ್ತಾರೆ. ರಾಜ ಮಹಾರಾಜರ ಕಾಲದಲ್ಲಿ ದೇವತೆಗಳ ಆರಾಧನಾ ಉತ್ಸವದಲ್ಲಿ, ಯುದ್ಧಕ್ಕೆ ಹೋಗುವ ಸಂದರ್ಭದಲ್ಲಿ ಗೊಂದಲ ಪೂಜೆಯನ್ನು ನೆರವೇರಿಸುತ್ತಿದ್ದರಂತೆ. ಇದಕ್ಕೆ ಪ್ರತಿಯಾಗಿ ಪೂಜೆ ನೆರವೇರಿಸಿದ

ಗೊಂದಲಿಗರಿಗೆ ನಿರ್ದಿಷ್ಟ ಸಂಭಾವನೆ ನೀಡುತ್ತಿದ್ದರು. ಪ್ರಾರಂಭದಲ್ಲಿ ದವಸ-ಧಾನ್ಯಗಳ ಜೊತೆಗೆ ಅಲ್ಪ ಕಾಣಿಕೆಯನ್ನು ಕೊಡುತ್ತಿದ್ದರು ನಾನು ಕ್ಷೇತ್ರಕಾರ್ಯ ಕೈಕೊಂಡಾಗ ಗೊಂದಲಿಗರ ಕಲಾವಿದರು ಒಂದು ಪ್ರದರ್ಶನಕ್ಕೆ ೧೦೦೦ ರೂ. ೫೦೦೦ ರೂ.ಗಳವರೆಗೆ ಸಂಭಾವನೆ/ಕಾಣಿಕೆಯನ್ನು ಪಡೆಯುತ್ತಾರೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಗೊಂದಲ ವೃತ್ತಿಗಾಯಕರು ಗ್ರಾಮಗಳಿಗೆ ಹೋಗಿ ಊರಿನ ಮುಖಂಡರನ್ನು ಭೆಟ್ಟಿಯಾಗಿ ಒಂದು ನಿರ್ದಿಷ್ಟ ದಿನದಂದು ದೇವಿಯ ಹಾಡುಗಳನ್ನು, ಕಥೆಗಳನ್ನು ಹೇಳಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತರು. "ರೈತರು ವಾರ್ಷಿಕಾವರ್ತನದ ಸಂದರ್ಭದಲ್ಲಿ ಬೇಸಿಗೆಯಲ್ಲಿ ಊರಿನವರು ಮನರಂಜಕರನ್ನು ಕರೆಯಿಸಿ, ಊರಲ್ಲಿ ಕಾರ್ಯಕ್ರಮವನ್ನು ಹಮ್ಮಿಕೊಂಡು ಅವರನ್ನು ಸನ್ಮಾನಿಸಿ ಕಳುಹಿಸುತ್ತಿದ್ದರು. ಜಾತ್ರೆ, ಉತ್ಸವ, ಹರಕೆಯಂತಹ ಸಂದರ್ಭಗಳಲ್ಲಿ ಕಲೆಗಳನ್ನು ಪ್ರದರ್ಶಿಸುವ ಜನರನ್ನು ಕರೆಯಿಸಿ, ಅವರಿಂದ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಇದಕ್ಕೆ ಪ್ರತಿಯಾಗಿ ಅವರಿಗೆ ಸಾಕಷ್ಟು ದವಸ-ಧಾನ್ಯಗಳನ್ನು, ಕಾಣಿಕೆಗಳನ್ನು ಕೊಟ್ಟು ಕಳಿಸುತ್ತಿದ್ದರು."[೫] ಇದೂ ಅಲ್ಲದೇ ಬೆಳೆಕೊಯ್ಲು ನಡೆದು ರಾಶಿ ಮಾಡಿದಾಗ ಆಯಗಾರರ ರೀತಿಯಲ್ಲಿಯೇ - ಹೆಳವರು, ಕೊರವರು ಗೊಂದಲಿಗರು, ದುರಗ-ಮುರಗಿಯವರು, ಸುಡಗಾಡುಸಿದ್ದರು ಮುಂತಾದ ಕಲಾವಿದರಿಗೆ ದವಸ-ಧಾನ್ಯಗಳನ್ನು ನೀಡುತ್ತಿದ್ದರು.

ವಿಜ್ಞಾನ-ತಂತ್ರಜ್ಞಾನ ಆಧುನೀಕರಣದ ಇಂದಿನ ಸಂದರ್ಭದಲ್ಲಿ ಟಿ.ವ್ಹಿ., ಸಿನೆಮಾಗಳ ಪ್ರಭಾವ ದಿಂದ ಕಲಾ ವೃತ್ತಿಯಲ್ಲಿ ತೊಡಗಿರುವ ಜನರಿಗೆ ಹಾಗೂ ಪ್ರದರ್ಶಿಸುವ ಕಲೆಗೆ ಬೆಲೆಯೇ ಇಲ್ಲ ದಾಗಿದೆ. ಬಾಗಲಕೋಟೆಯ ಗೊಂದಲದ ವೃತ್ತಿಗಾಯಕ ಪಾಂಡುರಂಗ ಅಂಬಾಜಿ ಸುಗತೇಕರ ಇವರು ಪ್ರಾರಂಭದಿಂದಲೂ ವಂಶಪಾರಂಪರಿಕವಾಗಿ ಗೊಂದಲ ಹಾಡುತ್ತಾ ಬಂದವರು. 'ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಸರ್ಕಾರದ ವತಿಯಿಂದ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹಾಡಿದ್ದಾರೆ. ಸಾರ್ವಜನಿಕ ಸಂಘ-ಸಂಸ್ಥೆಗಳಿಂದ ಅವರಿಗೆ ಪ್ರಶಸ್ತಿಗಳು ಬಂದಿವೆ. ಇಂಥಹ ಕಾರ್ಯಕ್ರಮಗಳಲ್ಲಿ ೫೦೦-೧೦೦೦ ರೂ.ಗಳವರೆಗೆ ಗೌರವ ಸಂಭಾವನೆ ಕೊಡುತ್ತಾರೆ. ಇಂಥಹ ಕಾರ್ಯಕ್ರಮಗಳ ಸಿಗದೇ ಇದ್ದರೆ ಉಪಜೀವನಕ್ಕಾಗಿ ಊರೂರು ಸಂಚರಿಸುತ್ತೇವೆ. ಆ ಊರಿನ ಹಿರಿಯರನ್ನು ಭೆಟ್ಟಿಯಾಗಿ ಗೊಂದಲ ಹಾಡುಗಳನ್ನು ಹೇಳುತ್ತೇವೆ, ಎಂದು ಕೇಳಿದಾಗ ಅವರು ಅದಕ್ಕೆ ಅವಕಾಶಕೊಟ್ಟರೆ ಅಂದು ಸಾಯಂಕಾಲ ಕಾರ್ಯಕ್ರಮ ನಡೆಸುತ್ತೇವೆ. ಆಗ ಊರಿನ ಹಿರಿಯರು ಊರಿನ ಜನರಿಂದ ೨,೫,೧೦ ರೂ.ಗಳನ್ನು ಸಂಗ್ರಹಿಸಿ ಕೊಡುತ್ತಾರೆ. ಸ್ಥಿತಿವಂತರಾದವರು ಹೆಚ್ಚಿನೆ ಕಾಣಿಕೆ ಕೊಡುತ್ತಾರೆ. ಕೆಲವು ಊರುಗಳಲ್ಲಿ ಕಾರ್ಯಕ್ರಮ ನಡೆಸಲು ಅವಕಾಶ ಕೊಡುವುದಿಲ್ಲ, ಆಗ ಅನಿವಾರ್ಯವಾಗಿ ದೇವಸ್ಥಾನ ಅಥವಾ ಸಾರ್ವಜನಿಕ ಸ್ಥಳಗಳಲ್ಲಿ ಮಲಗಿ, ಮರುದಿನ ಮನೆ-ಮನೆ ತಿರುಗಿ, ದೇವಿಸ್ತುತಿಯನ್ನು ಹಾಡುತ್ತಾ ಅವರು ಕೊಡುವ ಭಿಕ್ಷೆಯನ್ನು ಪಡೆದುಕೊಂಡು ಉಪಜೀವನ ಕಳೆಯುತ್ತೇವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು'.

ಇನ್ನು ಕೆಲವು ಗೊಂದಲಿಗ ಕಲಾವಿದರು ತಮ್ಮ ಚೌಡಿಕೆಯನ್ನು ತೆಗೆದುಕೊಂಡು ಜಾತ್ರೆ-ಉತ್ಸವಗಳು ನಡೆಯುತ್ತಿರುವ ಪ್ರದೇಶಗಳಲ್ಲಿ ಅದನ್ನು ಬಾರಿಸುತ್ತಾ, ದೇವಿ ಅಂಬಾಭವಾನಿಯ ಹಾಡುಗಳನ್ನು ಹಾಡುತ್ತಾ, ಭಿಕ್ಷುಕರ ರೀತಿಯಲ್ಲಿ ಭಿಕ್ಷೆ ಬೇಡುತ್ತಾರೆ. ಜೊತೆಗೆ ಬಸ್‌ಸ್ಟ್ಯಾಂಡ್‌ಗಳಲ್ಲಿ, ರೈಲುಗಳ ಒಳಗೆ ಚೌಡಿಕೆ ಬಾರಿಸುತ್ತಾ ದೇವಿಸ್ತುತಿ ಮಾಡುತ್ತಾ ಪ್ರಯಾಣಿಕರಿಂದ ಭಿಕ್ಷೆ ಬೇಡುತ್ತಿರುವುದು ಕಂಡುಬರುತ್ತದೆ.

ಪ್ರೇಕ್ಷಕರು ರೋಮಾಂಚನಗೊಳ್ಳುವಂತೆ ಮೈಮರೆತು ಮನದುಂಬಿ ದೇವಿಸ್ತುತಿ, ಹಾಡು-ಕಥೆಗಳನ್ನು ಹೇಳುತ್ತಾ, ಜನರಲ್ಲಿ ನೈತಿಕ ಜಾಗೃತಿಯನ್ನುಂಟು ಮಾಡುವ ಗೊಂದಲಿಗರ ವೃತ್ತಿಗಾಯನ ಪರಂಪರೆ ತನ್ನ ಮಹತ್ವವನ್ನು ಕಳೆದುಕೊಂಡು ಕಣ್ಮರೆಯಾಗುತ್ತಿದೆಯೇನೊ ಎನ್ನುವ ಸ್ಥಿತಿಯನ್ನು ತಲುಪಿದೆ. ಸಾರ್ವಜನಿಕರಲ್ಲಿಯೂ ಸಹ ಈ ಕಲಾವಿದರ ಕಲಾಸಂಪತ್ತನ್ನು ಅವರು ನುಡಿಸುವ, ಮನರಂಜಿಸುವ, ಕಲೆಯನ್ನು ಇಷ್ಟಪಡುವ, ಕೇಳಿ ಆಸ್ವಾದಿಸುವ, ಆನಂದ ಪಡುವ ಮನೋಭಾವನೆಯೂ ಇಂದು ಕಣ್ಮರೆಯಾಗಿದೆ ಎಂದೇ ಹೇಳಬಹುದು.

**೨. ಬುಡಬುಡಿಕೆಯ ವೃತ್ತಿ**

ಹಾಲಕ್ಕಿ ನುಡಿತೈತೆ...... ಶುಭವಾಗತೈತೆ... ಶುಭವಾಗತೈತೆ...... ಎನ್ನುತ್ತ ಮುಂದೆ ನಡೆಯಲಿರುವ ಶುಭ ಅಥವಾ ಅಶುಭ ಘಟನೆಗಳ ಸೂಚನೆಯನ್ನು ತಮ್ಮದೇ ಆದ ಶೈಲಿಯಲ್ಲಿ ಅರಳು ಹುರಿದಂತೆ ಭವಿಷ್ಯ ಹೇಳುತ್ತಾ ಮನೆ-ಮನೆ ಸುತ್ತಿ, ಊರೂರು ಅಲೆಯುವ ಜನಪದ ಬದುಕಿನ ವಿಶಿಷ್ಟ ಕೊಂಡಿಗಳಾಗಿ ಕಲಾಕಾರರಾಗಿರುವ ಬುಡಬುಡಿಕೆ ಯವರು ಯಾರಿಗೆ ತಾನೇ ಗೊತ್ತಿಲ್ಲ. ಮನೆ-ಮನೆಗೆ ಬರುವ ಇವರ ಮಾತನ್ನು ಕೇಳಿದವರು ಒಂದಿಲ್ಲೊಂದು ರೀತಿಯಲ್ಲಿ ಇವರ ಪ್ರಭಾವಕ್ಕೆ ಒಳಗಾಗಿ, ಅಲಕ್ಷ್ಯ ಮಾಡದೇ ಮನೆಯ ಕಟ್ಟೆಯ ಮೇಲೆ ಕುಳ್ಳಿರಿಸಿ ಭವಿಷ್ಯ ಕೇಳುವುದು ಸರ್ವೇಸಾಮಾನ್ಯವಾಗಿದೆ. ಭವಿಷ್ಯದಲ್ಲಿ ಮುಂದೆ ಆಗು-ಹೋಗುಗಳ ಬಗ್ಗೆ ಜ್ಯೋತಿಷ್ಯ ಹೇಳುವ, ಸಾಮಾನ್ಯ ಜನರ ಜೊತೆಗೂ ಆತ್ಮೀಯವಾಗಿ ಒಡನಾಟ ಬೆಳೆಸಿಕೊಳ್ಳುವ ಬುಡಬುಡಿಕೆ ಯವರು ಸರ್ವೇಸಾಮಾನ್ಯವಾಗಿ ಎಲ್ಲರಿಗೂ ಚಿರಪರಿಚಿತರೇ ಎಂದರೆ ತಪ್ಪಾಗಲಾರದು. ಗೊಂದಲಿಗರ ಸಮುದಾಯದವರೇ ಆದ ಇವರು ಅನುಸರಿಸುವ ಈ ವೃತ್ತಿಯಿಂದಲೇ 'ಬುಡಬುಡಿಕೆ'ಯವರು ಎಂದು ಗುರುತಿಸಿಕೊಂಡಿದ್ದಾರೆ. ಅತ್ಯಂತ ನಾಜೂಕಿನ ನಯ-ವಿನಯದ ಸುಸಂಸ್ಕೃತ ಭಾಷೆಯನ್ನಾಡುವ ಬುಡಬುಡಿಕೆಯವರು ಕೇಳುಗರ ತಲೆ ಅಲ್ಲಾಡಿಸುವಂತೆ ಮಾಡುವ, ಆ ಮೂಲಕ ತಾವು ಹೇಳುವ ಭವಿಷ್ಯಕ್ಕೆ ಸಮ್ಮೋಹಿತಗೊಳ್ಳುವಂತೆ ಮಾಡುವ ಜಾಣ್ಮೆಯನ್ನು ಹೊಂದಿದ್ದಾರೆ.

'ಬುಡಬುಡಿಕೆ' ಡಮರುಗದಂತಹ ಒಂದು ಬಗೆಯ ಚಿಕ್ಕದಾದ ವಾದ್ಯ ಬಾರಿಸುತ್ತಾ ತಮ್ಮ ವೃತ್ತಿಯನ್ನು ಮಾಡುವರು. ಇವರನ್ನು ಬುಡಬುಡಿಕೆಯವ, ಬುಡಬುಡಿಕ್ಯಾ, ದೋಷಿಗ್ಯಾ, ಸುಡುಬುಡಿಕೆ, ಸುಡುಬುಡಿಕ್ಯಾ, ಹಕ್ಕಿನರಸಣ್ಣ ಎಂದು ಕರೆಯುತ್ತಾರೆ. ಎಡ್ಗರ್ ಥರ್ಸ್ಟನ್‌ರವರು "ಬುಡಬುಡಿಕೆಯವರು ಮರಾಠಾ ಮೂಲದ ಅಲೆಮಾರಿಗಳು ಇವರ ಆರಾಧ್ಯದೈವ ಅಂಬಾಭವಾನಿ. ಹಾಲಕ್ಕಿಯು ನುಡಿಯುವ

ಶಕುನದ ಮೂಲಕ ಭವಿಷ್ಯವನ್ನು ಹೇಳುತ್ತಾ, ಆಹಾರ-ಬಟ್ಟೆ-ಬರೆಗಳನ್ನು ಜನರಿಂದ ಪಡೆಯುವ ಒಂದು ಅಲೆಮಾರಿ ಸಮುದಾಯಿ" ಎಂದು ವಿವರಿಸಿದ್ದಾರೆ. ಸಾಮಾನ್ಯವಾಗಿ ಬುಡಬುಡಿಕೆ ಯವರು, ತಮ್ಮ ಮೂಲದ ಬಗ್ಗೆ ಈ ರೀತಿ ಹೇಳುತ್ತಾರೆ. 'ತಮ್ಮ ಆರಾಧ್ಯ ದೈವವನ್ನು ಪ್ರಾರ್ಥಿಸಿದಾಗ ಕರುಣೆ ತೋರಿದ ದೇವಿಯು ತನ್ನ ಪತಿ ಶಂಕರ/ಶಿವನ ಢಕ್ಕೆಯನ್ನು ನೀಡಿ, ಇದನ್ನು ಬಿಟ್ಟು ನಿನಗೆ ಬೇರೆ ದಾರಿಯಿಲ್ಲ, ಇದರ ಮೂಲಕ ಉಪಜೀವನ ಮಾರ್ಗವನ್ನು ಹುಡುಕು ನಿನಗೆ ಒಳ್ಳೆಯದಾಗುತ್ತದೆ ಅಂದಳಂತೆ. ಅಂದಿನಿಂದ ಇದನ್ನಾಧರಿಸಿ ಅವರು ತಮ್ಮ ಬದುಕನ್ನು ಸಾಗಿಸುತ್ತಿದ್ದಾರೆ'.

"ಬುಡಬುಡಿಕೆ ಡಮರಿನ ಆಕಾರ ತಂತ್ರಗಳನ್ನೊಳ ಗೊಂಡ ಒಂದು ಚಿಕ್ಕ ವಾದ್ಯ. ಡಮರಿನ ಹೊರಮೈ ವ್ಯಾಸ ಸುಮಾರು ೬ ಇಂಚು ಇದ್ದರೆ, ಬುಡಬುಡಿಕೆಯದು ೨-೨.೫ ಇಂಚು ಇರುತ್ತದೆ. ತಾರಸ್ವರದಲ್ಲಿ ಬುಡ್ ಬುಡ್ ಬುಡ್ ಎಂದು ನಾದ ಮಾಡುವ ಈ ವಾದ್ಯವನ್ನು ಅತ್ಯಂತ ಜಾಣ್ಮೆಯಿಂದ ನುಡಿಸುವುದು, ಭಿಕ್ಷಾಟನೆ ಮತ್ತು ಶಕುನ ಹೇಳುವುದು ಎರಡೂ ಏಕಕಾಲಕ್ಕೆ ನಡೆಯುತ್ತದೆ. ಬುಡಬುಡಿಕೆಯವ ಲಯಕ್ಕೆ ತಕ್ಕಂತೆ ಹಾಡು ಹೇಳಿ ಕೊನೆಯಲ್ಲಿ ಶಕುನಕ್ಕೆ ಪೀಠಿಕೆ ಹಾಕುವನು. ಮನೆಯವರು ಆಸಕ್ತಿ ತೋರಿಸಿದರೆ ಶಕುನ ಹೇಳಲು ಪ್ರಾರಂಭಿಸುವನು. ಎತ್ತರದ ಸ್ವರದಲ್ಲಿ ಸಾಂದರ್ಭಿಕ ಏರು ಇಳುವುಗಳೊಂದಿಗೆ ಶಕುನ ಹೇಳುತ್ತಾ ನಡು-ನಡುವೆ ಬುಡಬುಡಕಿ ಬಾರಿಸುವನು. ಬುಡಬುಡಿಕೆಯ ನಾದ ಶಕುನದ ನಿರೂಪಣೆಗೆ ಪೋಷಣೆ-ಪ್ರೇರಣೆ-ಉತ್ಸಾಹ ನೀಡುತ್ತದೆ".[೬]

ಬುಡಬುಡಿಕೆಯವನು ಬಳಸುವ ವಾದ್ಯಕ್ಕೂ, ಅವನು ಹೇಳುವ ಭವಿಷ್ಯಕ್ಕೂ, ಒಂದು ರೀತಿ ಅವಿನಾಭಾವ ಸಂಬಂಧವನ್ನು ಕಾಣುತ್ತೇವೆ. 'ಬುಡಬುಡಿಕೆಯವನ ಮಾತು ಬುಡತನಕ ಸುಳ್ಳು' ಅಂತಾ ಜನರು ಆಡಿಕೊಳ್ಳುತ್ತಿದ್ದರೂ, ಬುಡಬುಡಿಕೆಯರನ್ನು ಜನರು ನಂಬಿದ್ದಾರೆ. ಬಲ ಬರುತ್ತೈತಿ ತಾಯಿ, ಬಲ ಬರುತ್ತೈತಿ ತಾಯಿ, ಬಲ ಬಂದಾದ ತಾಯಿ....... ಅಂದ್ರೆ ಸಾಕು ನಮ್ಮ ತಾಯಂದಿರು ಹಿಗ್ಗಿ ಹೀರಿಕಾಯಿ ಆಗುವುದರ ಜೊತೆಗೆ ಮುಂದುವರೆದು ತಮ್ಮ ಭವಿಷ್ಯ ಕೇಳಲು ಮುಂದಾಗುತ್ತಾರಲ್ಲದೇ, ಇವರ ಬಾಯಿಂದ ಹೊರಬರುವ ಒಂದೊಂದು ನುಡಿಗಳು ನಿಜವಾಗುತ್ತದೆ ಎಂದೇ ಜನ ನಂಬಿದ್ದಾರೆ. ಪ್ರಶ್ನೆ ಕೇಳಿದವರು ತಾವೇ ಸುಲಭವಾಗಿ ಅರ್ಥೈಸಿಕೊಳ್ಳುವ ಹಾಗೇ ಇವರ ಭವಿಷ್ಯವಾಣಿಯ ಶೈಲಿ ಇರುತ್ತದೆ-

ಉದಾಹರಣೆಗೆ 'ಹಾಲಕ್ಕಿ ನುಡಿತ್ತೈತಿ ಬಿಳಿ ಹಾಳೆಯ ಮೇಲೆ ಕರಿಗೀಟ ಬೀಳ್ತೈತಿ' ಎಂದರೆ ಕಾಗದ ಪತ್ರಗಳು ತಯಾರಾಗುತ್ತವೆ. ಮದುವೆ ಕೂಡಿ ಬರುತ್ತೈತೆ ಎಂದಾಗಲಿ, ಹೊಲ, ಮನೆ, ಖರೀದಿ ಸದ್ಯದಲ್ಲೇ ಇದೆ ಎಂದು ತಿಳಿದುಕೊಳ್ಳಬೇಕು. ಇನ್ನು 'ಹದಿಮೂರು ದಿವ್ಸ ಅಥವಾ ಮೂರು ತಿಂಗಳು ತಪ್ಪಿದರೆ ಮೂರು ವರ್ಷಗಳವರೆಗೆ ಹಾರಕೊಂತ ಬರುತ್ತೈತಿ' ಎಂದರೆ ನೌಕರಿಯ ನೇಮಕಾತಿ ಆದೇಶ ಪತ್ರ ಬರುತ್ತದೆ ಎಂದಾಗಲಿ, ಯಾವುದೋ ಬಹುಮಾನ ಅಂಚೆ ಮೂಲಕ ಬರುತ್ತದೆ ಎಂದಾಗಲಿ ತಿಳಿದುಕೊಳ್ಳಬೇಕು. 'ಹುಣ್ಣಿಮೆ ಐತೆ ಆದ್ರ ಕತ್ತಲ ಜಾಸ್ತಿ ಐತೆ' ಎಂದರೆ 'ಗುರುಬಲ ಇದೆ, ಆದರೆ ಶನಿಯ ಕಾಟ ಇದೆ, ಕುಂಡಲಿಯಲ್ಲಿ ದೋಷ ಇರುವುದರಿಂದ ಶಾಂತಿ

ಮಾಡಿಸಬೇಕು ಇಲ್ಲವಾದರೆ ಗಂಡಾಂತರ ಕಾದಿದೆ ಎಂಬ ಅರ್ಥವನ್ನು ಹೇಳುತ್ತಾರೆ. ನಿಮ್ಮ ಮನಿಗೆ ಲಕ್ಷ್ಮೀ ಬರಾಕತ್ತ್ಯಾಳ, ಗುರುಬಲ ಕೂಡಿ ಬಂದೈತಿ, ಹಿಂದಕ್ಯಾಕ ತಿರುಗಿ ನೋಡ್ತಿ, ಕುಜದೋಷ ಕಂಡೈತಿ, ಅಲಕ್ಷ್ಯ ಮಾಡಬೇಡ, ಕುದರಿ ಏರುವ ಕಾಲ ಕೂಡಿ ಬಂದೈತೆ......... ಎಂಬ ಭರವಸೆಗೆ ಎಡೆಮಾಡುವ ಹಲವಾರು ಮಾತುಗಳನ್ನು ಹೇಳುವಾಗ ಯಾರಿಗೆ ತಾನೇ ಆಶಾದಾಯಕತೆ ಹುಟ್ಟುವುದಿಲ್ಲ. ಅಷ್ಟೇ ಅಲ್ಲ ಅನೇಕ ಜನರು ಹಲವಾರು ಸಂಕಷ್ಟಗಳಿಂದ ತತ್ತರಿಸುತ್ತಿರುವ ಸಂದರ್ಭ ದಲ್ಲಿ ಬುಡಬುಡಕೆಯವರು ಹೇಳುವ ಇಂತಹ ಮಾತುಗಳು ಹೊಸ ಭರವಸೆಯನ್ನು ಮೂಡಿಸಿ ಭವಿಷ್ಯ ಕೇಳುವಂತೆ ಪ್ರೇರೆಪಿಸುತ್ತವೆ.

ಪ್ರಾರಂಭದಲ್ಲಿ ಗ್ರಾಮಾಂತರ ಪ್ರದೇಶದಲ್ಲಿಯ ರೈತಾಪಿ ಜನರು ಬಾವಿ ಕೊರೆಯಲು, ಬಿತ್ತನೆ ಮಾಡಲು, ರಾಶಿ ಮಾಡಲು, ಗೂಡು ಹಾಕಲು, ಕಣ ಮಾಡಲು, ತಕ್ಕ ಮುಹೂರ್ತಕ್ಕಾಗಿ, ಬೆಳೆಗಳ ಫಸಲಿನ ಬಗ್ಗೆ ಮುನ್ಸೂಚನೆಗಾಗಿ ಪ್ರಶ್ನೆಗಳನ್ನು ಕೇಳುತ್ತಿದ್ದರು. ಅದಕ್ಕೆ ಪ್ರತಿಯಾಗಿ ರಾಶಿಯ ಸಂದರ್ಭ ದಲ್ಲಿ ಆಯಾಗಾರರ ರೀತಿಯಲ್ಲಿ ದವಸ-ಧಾನ್ಯಗಳನ್ನು ಕೊಡುತ್ತಿದ್ದರು. ಜೊತೆಗೆ ಇನ್ನುಳಿದವರಿಗೆ ಹೇಳುವ ಭವಿಷ್ಯದ ಮೂಲಕ ಹಣವನ್ನು ಇಸಿದುಕೊಂಡು ತಮ್ಮ ದೈನಂದಿನ ಜೀವನವನ್ನು ಕಳೆಯುತ್ತಾ ಬಂದವರಾಗಿದ್ದಾರೆ. ಬುಡಬುಡುಕೆಯವರು ಎರಡು ವಿಧಾನಗಳ ಮೂಲಕ ಭವಿಷ್ಯವನ್ನು ಹೇಳುತ್ತಾರೆ.

೧. ಪಣ ಕಟ್ಟುವುದರ ಮೂಲಕ/ಹಕ್ಕಿಶಕುನದ ಮೂಲಕ ಭವಿಷ್ಯ ಹೇಳುವುದು.

೨. ನೀಲಿ ಹೊತ್ತಿಗೆಯ ಮೂಲಕ ಭವಿಷ್ಯ ಹೇಳುವುದು.

೧. ಬುಡುಬುಡುಕೆಯ ಹಕ್ಕಿ ಶಕುನಕ್ಕೆ ಸಂಬಂಧಪಟ್ಟಂತೆ (ವೃತ್ತಿಯಲ್ಲಿ) ಮೂರು ಹಂತಗಳು ಕಂಡು ಬರುತ್ತವೆ.

ಅ. ಪಣ ಕಟ್ಟುವದು.

ಆ. ಬುಡಬುಡಕಿ ವಾದ್ಯ ಬಾರಿಸುತ್ತಾ ಇಡೀ ಊರನ್ನು ಸುತ್ತುವುದು.

ಇ. ಬೆಳಗಿನ ಜಾವದಲ್ಲಿ ಎದ್ದು ಊರಿನ ಪ್ರತಿ ಮನೆಯ ಮುಂದೆ ಹೋಗಿ ಶಕುನ ಹೇಳುವುದು, ದೋಷಗಳಿಗೆ ಪರಿಹಾರ ಸೂಚಿಸುವುದು.

**ಪಣ ಕಟ್ಟುವದು** : "ಬುಡಬುಡಕೆಯವರು ಆಯಾ ಊರುಗಳಲ್ಲಿ / ನಿರ್ಧಿಷ್ಠ ಪಡಿಸಿಕೊಂಡ ಊರುಗಳಲ್ಲಿ ವೃತ್ತಿ ಮಾಡುವವರು ಆಯಾ ಗ್ರಾಮದ ಪ್ರಮುಖ ವ್ಯಕ್ತಿಗಳನ್ನು ಬೆಟ್ಟಿಯಾಗಿ ಅವರಿಂದ ಒಪ್ಪಿಗೆ ಪಡೆದು ಹಕ್ಕಿ ಪಣ ಕಟ್ಟಿ ಸ್ಮಶಾನದಲ್ಲಿ ಕುಳಿತು ಹಾಲಕ್ಕಿಯ ಕೂಗು ಅದರ ವರ್ತನೆಯನ್ನು ಸಂಗ್ರಹಿಸುತ್ತಾರೆ. ಈ ಕ್ರಮಕ್ಕೆ ಹಕ್ಕಿ ಪಣ ಕಟ್ಟುವದು ಅಥವಾ ಹಕ್ಕಿ ನರಸಣ್ಣನ ಮಾತು"[೩] ಎನ್ನುತ್ತಾರೆ.

ಸಾಮಾನ್ಯವಾಗಿ ಬುಡಬುಡಿಕೆಯವರು ಮಧ್ಯರಾತ್ರಿ ಸರಿದ ಮೇಲೆ, ೧ರಿಂದ ೨ ಗಂಟೆಯ ಸುಮಾರಿಗೆ ಅತ್ಯಂತ ನೀರವ ರಾತ್ರಿಯ ಸಮಯದಲ್ಲಿ ಸ್ಮಶಾನಕ್ಕೆ ಹೋಗಿ ಪಣಕಟ್ಟುವ ಕಾರ್ಯ

ಕೈಗೊಳ್ಳುವರು. ಪಣ ಕಟ್ಟುವ ಈ ಕಾರ್ಯಕ್ಕೆ ಹೋಗುವಾಗ ತಂಬಿಗೆ ನೀರು ಪೂಜೆಗೆ ಬೇಕಾಗುವ ಎಲ್ಲಾ ಸಾಮಾನುಗಳನ್ನು ಬಾಣಂತಿ ಕೈಯನ್ನು ಜೋಳಿಗೆಯಲ್ಲಿ ಹಾಕಿಕೊಂಡು ಜೊತೆಗೆ ಒಂದು ಕೈಯಲ್ಲಿ ಕಂದೀಲು ಹಾಗೂ ಇನ್ನೊಂದು ಕೈಯಲ್ಲಿ ತಾನು ಬಾರಿಸುವ ಬುಡಬುಡಿಕೆ ವಾದ್ಯದ ಜೊತೆಗೆ ಸ್ಮಶಾನಕ್ಕೆ ಹೋಗುತ್ತಾನೆ. ಸ್ಮಶಾನ ಮುಟ್ಟುವವರೆಗೂ ದೇವರ ನಾಮಸ್ಮರಣೆ ಮಾಡುತ್ತಾ ನಡು-ನಡುವೆ ಬುಡಬುಡಿಕೆಯನ್ನು ಬಾರಿಸುತ್ತಾ ಆ ಸ್ಥಳವನ್ನು ತಲುಪುತ್ತಾನೆ. ನಿರ್ದಿಷ್ಟ ಪಡಿಸಿಕೊಂಡ ಸ್ಥಳದಲ್ಲಿ ತನ್ನ ಎಲ್ಲಾ ಸಾಮಾನುಗಳನ್ನು ಇಟ್ಟು ಸುತ್ತಲೂ ನೆಲವನ್ನು ಸ್ವಚ್ಚಗೊಳಿಸಿ ನೀರು ಚಿಮುಕಿಸಿ ರಂಗೋಲಿ ಬಿಡಿಸಿ ಅದರ ಮೇಲೆ ಅರಿಷಿಣ-ಕುಂಕುಮ ಹಾಕಿ, ಸುತ್ತಲೂ ಅಕ್ಕಿ ಕಾಳು ಗಳನ್ನು ಎಸೆಯುತ್ತಾನೆ. ಮಧ್ಯದಲ್ಲಿ ಬಾಣಂತಿ ಕೈಯನ್ನು ಇಡುತ್ತಾನೆ. ಈ ಸಂದರ್ಭದಲ್ಲಿ ನಿರಂತರವಾಗಿ ದೇವರ ನಾಮಸ್ಮರಣೆ ಮಾಡುತ್ತಾ ಮನಸ್ಸಿನಲ್ಲಿಯೇ ಸ್ಮರಣೆ ಮಾಡಬೇಕಾದ ಮಂತ್ರ ಗಳನ್ನು ಹೇಳಬೇಕು. ಪಣಕಟ್ಟುವಾಗಿನ ಈ ಮಂತ್ರಗಳನ್ನು ಕೇವಲ ತನ್ನ ಶಿಷ್ಯಂದಿರರಿಗೆ ಹೇಳಬೇಕೆಂಬ ನಿಯಮವಿದೆ. ಪೂಜಾ ಕಾರ್ಯಗಳೆಲ್ಲಾ ಮುಗಿದ ಮೇಲೆ ನಿಶ್ಯಬ್ದದ ವಾತಾವರಣದಲ್ಲಿ ಹಾಲಕ್ಕಿಗಳು ನುಡಿಯುವ/ಕೂಗುವ ಉಲಿಯುವಿಕೆಗಳನ್ನು ಆಲಿಸುತ್ತಾನೆ. ಆಮೂಲಕ ಕಂಡು ಬರಬಹುದಾದ ಭವಿಷ್ಯಗಳನ್ನು ಊಹಿಸುತ್ತಾನೆ.

ಒಂದು ಹಾಲಕ್ಕಿ ಒಂದು ಸಲ ನುಡಿದರೆ ಶುಭ, ಎರಡು ಸಲ ನುಡಿದರೆ ಉತ್ತಮ, ನಾಲ್ಕು ಸಲ ನುಡಿದರೆ ಈ ವರ್ಷದ ಭವಿಷ್ಯವೂ ಹಿಂದಿನ ವರ್ಷದಂತೆ, ಜೋಡು ಹಾಲಕ್ಕಿಗಳು ಒಂದೇ ಸಲ ನುಡಿದರೆ ಶುಭ, ಎರಡು ಸಲ ನುಡಿದರೆ ಉತ್ತಮ ಎರಡು ಹಕ್ಕಿಗಳು ಒಂದರ ನಂತರ ಒಂದು ನುಡಿಯುತ್ತಿದ್ದರೆ ಶುಭಸೂಚನೆ ಎಂಬ ನಂಬಿಕೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಅಷ್ಟೇ ಅಲ್ಲ ಹಾಲಕ್ಕಿಯು ಯಾವ ದಿಕ್ಕಿನಲ್ಲಿ ಕುಳಿತು ಕೂಗುತ್ತಿವೆ, ಯಾವ ದಿಕ್ಕಿಗೆ ಹಾರಿ ಹೋದವು ಎಂಬುದು ಸಹ ಮುಖ್ಯವಾಗಿರುತ್ತದೆ. ಜೊತೆಗೆ ಯಾವ ಸ್ಥಳದಲ್ಲಿ ಅಂದರೆ ಊರ ಗೋಡೆಯ ಮೇಲೆ ಅಥವಾ ಕೋಟೆಯ ಮೇಲೆ ಕೂಗಿದರೆ ಅದು ಊರಿಗೆ ಸಂಬಂಧಪಟ್ಟದ್ದು ಎಂದು ತಿಳಿದು ಕೊಳ್ಳುತ್ತಾರೆ.

ಈ ರೀತಿ ಹಾಲಕ್ಕಿಗಳ ಉಲಿಯುವಿಕೆಗಳ / ನುಡಿಗಳ ಮೇಲೆ ಶಕುನವನ್ನು ಅರ್ಥೈಸಿಕೊಂಡು ಬುಡಬುಡುಕೆಯವನು ಬೆಳಗಿನ ಜಾವ ೩-೪ ಗಂಟೆಯ ಸಮಯದಲ್ಲಿ ಊರಿನ ಗ್ರಾಮದೇವತೆ, ಆಂಜನೇಯಸ್ವಾಮಿ ದೇವಸ್ಥಾನಗಳಿಗೆ ಹೋಗಿ ಬುಡಬುಡಿಕೆಯನ್ನು ಬಾರಿಸುತ್ತಾ ಸ್ಮರಣೆ ಮಾಡುವನು. ಕೆಲವರು ಮನೆಗೆ ಹೋಗಿ ಮಲಗಿಕೊಳ್ಳುತ್ತಾರೆ. ಇನ್ನು ಕೆಲವರು ಆ ಹೊತ್ತಿನಲ್ಲಿಯೇ ಊರನ್ನೆಲ್ಲಾ ಸುತ್ತಿ ಬರುವರು. ಇದೆಲ್ಲಾ ಕಾರ್ಯಗಳು ಮುಗಿದ ನಂತರ ಬೆಳಗಿನ ಜಾವ ಊರಿನ ಪ್ರತಿಯೊಂದು ಮನೆಗಳಿಗೆ ಹೋಗಲು ಸಜ್ಜಾಗುವನು. ಪ್ರತಿ ಮನೆಯ ಮುಂದೆ ನಿಂತು ಬುಡಬುಡಕೆಯನ್ನು ಬಾರಿಸುತ್ತಾ, 'ಶುಭವಾಗತೈತೆ', ಹಾಲಕ್ಕಿ ನುಡಿತೈತೆ, ಶುಭವಾಗತೈತೆ ಎಂದು ಹೇಳುತ್ತಾ ಅವರನ್ನು ಭವಿಷ್ಯ ಕೇಳುವಂತೆ ಪ್ರೇರೇಪಿಸಿ ಆಸಕ್ತಿ ಹುಟ್ಟಿಸುತ್ತಾನೆ. ಭರವಸೆದಾಯಕ ಮಾತುಗಳನ್ನು ಹೇಳುತ್ತಾ

ಹೇಳುತ್ತಾ ಒರುವ ಕಂಟಕ-ಅಪಾಯಗಳ ಒಗ್ಗೆ ಹೇಳಿ ಅದಕ್ಕಿರುವ ಪರಿಹಾರ ಅದಕ್ಕಾಗುವ ಖರ್ಚುಗಳನ್ನು ಹೇಳಿ, ಮನೆಯವರು ಇಷ್ಟಪಟ್ಟರೆ ಅದಕ್ಕೆ ಪರಿಹಾರ ಕ್ರಮಗಳನ್ನು ಮಾಡಿ ಅವರಿಂದ ಒಟ್ಟೆ, ಒರೆ, ದವಸ, ಧಾನ್ಯಗಳ ಜೊತೆಗೆ ಹಣವನ್ನು ಪಡೆದುಕೊಳ್ಳುತ್ತಾನೆ.

**ನೀಲಿಹೊತ್ತಿಗೆಯ ಮೂಲಕ ಭವಿಷ್ಯ ಹೇಳುವುದು** : "ಬುಡಬುಡಕೆಯವರು ತಮ್ಮಲ್ಲಿರುವ ಭವಿಷ್ಯದ ಹೊತ್ತಿಗೆ ಸಹಾಯದಿಂದ ಭವಿಷ್ಯ ಹೇಳುವುದನ್ನು ಕಾಣುತ್ತೇವೆ. ಇದಕ್ಕೆ 'ನೀಲಿ ಹೊತ್ತಿಗೆ' ಎಂದು ಕರೆಯುತ್ತಾರೆ". ಈ ಹೊತ್ತಿಗೆಯಲ್ಲಿ ಸುಮಾರು ೨೫-೩೦ ಪುಟಗಳಿದ್ದು, ಅದರಲ್ಲಿ ಪ್ರಾಣಿ, ಪಕ್ಷಿ, ದೇವರು, ಹೂವು, ರಾಕ್ಷಸ, ಮನುಷ್ಯನ ಶವ, ಮುಂತಾದ ಚಿತ್ರಗಳನ್ನು ಒಳಗೊಂಡಿರುತ್ತದೆ. ಭವಿಷ್ಯ ಕೇಳುವವರು ತಮ್ಮ ಮನೆ ದೇವರನ್ನು ಸ್ಮರಿಸಿ ಬುಡುಬುಡಕೆಯವನು ಕೊಡುವ ತಾಮ್ರದ ಕಡ್ಡಿಯ ಮೂಲಕ ಅ ನೀಲಿ ಹೊತ್ತಿಗೆಯಲ್ಲಿಯ ಒಂದು ಪುಟವನ್ನು ತೆಗೆಯಬೇಕು. ಹಾಗೆ ತೆಗೆದ ಚಿತ್ರದ ಆಧಾರದ ಮೇಲೆ ಭವಿಷ್ಯವನ್ನು ಹೇಳುತ್ತಾನೆ. ಭವಿಷ್ಯ ಕೇಳುವ ವ್ಯಕ್ತಿಗೆ ಆಕಳು, ವೃಷಭ, ಪೂರ್ಣಚಂದ್ರ, ಯರಳಿ-ಮನುಷ್ಯ, ಋಷಿಗಳು, ತೂಗುವ ತೊಟ್ಟಿಲು, ನಾಲ್ಕು ಮಂದಿ ಗಾಳಿಯಲ್ಲಿ ತೇಲಾಡುವ ಸ್ತ್ರೀಯರು, ದತ್ತಾತ್ರೇಯ, ಮಾರುತಿ, ಧರ್ಮರಾಜನ ಸಭೆ, ಹಸ್ತಕಮಲ, ಮೀನು ಬಂದರೆ ಶುಭ ಮತ್ತು ಹಿಡಿದ ಕಾರ್ಯಗಳು ಯಶಸ್ವಿಯಾಗುತ್ತವೆ ಎಂದು ಸೂಚಿಸುತ್ತಾರೆ. ಆದರೆ ನರಸಿಂಹ, ಹೆಣ್ಣುಮಗಳು-ರಾಕ್ಷಸ, ವ್ಯಾಘ್ರ, ಮನುಷ್ಯನನ್ನು ಹಿಡಿಯವುದು ಈ ಚಿತ್ರಗಳು ಬಂದರೆ ಅಶುಭವೆಂದು ಹೇಳಿ ಅದಕ್ಕೆ ಪರಿಹಾರವಾಗಿ ತೆಂಗಿನಕಾಯಿ, ಕುರಿಮರಿ ಮುಂತಾದ ದಾನ ಕೊಡಬೇಕೆಂದು ಹೇಳುತ್ತಾರೆ, ಅಷ್ಟೇ ಅಲ್ಲ, ಗೋಪಿ, ಸರ್ಪಗಳು, ಗೂಗಿಗಳು, ಶೂಲದ ಮೇಲೆ ಮನುಷ್ಯ ಕುಸ್ತಿ ಹಿಡಿದ ಚಿತ್ರ, ಬೆಕ್ಕು, ಇಲಿ, ಸಿದಗಿ ಸಂಭ್ರಮ, ಈ ಚಿತ್ರಗಳು ಬಂದರೆ ಭವಿಷ್ಯವು ಹೀನಾಯವಾಗಿದೆ ಎಂದು ಹೇಳುತ್ತಾ ಇದಕ್ಕೆ ಪರಿಹಾರ ಮಾಡಬೇಕೆಂದು ಸೂಚಿಸುತ್ತಾರೆ. ಅದಕ್ಕೆ ಕುರಿಮರಿ, ಕೋಳಿ, ತಾಮ್ರ, ಅಕ್ಕಿ-ಬಟ್ಟೆ ಮುಂತಾದ ವಸ್ತುಗಳನ್ನು ನೀಡಿ ಪರಿಹಾರ ಕಂಡುಕೊಳ್ಳಬೇಕೆಂದು ಹೇಳುತ್ತಾರೆ.

**ಸ್ಥಿತಿ-ಗತಿ**

ಈ ಬುಡಬುಡಿಕೆಯ ವೃತ್ತಿಯನ್ನು ಹೆಚ್ಚಾಗಿ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲೂಕಿನ ಕೋಡಿಹಾಳ ಹಾಗೂ ಬಿಜಾಪೂರ ಜಿಲ್ಲೆಯ ಕೋರವಾರ ಗ್ರಾಮದ ಗೊಂದಲಿಗರರು ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಈ ವೃತ್ತಿಯನ್ನು ಕಲಿಯಲು ಇವರು ಹೆಚ್ಚಾಗಿ ಉಡುಪಿ, ಮಂಗಳೂರುಗಳಲ್ಲಿರುವ ತಮ್ಮ ಗುರುಗಳ ಹತ್ತಿರ ಹೋಗುತ್ತಾರೆ. ಬದಲಾದ ಇಂದಿನ ಸಂದರ್ಭದಲ್ಲಿ ಬುಡುಬಡಿಕ್ಯಾ ತನ್ನ ಭವಿಷ್ಯ ಗೊತ್ತಿಲ್ದ ತಿರಗ್ತಾನ'. ಎನ್ನುವ ಗಾದೆ ಮಾತುಗಳಂತೆ, ಅವರು ಹೇಳುವ ಭವಿಷ್ಯದ ಮೇಲೆ ಜನರ ನಂಬಿಕೆಯೂ ಕಡಿಮೆಯಾಗಿದೆ. ಗ್ರಾಮಗಳಲ್ಲಿ ಇವರಿಗೆ ದೊರೆಯುತ್ತಿದ್ದ ದವಸ ಧಾನ್ಯಗಳು ಸಿಗುತ್ತಿಲ್ಲ. ಹೀಗಾಗಿ ಬುಡುಬುಡಿಕೆ ಕುಟುಂಬಗಳು ಹಸ್ತಸಾಮುದ್ರಿಕಾ ಶಾಸ್ತ್ರವನ್ನು ಕಲಿಯಲು ಅದರ ಮೂಲಕ ಭವಿಷ್ಯ ಹೇಳಲು ಮುಂದಾಗಿದ್ದಾರೆ. ಹೊಟ್ಟೆ ತುಂಬಿಸಿಕೊಳ್ಳಲು

ಸಾಧ್ಯವಾಗದ ಹಾಗೂ ಇದರಿಂದ ಉದ್ಭವಿಸುವ ಹಲವಾರು ತೊಂದರೆ-ತಾಪತ್ರಯಗಳಿಂದ ಅನೇಕರು ಬುಡಬುಡಿಕೆ ವೃತ್ತಿಯನ್ನು ಬಿಟ್ಟು ಗಣಿತಶಾಸ್ತ್ರ, ರಮಲಶಾಸ್ತ್ರ, ಸಂಖ್ಯಾಶಾಸ್ತ್ರ, ಪಂಚಾಂಗ, ವಾರ, ತಿಥಿ, ಯೋಗ, ಕರಣಗಳನ್ನು ಅಭ್ಯಾಸಮಾಡಿ ಲೆಕ್ಕ ಹಾಕಿ ಅಳೆದು ತೂಗಿ ವಿಷಯಗಳನ್ನು ಸ್ವಾರಸ್ಯ ವಾಗಿ ಹೇಳುವ ಕಲೆಯನ್ನು ರೂಢಿಗತ ಮಾಡಿಕೊಳ್ಳುತ್ತಿದ್ದಾರೆ.

ಬಹುಪಾಲು ಬುಡಬುಡಿಕೆಯವರು ಇನ್ನೂ ಅಲೆಮಾರಿಗಳಾಗಿಯೇ ಬದುಕನ್ನು ಕಳೆಯುತ್ತಿದ್ದಾರೆ. ಬುಡಬುಡಿಕೆಯವರು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಅತೀ ಹಿಂದುಳಿದಿದ್ದು, ಗ್ರಾಮ-ನಗರ ಪ್ರದೇಶಗಳಲ್ಲಿ ಸ್ವಂತ ಮನೆ-ಗುಡಿಸಲುಗಳನ್ನು ಹೊಂದಿರುವುದನ್ನು ಕಾಣುವುದಿಲ್ಲ. ಊರ ಹೊರಗಿನ ಬಯಲು ಪ್ರದೇಶಗಳೇ ಇವರಿಗೆ ಆಶ್ರಯ ತಾಣಗಳಾಗಿವೆ. ಬುಡಬುಡಿಕೆಯವರು ಊರಿಂದ-ಊರಿಗೆ ತಮ್ಮ ಕುಟುಂಬದೊಂದಿಗೆ ಅಲೆದಾಡುತ್ತಿರುವುದರಿಂದ ಇವರ ಮಕ್ಕಳು ಶಿಕ್ಷಣ ದಿಂದಲೂ ವಂಚಿತರಾಗುತ್ತಿದ್ದಾರೆ. ಇತ್ತಿತ್ತಲಾಗಿ ಬುಡಬುಡಿಕೆಯವರು ತಾವು ಪರಂಪರಾನುಗತ ವೃತ್ತಿಯಿಂದ ಉಪಜೀವನ ನಡೆಸಲು ಸಾಧ್ಯವಿಲ್ಲದ್ದಕ್ಕಾಗಿ ದೊಡ್ಡ-ದೊಡ್ಡ ಭಾಂಡೆ-ವ್ಯಾಪಾರಸ್ಥರಿಂದ, ಭಾಂಡೆ ಸಾಮಾನುಗಳನ್ನು ತೆಗೆದುಕೊಂಡು, ಅವುಗಳನ್ನೇ ಹೊತ್ತುಕೊಂಡು ಊರೂರು ಮನೆ-ಮನೆಗೆ ಹೋಗಿ ಹಳೆ ಸಾಮಾನುಗಳನ್ನು ತೆಗೆದುಕೊಂಡು ಹಣಕ್ಕಾಗಲೀ, ಹಳೆ ಸಾಮಾನುಗಳಿಗೆ ಪ್ರತಿಯಾಗಿ ಹೊಸ ಸಾಮಾನುಗಳನ್ನು ಮಾರುವುದರ ಮೂಲಕ ತಮ್ಮ ಉಪ ಜೀವನದ ಮಾರ್ಗವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

**೩. ಗೊಂದಲಿಗರ ಭಾಟ ವೃತ್ತಿ**

ಗೊಂದಲಿಗ ಸಮುದಾಯದಲ್ಲಿಯೇ ಬರುವ ಭಾಟ ವೃತ್ತಿಯವರನ್ನು ಭಟ್ಟಂಗಿಗಳು ಎಂದು ಕರೆಯುತ್ತಾರೆ. ಭಟ್ಟಂಗಿ ಎಂದರೆ ಹೊಗಳುವವರು. ಅಂದರೆ ಮಾತೃದೇವತೆಗಳ ಮಹಿಮೆಗಳನ್ನು ಕೊಂಡಾಡುವವರು. ಗುಳೇದಗುಡ್ಡದ ಶ್ರೀ ಶಾಂತವೀರ ಭಾಟ(ಶಿಂಧೆ), 'ಇವರು ದೇವತೆಗಳ ಮಹಿಮೆ ಗಳನ್ನು ಕೊಂಡಾಡುವದಷ್ಟೆ ಅಲ್ಲ, ರಾಜ-ಮಹಾರಾಜರ ಕಾಲದಲ್ಲಿ ರಾಜನ ಹೊಗಳುವ ಬಹು-ಪರಾಕುಗಳನ್ನು ಹೇಳುವ ಕೆಲಸವನ್ನು ಮಾಡುತ್ತಿದ್ದರು' ಸಾಮಾನ್ಯವಾಗಿ ಈ ರೀತಿಯ ವೃತ್ತಿಯಲ್ಲಿ ತೊಡಗಿರುವ ಗೊಂದಲಿಗರು ಗುಳೇದಗುಡ್ಡ, ರಾಮದುರ್ಗ, ಇಲಕಲ್, ಸವದತ್ತಿ, ಗಜೇಂದ್ರಗಡ, ಮುಧೋಳ, ಪ್ರದೇಶಗಳಲ್ಲಿ ಕಂಡುಬರುತ್ತಿದ್ದು, ಶಕ್ತಿಯ ಆರಾಧಕ ಕುಟುಂಬಗಳಿಗೆ-ಮನೆಗಳಿಗೆ ಹೋಗಿ ಅಲ್ಲಿ ಸುಮಾರು ಗಂಟೆಯವರೆಗೆ ಕಾಳಿಕಾದೇವಿ, ಎಲ್ಲಮ್ಮದೇವಿ, ಅಂಬಾಭವಾನಿ, ತುಳಜಾ ಭವಾನಿ ಮುಂತಾದ ಶಕ್ತಿದೇವಿಯರ ಸ್ತುತಿ ಮಾಡಿ ಸ್ತೋತ್ರಗಳನ್ನು ಹೇಳಿ ಅವರಿಂದ ಬಟ್ಟೆ, ಹಣ, ದವಸ, ಧಾನ್ಯಗಳನ್ನು ಪಡೆದುಕೊಳ್ಳುವರು ಮತ್ತು ಈ ವೃತ್ತಿಯ ಮೂಲಕವೇ ಉಪಜೀವನವನ್ನು ಸಾಗಿಸುವುದನ್ನು ಕಾಣುತ್ತೇವೆ. ಈ ಭಾಟ ವೃತ್ತಿಯವರು ಧೋತರ-ನಿಲುವಂಗಿ ಧರಿಸಿ ಮೇಲೆ ಕರಿಕೋಟನ್ನು ಧರಿಸುತ್ತಾರೆ. ತಲೆಗೆ ರುಮಾಲು ಸುತ್ತಿಕೊಂಡು ಹಣೆಗೆ ಕುಂಕುಮ ಹಚ್ಚಿಕೊಂಡಿರುವ ಇವರು ಕೈಯಲ್ಲಿ ತಮಗಿಂತ ಉದ್ದವಾದ ಈಟಿಯನ್ನು ಹಿಡಿದುಕೊಂಡಿರುತ್ತಾರೆ.

ಇಂದಿನ ಆಧುನಿಕ ಕಾಲದಲ್ಲಿ ಈ ರೀತಿಯ ವೃತ್ತಿಯು ತಮ್ಮ ಉಪ ಜೀವನಕ್ಕೆ ಸಹಾಯಕ ವಾಗಿರದ ಕಾರಣ ಈ ವೃತ್ತಿಯನ್ನೇ ಅನುಸರಿಸುತ್ತಾ ಬಂದ ಬಹುಪಾಲು ಗೊಂದಲಿಗ ಕುಟುಂಬಗಳು ಈ ವೃತ್ತಿಯಿಂದ ಹಿಂದೆ ಸರಿಯುತ್ತಿವೆ.

೪. ಸಿಂಗದವರ ವೃತ್ತಿ

ಗೊಂದಲಿಗ ಸಮುದಾಯದಲ್ಲಿ ಬರುವ ಇನ್ನೊಂದು ವೃತ್ತಿ ಪಂಗಡ ಸಿಂಗದವರ ವೃತ್ತಿ. ನಪೂರಿ ಎಂಬ ವಾದ್ಯವನ್ನು ಊದುವ ಅಥವಾ ನುಡಿಸುವ ವೃತ್ತಿಯನ್ನು ಮಾಡಿಕೊಂಡವರೇ ಸಿಂಗದವರು. ಇವರನ್ನು ಸಿಂಗೆ, ಸಿಂಧೆ ಎಂದೂ ಕರೆಯುತ್ತಾರೆ. "ಸಿಂಗದ ಮಾಡುವವನು ನಪೂರಿ ಯಲ್ಲಿ ಹಾಡುಗಳನ್ನು ನುಡಿಸುವ ಕಲಾಕಾರನೇ ಆಗಿರುವನು. ಇವರನ್ನು ಗೊಂದಲಿಗರ ಸಮುದಾಯದ ಅತ್ಯಂತ ಪ್ರಾಚೀನ ಕಲಾವಿದರೆಂದೇ ಹೇಳುತ್ತಾರೆ. ಚಾಲುಕ್ಯರ ರಾಜ್ಯದಲ್ಲಿ ಸೈನ್ಯದ ಮುಂದೆ, ದೇವಿಯ ಎದುರು ನಿಂತು ಇವರು ಗಪೂರಿ ವಾದ್ಯ ನುಡಿಸುತ್ತಿದ್ದರು. ಇವರಿಗೆ ಅರಸರು 'ದಳವಾಯಿ'ಯವರು ಎಂದು ಕರೆಯುತ್ತಿದ್ದರು".[೮] ಸಾಮಾನ್ಯವಾಗಿ ನಪೂರಿ ವಾದ್ಯವನ್ನು ಬೆಳ್ಳಿಯಿಂದಲೇ ಮಾಡಲಾಗುತ್ತದೆ.

ಸಿಂಗದವರ ವೃತ್ತಿಯಲ್ಲಿ ತೊಡಗಿರುವ ಗೊಂದಲಿಗರು ಗುಳೇದಗುಡ್ಡ, ಕೆರೂರ, ಇಲಕಲ್, ಮುಂತಾದ ಸ್ಥಳಗಳಲ್ಲಿ ಕಂಡುಬರುತ್ತಾರೆ. ಸಾಮಾನ್ಯವಾಗಿ ಇವರು ನೇಕಾರ ಸಮುದಾಯದಲ್ಲಿ ಬರುವ ದೇವಾಂಗದವರಿಗೆ, ಕುರುವಿನಶೆಟ್ಟಿ, ಪದ್ಮಸಾಲಿ ಹಾಗೂ ಶಕ್ತಿದೇವತೆಯರ ಆರಾಧಕರ ಮನೆಯಲ್ಲಿ ಈ ವಾದ್ಯವನ್ನು ನುಡಿಸುತ್ತಾರೆ. ಡಾ. ಸಿ.ಮಹಾದೇವ ಅವರು ಸಂಪಾದಿಸಿದ "ನೇಕಾರ ಸಮಾಜ ಸಂಸ್ಕೃತಿ-ಆರ್ಥಿಕ ಸ್ಥಿತಿಗತಿ" ಎನ್ನುವ ಗ್ರಂಥದಲ್ಲಿ ರಮೇಶ ಮಾಳಾರವರ ನೇಕಾರರಲ್ಲಿ ಒಳಪಂಗಡಗಳು ಎನ್ನುವ ಲೇಖನದಲ್ಲಿ 'ಸಿಂಗದವರು ದೇವಾಂಗ ಸಮಾಜದ ಕುಲಸೇವಕರು' ಎಂದು ಹೇಳಿದ್ದಾರೆ. ಗುಳೇದಗುಡ್ಡದ ಶ್ರೀ ಶಾಂತವೀರ ಬಾಟ್ ಅವರ ಅಭಿಪ್ರಾಯದಲ್ಲಿ ಸಿಂಗದವರು ಊದುವ ನಪೂರಿ ವಾದ್ಯವು ಬೆಳ್ಳಿಯದಾಗಿದ್ದು, ಅದನ್ನು ದೇವಾಂಗ ಪದ್ಮಸಾಲಿ, ಕುರುವಿನಶೆಟ್ಟಿ ಸಮಾಜದವರೇ ಮಾಡಿಸಿಕೊಟ್ಟಿದ್ದರಂತೆ, ಯಾವುದೇ ಸಂದರ್ಭದಲ್ಲಿ ಅವರ ಮನೆಯಲ್ಲಿ ನಡೆಯುವ ಮದುವೆ-ಮಂಗಲ ಕಾರ್ಯಗಳಲ್ಲಿ, ಜಾತ್ರೆ-ಉತ್ಸವಗಳಲ್ಲಿ, ವಿಶೇಷ ಅಷ್ಠಾನಿತರಾಗಿ ನಪೂರಿ ವಾದ್ಯವನ್ನು ನುಡಿಸಬೇಕು. ಬನದ ಹುಣ್ಣಿಮೆಯಂದು ಬದಾಮಿ-ಬನಶಂಕರಿ ಜಾತ್ರೆಯ ಸಂದರ್ಭದಲ್ಲಿ ನೇಕಾರ ಸಮಾಜದ ಈ ಪಂಗಡಗಳ ಜೊತೆಗೆ ಹೋಗಲೇಬೇಕಾಗಿತ್ತು. ಜಾತ್ರೆಯ ಸಂದರ್ಭದಲ್ಲಿ ದೇವಿ ಸ್ಮರಣೆಯ ಮಾಡುತ್ತಿರುವಾಗ ಈ ನಪೂರಿ ವಾದ್ಯದಿಂದ 'ತು ತೂ,ತೂತೂ, ತೂಂ ತು ತೂ' ಎಂಬ ಸ್ವರಗಳನ್ನು ನುಡಿಸುತ್ತಾರೆ. ಸಿಂಗದವರು ತಮ್ಮದೇ ಆದ ಲಾಂಚನವಿದ್ದು ಹಳದಿ, ಹಸಿರು, ಬಣ್ಣಗಳಿಂದ ಕೂಡಿದ ಮಧ್ಯದಲ್ಲಿ ಸಿಂಹದ ಚಿತ್ರವಿರುವ ಧ್ವಜವನ್ನು ಹೊಂದಿದ್ದಾರೆ. ಸಿಂಗದವರು ಒಂದೊಂದು ನಿರ್ದಿಷ್ಟ ಜಾತಿ-ಉಪಜಾತಿಯವರಿಗೆ ಸೀಮಿತಗೊಂಡು ತಮ್ಮ ಕಾರ್ಯ ನಿರ್ವಹಿಸು ತ್ತಿದ್ದುದರಿಂದ, ಇವರನ್ನು ಸಮಾಜದ ಆಯಗಾರರೆಂದು ತಿಳಿದು ಅವರ ಇಡೀ ಕುಟುಂಬದ ಖರ್ಚು-ವೆಚ್ಚಗಳನ್ನು ನೋಡಿಕೊಳ್ಳುತ್ತಿದ್ದರು. ಬದಲಾದ ಇಂದಿನ ಸಂದರ್ಭದಲ್ಲಿ ಈ ರೀತಿಯ

ಅನುಕೂಲತೆಗಳು ದೊರೆಯದೇ ಕಾರಣ ಸಿಂಗದ ವೃತ್ತಿಯನ್ನು ಅನುಸರಿಸುತ್ತಾ ಬಂದಂತವರು ಅದಮ್ನು ಕೈಬಿಟ್ಟು ಇರುವ ನಪೂರಿ ವಾದ್ಯವನ್ನು ಮಾರಿಯೋ ಅಥವಾ ಕೊಡಿಸಿದ ಆಯಾ ಸಮಾಜದ ವರಿಗೆ ಮರಳಿಸಿ ಉಪಜೀವನದ ಬೇರೆ ಮಾರ್ಗವನ್ನು ಕಂಡುಕೊಂಡಿದ್ದಾರೆಂದು ಸಿಂಗದವರ ವೃತ್ತಿಯ ಬಗೆಗೆ ವಿವರಣೆ ನೀಡಿದರು.

### ೫. ಎಣ್ಣೆ ಜೋಗಿಗಳು

ಎಣ್ಣೆ ಜೋಗಿಗಳನ್ನು ಭೂತ್ಯಾ, ಭೂತೇರ, ಭೂತೇ ಎಂದು ಕರೆಯುತ್ತಾರೆ. ಉದ್ದನೆಯ ನಿಲುವಂಗಿ ಧರಿಸಿ ಧೋತರ ಬಿಗಿಯಾದ ಚೊಣ್ಣವನ್ನು ತೊಟ್ಟು, ತಲೆಗೆ ರುಮಾಲು ಹಾಕಿಕೊಂಡು ಕೊರಳಲ್ಲಿ ಕವಡಿಯ ಸರಗಳನ್ನು ಹಾಕಿಕೊಂಡು, ಒಂದು ಕೈಯಲ್ಲಿ ಎಣ್ಣೆಯ ತತ್ತರಾಣಿ, ಇನ್ನೊಂದು ಕೈಯಲ್ಲಿ ಉದ್ದನೆಯ ದೀವಟಿಗೆ ಅಥವಾ ಕಕ್ಕಡ ಹಿಡಿದುಕೊಂಡು ಬಗಲಲ್ಲಿ ಜೋಳಿಗೆ ಎದೆಯ ಮೇಲೆ ಶಕ್ತಿದೇವತೆಯ ಕಂಚಿನ ಮೂರ್ತಿ ಅಥವಾ ಚಿತ್ರಪಟವನ್ನು ನೇತು ಹಾಕಿಕೊಂಡು, ಊರಿನ ಪ್ರತಿಯೊಂದು ಮನೆಯ ಮುಂದೆ ಶಕ್ತಿಯ ಅವತಾರಗಳನ್ನು ಹಾಡುತ್ತಾ ಅವರಿಂದ ಎಣ್ಣೆ, ಧನ, ಧಾನ್ಯ, ಬಟ್ಟೆ ಸಂಗ್ರಹಿಸಿ ಉಪಜೀವನ ಸಾಗಿಸುವರು. ಇವರಲ್ಲಿಯೇ ಕೆಲವರು ಕೈಗಳಿಗೆ ಬೆಳ್ಳಿಯ ಕಡಗಗಳನ್ನು ಹಾಕಿಕೊಂಡು ಹಣೆಗೆ ಭಂಡಾರ, ಕುಂಕುಮ ಹಚ್ಚಿಕೊಂಡು, ಮನೆ-ಮನೆಗೆ ಹೋಗಿ ದೇವತೆಗಳ ಅವತಾರ, ಪವಾಡಗಳನ್ನು ಹಾಡುತ್ತಾ ಅವರಿಂದ ಎಣ್ಣೆ, ಹಣ, ದವಸ-ಧಾನ್ಯಗಳನ್ನು ಸ್ವೀಕರಿಸುತ್ತಾರೆ. ಇವರು ಸಿದ್ಧಪಡಿಸಿದ ಆಹಾರವನ್ನು ಸ್ವೀಕರಿಸುವದಿಲ್ಲ.

ಎಲ್ಲಮ್ಮನ ಅಂಬಾಭವಾನಿಯ ಆರಾಧಕರಾಗಿರುವ ನಮ್ಮಿಂದ ಭೂತ-ಪಿಶಾಚಿಗಳು ದೂರವಾಗುವವು ಅಲ್ಲದೇ ಯಾರಿಗಾದರೂ ಭೂತ-ಪಿಶಾಚಿಯ ಪೀಡೆ ಇದ್ದರೆ ಅದನ್ನು ದೇವಿಯ ಕೃಪೆಯಿಂದ ಬಿಡಿಸುತ್ತೇವೆ ಹೀಗಾಗಿ ನಮ್ಮನ್ನು ಭೂತ, ಭೂತೇರ, ಭೂತೆ ಎಂದು ಕರೆಯುತ್ತಾರೆಂದು ಹೇಳಿಕೊಳ್ಳುತ್ತಾರೆ.

ಅಂಬಾಭವಾನಿಯ ಜಾತ್ರೆ-ಉತ್ಸವಗಳಲ್ಲಿ ೮-೧೦ ಜನರ ಭೂತೇರು ಕಣ್ಣಿಗೆ ಕಾಡಿಗೆ ಹಣೆಗೆ ಭಂಡಾರ, ಕೊರಳಿಗೆ ಕವಡೆಯ ಕೈಕಡಗ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಹಲಗೆಯ ವಾದನದ ಜೊತೆಗೆ ಉರ ಎಂದು ಉಸಿರು ಬಿಡುತ್ತಾ 'ಆಯಿರಾಜಾ ಉಧೋ-ಉಧೋ' ಎಂದು ಕೂಗುತ್ತಾ ಕುಣಿಯುತ್ತಾರೆ. ಇದನ್ನು 'ಭೂತೇರ ಕುಣಿತ' ಎಂದು ಕರೆಯುತ್ತಾರೆ. ಈ ವೃತ್ತಿಯಲ್ಲಿರುವುದು ಕಂಡುಬರುತ್ತಾರೆ.

### ೬. ಅರೆ ಪಂಚಾಂಗದವರು

ಬುಡಬುಡಿಕೆಯವರ ಹಾಗೆ ಧೋತರ ನಿಲುವಂಗಿ, ಹಣೆಯ ಮೇಲೆ ನಾಮ ಧರಿಸಿ ಮೇಲೊಂದು ಕರಿಕೋಟು ಹಾಕಿಕೊಂಡು ಕೈಯಲ್ಲಿ ಪಂಚಾಂಗದ ಹೊತ್ತಿಗೆಯನ್ನು ತೆಗೆದುಕೊಂಡು ಬಗಲಲ್ಲಿ ಜೋಳಿಗೆ ಹಾಕಿಕೊಂಡು ಊರೂರು ತಿರುಗುತ್ತಾ ಮನೆ-ಮನೆಗೆ ಹೋಗಿ ಜ್ಯೋತಿಷ್ಯ ಹೇಳುವವರನ್ನು ಅರೆ ಪಂಚಾಂಗದವರು ಎಂದು ಕರೆಯುತ್ತಾರೆ. ಗ್ರಾಮಾಂತರ ಪ್ರದೇಶಗಳಲ್ಲಿ

ಮಳೆ-ಬೆಳೆ, ಬಿತ್ತುವ, ಕೊಯ್ಯುವ ಕಣಮಾಡುವ, ರಾಶಿಮಾಡುವ, ಎತ್ತು ಖರೀದಿಸುವ ಮತ್ತಿತರ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಕೇಳಿದರೆ ಅದರ ಬಗ್ಗೆ ತಮ್ಮ ಪಂಚಾಂಗದ ಹೊತ್ತಿಗೆಯನ್ನು ತೆಗೆದು ವಿವರ ಹೇಳುತ್ತಾರೆ. ಈ ರೀತಿಯ ಭವಿಷ್ಯವನ್ನು ಹೇಳುವುದರ ಮೂಲಕ ಹಣ, ಬಟ್ಟೆ, ದವಸ, ಧಾನ್ಯಗಳನ್ನು ಪಡೆದುಕೊಂಡು ಉಪಜೀವನವನ್ನು ಸಾಗಿಸುವರು

ಸಾಮಾನ್ಯವಾಗಿ ಆದ ಬುಡಬುಡಕೆಯವರೆ ಈ ಅರೆಪಂಚಾಂಗ ವೃತ್ತಿಯನ್ನು ಮಾಡುತ್ತಿರುವುದು ಕಂಡುಬರುತ್ತದೆ. ಈ ವೃತ್ತಿಯನ್ನು ಅನುಸರಿಸುವ ಜನರು ಅಲೆಮಾರಿಗಳಾಗಿದ್ದು, ಬುಡಬುಡಕೆಯವರ ಹಾಗೆಯೇ ಕೆಲವೊಂದು ನಿರ್ದಿಷ್ಟ ಊರುಗಳನ್ನು ಆಯ್ಕೆ ಮಾಡಿಕೊಂಡಿರುತ್ತಾರೆ. ಇವರಿಗೆ ಪಂಚಾಂಗದ ಬಗ್ಗೆ ಅರೆ-ಬರೆ ಜ್ಞಾನ ಇರುವುದರಿಂದಲೇ ಇವರನ್ನು ಸ್ಥಳೀಯರು ಅರೆ-ಪಂಚಾಂಗ ದವರು ಎಂದು ಕರೆದಿರಬೇಕು. ಈ ರೀತಿ ಪಂಚಾಂಗದ ಸಹಾಯದಿಂದ ಭವಿಷ್ಯವನ್ನು ಹೇಳುತ್ತಾ ಜೀವನೋಪಾಯ ಮಾಡುತ್ತಿದ್ದಂತವರನ್ನು ಇಂದು ಕಾಣುವದು ಅಪರೂಪ ಎಂದೇ ಹೇಳಬೇಕಾಗುತ್ತದೆ.

### ೭. ಜ್ಯೋತಿಷ್ಯ ವೃತ್ತಿ

ಇಂದಿನ ಆಧುನಿಕ ಹಾಗೂ ಸಂಕೀರ್ಣವಾದ ಜಗತ್ತಿನಲ್ಲಿ ಅನಿಶ್ಚಿತತೆ ಮತ್ತು ಆತಂಕಗಳಿಂದ ಯಾರು ಹೊರತಾಗಿಲ್ಲ. ಹಸ್ತ ಸಾಮುದ್ರಿಕರು ಮತ್ತು ಭವಿಷ್ಯ ಹೇಳುವ ರೋಬೋಟಗಳಿಂದ, ಮೋಬೈಲ್ ಮೂಲಕ ನೀಡುವ ಭವಿಷ್ಯ ಹೀಗೆ ಜನರು ನಾನಾ ಮಾರ್ಗಗಳಿಂದ ತಮ್ಮ ಭವಿಷ್ಯ ಅರಿಯುವುದಕ್ಕೆ ಪ್ರಯತ್ನಿಸುತ್ತಾರೆ ದಿನನಿತ್ಯದ ಜೀವನವನ್ನು ವಿಜ್ಞಾನ-ತಂತ್ರಜ್ಞಾನವು ವ್ಯಾಪಿಸಿಕೊಂಡಿರುವ ಇಂದಿನ ತಾಂತ್ರಿಕ ಯುಗದಲ್ಲಿಯೂ ಜನರು ಜ್ಯೋತಿಷ್ಯಗಳಲ್ಲಿ ಮತ್ತು ಸಾಂಪ್ರದಾಯಕ ಭವಿಷ್ಯಗಾರರಲ್ಲಿ ದೃಢವಾದ ನಂಬಿಕೆಯನ್ನು ಇರಿಸಿಕೊಂಡಿರುವ ಸಂಖ್ಯೆ ಅಧಿಕವಾಗಿದೆಯೆಂದೆ ಹೇಳಬೇಕು.

ಅಂತರ್ಜಾಲದಲ್ಲಿ ಜ್ಯೋತಿಷ್ಯಕ್ಕೆ ಸಂಬಂಧಪಟ್ಟ ಲೇಖನದಲ್ಲಿ ಜೆ.ಎಸ್.ಎಸ್ ವೈದ್ಯಕೀಯ ಮಹಾವಿದ್ಯಾಲಯ ಮೈಸೂರಿನ ಮಾನವಶಾಸ್ತ್ರ ವಿಭಾಗ ಮುಖ್ಯಸ್ಥರಾಗಿರುವ ಡಾ.ಟಿ.ಎಸ್. ಸತ್ಯನಾರಾಯಣ ಅವರು- 'ಕಾಲದ ತೀವ್ರವಾದ ವೇಗದ ಅಡಿಯಲ್ಲಿ ಬಹುಸಂಖ್ಯಾತ ಜನರು ತಮ್ಮ ಜೀವನದಲ್ಲಿ ಸಾಕಷ್ಟು ಒತ್ತಡ ಹಾಗೂ ಆತಂಕಗಳಿಂದ ತತ್ತರಿಸುತ್ತಿದ್ದಾರಲ್ಲದೇ ಅದರಿಂದ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಭವಿಷ್ಯಕಾರರ ಅಥವಾ ಜ್ಯೋತಿಷಿಗಳನ್ನು ಭೆಟ್ಟಿಯಾಗುವುದು ನಮ್ಮ ಪದ್ಧತಿ ಮತ್ತು ನಂಬಿಕೆಗಳ ಅವಿಭಾಜ್ಯ ಅಂಗ. ಇಂದಿನ ದಿನಮಾನದಲ್ಲಿ ಅದನ್ನೊಂದು ವಿಜ್ಞಾನ ಎಂದು ಪ್ರಚುರ ಪಡಿಸುವ ಮತ್ತು ಆಶಾಕಿರಣವೆಂದು ಮಾನಸಿಕ ನೆಮ್ಮದಿ ಪಡೆಯುವ ಸಾಧನವೆಂದು ಗ್ರಹಿಸಲಾಗುತ್ತದೆ' ಎಂದು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಪೂರಕವಾಗಿ ಪ್ರತಿಯೊಂದು ದೂರದರ್ಶನ ವಾಹಿನಿಗಳು ಮುಂಜಾನೆಯ ಸಮಯದಲ್ಲಿ ದ್ವಾದಶರಾಶಿಯವರ ಭವಿಷ್ಯವನ್ನು ಹೇಳುತ್ತಾ ದಿನದ ವಿಶೇಷತೆ ಹಾಗೂ ಅಂದು ಅನುಸರಿಸಬೇಕಾದ ಕ್ರಮಗಳ ಬಗ್ಗೆ ಮಾಹಿತಿ ಕೊಡುತ್ತಿರುವುದು, ಆ ಕಾರ್ಯಕ್ರಮವನ್ನು ಬಹಳಷ್ಟು ಜನರು ಕಾತುರದಿಂದ ನೋಡುತ್ತಿರುವು ದನ್ನು ಕಾಣುತ್ತೇವೆ. ಪರಿಣಾಮ ಜ್ಯೋತಿಷ್ಯ ವೃತ್ತಿಯು ಒಂದು ವ್ಯವಹಾರಿಕ-ವ್ಯಾಪಾರಿ ವೃತ್ತಿಯಾಗಿ ಬೆಳೆಯುತ್ತಿದೆಯೋನೋ ಎನ್ನುವ ಸ್ಥಿತಿಯು ನಿರ್ಮಾಣವಾಗುತ್ತಿದೆ.

ಸಾಮಾನ್ಯವಾಗಿ ಪ್ರತಿಯೊಂದು ಭಾಗದಲ್ಲಿ ಜ್ಯೋತಿಷ್ಯ ವೃತ್ತಿಯಲ್ಲಿ ತೊಡಗಿರುವವರನ್ನು ಕಾಣುತ್ತೇವೆ. ಅಂತಹ ಜ್ಯೋತಿಷ್ಯ ವೃತ್ತಿಯಲ್ಲಿ ತೊಡಗಿರುವ ಬಹುಸಂಖ್ಯಾತ ಜನರು ಗೊಂದಲಿಗ ಜನರೇ ಆಗಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. ಏಕೆಂದರೆ ಪ್ರಾರಂಭದಿಂದಲೂ ಜ್ಯೋತಿಷ್ಯ ವೃತ್ತಿಯಲ್ಲಿ ಪಾರಂಗತರಾದವರು ಮತ್ತು ಅದನ್ನು ಅನುಸರಿಸುತ್ತಾ ಬಂದವರು ಗೊಂದಲಿಗರೇ ಆಗಿದ್ದಾರೆ. ಜೋಶಿ, ವಾಷ್ಕರ್ ಅಡ್ಡ ಹೆಸರನ್ನು ಹೊಂದಿರುವವರೇ ಜ್ಯೋತಿಷ್ಯ ವೃತ್ತಿಯಲ್ಲಿ ತೊಡಗಿಸಿಕೊಂಡವರಾಗಿದ್ದಾರೆ. ಇತ್ತಿತ್ತಲಾಗಿ ಬುಡಬುಡಿಕೆಯವರು ಸಹ ಜ್ಯೋತಿಷ್ಯ ವೃತ್ತಿಯಲ್ಲಿ ತೊಡಗಿದ್ದಾರೆ. ಅಲೆಮಾರಿಗಳಾದ ಜ್ಯೋತಿಷಿಗಳು ಕರ್ನಾಟಕದ ಪ್ರತಿಯೊಂದು ಭಾಗಗಳಲ್ಲೂ ಕಂಡುಬರುತ್ತಿದ್ದು ಸ್ಥಳೀಯ ಭಾಷೆಯ ಜೊತೆಗೆ ೩-೪ ಭಾಷೆಯನ್ನು ಮಾತನಾಡಬಲ್ಲವರಾಗಿರುತ್ತಾರೆ.

ಜ್ಯೋತಿಷಿಗಳು ಎರಡು ರೀತಿಯಲ್ಲಿ ಜ್ಯೋತಿಷ್ಯ ಹೇಳುವುದನ್ನು ಕಾಣುತ್ತೇವೆ.

೧. ಜನಭರಿತವಾದ ಪ್ರದೇಶಗಳಲ್ಲಿ ಜ್ಯೋತಿಷ್ಯ ಹೇಳುವುದು

೨. ನಿರ್ದಿಷ್ಟ ಗೃಹ ಅಥವಾ ವಸತಿಗೃಹ(ಲಾಡ್ಜಿಂಗ್)ಗಳಲ್ಲಿ ಜ್ಯೋತಿಷ್ಯ ಹೇಳುವುದು.

ನಗರದ ಜನಭರಿತವಾದ ಕೇಂದ್ರಗಳಲ್ಲಿ ಅಥವಾ ಪ್ರದೇಶಗಳಲ್ಲಿ ಒಂದು ಸಣ್ಣ ಕಂಬಳಿಯನ್ನು ಹಾಸಿಕೊಂಡು ಜ್ಯೋತಿಷ್ಯ ಶಾಸ್ತ್ರದ ಕೆಲವು ಪುಸ್ತಕಗಳನ್ನು ಕೆಂಪು ಬಣ್ಣದ ವಸ್ತ್ರದಲ್ಲಿ ಕಟ್ಟಿಕೊಂಡು ಅದರ ಹಿಂದೆ ಶಕ್ತಿದೇವತೆಯ ಭಾವಚಿತ್ರ ಇಟ್ಟುಕೊಂಡಿರುತ್ತಾರೆ. ದೇವಿಯ ಮುಂದೆ ಊದಬತ್ತಿಯನ್ನು ಹಚ್ಚಿ ಕವಡೆಯನ್ನು ಹರಡಿ ಗಂಭೀರವಾಗಿ ಕುಳಿತು ಕೊಂಡಿರುತ್ತಾರೆ. ಈ ಜೋತಿಷಿಗಳು ಧೊತರ ಉಟ್ಟುಕೊಂಡು ಅದರ ಮೇಲೆ ನಿಲುವಂಗಿ ತೊಟ್ಟು ಕರಿಕೋಟನ್ನು ಧರಿಸಿರುತ್ತಾರೆ. ತಲೆಗೆ ರುಮಾಲು ಸುತ್ತಿಕೊಂಡು ಹಣೆಗೆ ನಾಮವನ್ನು, ಕೊರಳಲ್ಲಿ ರುದ್ರಾಕ್ಷಿ-ತುಳಸಿಮಾಲೆಯನ್ನು ಧರಿಸಿರುತ್ತಾರೆ. ಇಂಥ ಜ್ಯೋತಿಷಿಗಳು ಅಲೆಮಾರಿಗಳಾಗಿದ್ದು ಇವತ್ತು ಈ ಸ್ಥಳದಲ್ಲಿ ನಾಳೆ ಬೇರೊಂದು ಸ್ಥಳದಲ್ಲಿ ತಮ್ಮ ವೃತ್ತಿಯನ್ನು ಮಾಡುವವರಾಗಿದ್ದಾರೆ.

ಇವರಿಗಿಂತ ಭಿನ್ನವಾಗಿ ನಿರ್ದಿಷ್ಟ ಪಡಿಸಿದ ಗೃಹ ಅಥವಾ ವಸತಿ ಗೃಹಗಳಲ್ಲಿ ರೂಂದನ್ನು ತೆಗೆದುಕೊಂಡು, ಅದನ್ನು ದೇವಿ ಸಾಕ್ಷಾತ್ಕರಿಸಿದ ಸ್ಥಳವೇನೊ ಎನ್ನುವ ರೀತಿಯಲ್ಲಿ ಎಲ್ಲಾ ದೇವರು ಗಳ, ಗುರುಗಳ ಫೋಟೋಗಳನ್ನು ತೂಗುಹಾಕಿರುತ್ತಾರೆ. ಕೆಲವರು ನೆಲದ ಮೇಲೆ ದೇವರ ಪೋಟೋಗಳನ್ನು ಇಟ್ಟು ದೇವಿಯ ಪೋಟೋದ ಮುಂದೆ ದೀಪ ಊದಿನಕಡ್ಡಿಯನ್ನು ಹಚ್ಚಿರುತ್ತಾರೆ. ಇನ್ನು ಕೆಲವರು ಕುರ್ಚಿಯ ಮೇಲೆ ಕುಳಿತು, ಮುಂದೆ ಟೇಬಲ್ಲೊಂದನ್ನು ಇಟ್ಟು, ಅದರ ಮೇಲೆ ಜ್ಯೋತಿಷ್ಯಶಾಸ್ತ್ರದ ಪುಸ್ತಕಗಳನ್ನು, ಕವಡೆಗಳನ್ನು ಇಟ್ಟಿರುತ್ತಾರೆ. ಭವಿಷ್ಯ ಕೇಳಲು ಬರುವವರಿಗೂ ಕುರ್ಚಿಗಳನ್ನೇ ಹಾಕಿರುತ್ತಾರೆ. ಲಾಡ್ಜಿಂಗ್‌ನ ಮುಂದೆ ಒಂದು ಫಲಕವನ್ನು ಇಟ್ಟಿರುತ್ತಾರೆ. ಅದರಲ್ಲಿ ತಾವು ಯಾವ-ಯಾವ ರೀತಿ ಜ್ಯೋತಿಷ್ಯ ಹೇಳುತ್ತೇವೆ, ಯಾವ ವಿಳಾಸದಲ್ಲಿ ಇದ್ದೇವೆ ಎಂಬುದನ್ನು ತಿಳಿಸಿರುತ್ತಾರೆ. ಜೋತಿಷ್ಯಕ್ಕೆ ಸಂಬಂಧಿಸಿದ ವಿಷಯವನ್ನು ಪತ್ರಿಕೆಗಳಲ್ಲಿ ಜಾಹಿರಾತುಗಳನ್ನು ಕೊಡುವುದರ

ಮೂಲಕ ಪ್ರಚಾರ ಮಾಡುತ್ತಾರೆ. ಸಾಮಾನ್ಯವಾಗಿ ಜನ್ಮಕುಂಡಲಿ, ಜನ್ಮನಕ್ಷತ್ರ, ಹಸ್ತರೇಖೆ, ಮುಖಲಕ್ಷಣ ಗಳನ್ನು ನೋಡಿ ಭವಿಷ್ಯ ಹೇಳುತ್ತಿದ್ದು, ಅದಕ್ಕನುಗುಣವಾಗಿ ಇವರು ಜ್ಯೋತಿಷ್ಯಶಾಸ್ತ್ರಕ್ಕೆ ಸಂಬಂಧಪಟ್ಟ ಗಣಿತಶಾಸ್ತ್ರ, ಸಂಖ್ಯಾಶಾಸ್ತ್ರ, ರಮಲಶಾಸ್ತ್ರ, ಪಂಚಾಂಗ, ವಾರ, ತಿಥಿ, ಯೋಗ, ಕರಣಗಳನ್ನು ಅಭ್ಯಾಸ ಮಾಡಿಕೊಂಡಿರುತ್ತಾರೆ. ಇಂಥವರು ಪ್ರತಿಷ್ಠಿತ ಸ್ಥಳಗಳಲ್ಲಿ ವ್ಯವಸ್ಥಿತವಾಗಿ ಜ್ಯೋತಿಷ್ಯ ಹೇಳುವುದರಿಂದ ಇವರ ಹತ್ತಿರ ಶ್ರೀಮಂತರು, ರಾಜಕಾರಣಿಗಳು ಬರುತ್ತಾರೆ. ಚುನಾವಣೆಗಳು ಬಂದರಂತೂ ಇವರಿಗೆ ಬಿಡುವಿಲ್ಲದ ಕೆಲಸ. ಗ್ರಾಮ ಪಂಚಾಯತಿ ಚುನಾವಣೆಯಿಂದ ಹಿಡಿದು ಲೋಕಸಭಾ ಚುನಾವಣೆ ಯವರೆಗೂ ಅಭ್ಯರ್ಥಿಗಳು ಚುನಾವಣೆಯಲ್ಲಿ ಗೆಲ್ಲಬೇಕಾದರೆ ಯಾವ ರೀತಿ ನಡೆದುಕೊಳ್ಳಬೇಕು. ಯಾವ ರೀತಿಯ ತಂತ್ರವನ್ನು ಬಳಸಿಕೊಳ್ಳಬೇಕು ಮುಂತಾದ ಸಲಹೆಗಳನ್ನು ಕೇಳುತ್ತಾರೆ. ಅವರ ಸಲಹೆಗನುಗುಣವಾಗಿ ಅಭ್ಯರ್ಥಿಯು ಗೆದ್ದುಬಿಟ್ಟರಂತೂ ಜೋತಿಷಿಗಳಿಗೆ ಶುಕ್ರದೆಸೆ. ಧಾರಾಳವಾದ ಕೊಡುಗೆಗಳು. ಹೀಗಾಗಿ ಇಂತಹ ಜೋತಿಷಿಗಳು ಆರ್ಥಿಕವಾಗಿ ಮುಂದುವರೆದವರಾಗಿದ್ದು ಅನೇಕರು ಕಾರುಗಳನ್ನು ಬಳಸುತ್ತಾರೆ. ಸುಸಜ್ಜಿತವಾದ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ.

ಬಹುಪಾಲು ಜೋತಿಷಿಗಳು ಇನ್ನೂ ಬುಡುಬುಡಿಕೆಯವರ ಹಾಗೇ ಅಲೆಮಾರಿ ಗಳಾಗಿಯೇ ಬದುಕನ್ನು ಕಳೆಯುತ್ತಿರುವುದರಿಂದ ಸ್ವಂತ ಮನೆಯನ್ನು ಹೊಂದಿರದೇ ಗುಡಿಸಲುಗಳಲ್ಲಿಯೇ, ಬರುವ ದಿನದ ಆದಾಯದಲ್ಲಿ ಜೀವನ ನಿರ್ವಹಣೆ ಮಾಡಬೇಕು. ಅಲೆಮಾರಿತನದಿಂದ ಮಕ್ಕಳು ಸಹ ಶಿಕ್ಷಣದಿಂದ ವಂಚಿತರಾಗುತ್ತಿದ್ದಾರೆ. ಕರ್ನಾಟಕ ಬಹುಪಾಲು ಜಿಲ್ಲೆಗಳಲ್ಲಿ ಈ ವೃತ್ತಿಯಲ್ಲಿ ತೊಡಗಿರುವವರು ಹಾಗೂ ದೊಡ್ಡ ದೊಡ್ಡ ನಗರಗಳ ಲಾಡ್ಜಿಂಗ್‌ಗಳಲ್ಲಿ ಭವಿಷ್ಯ ಹೇಳುವ ಜೋತಿಷಿಗಳು ಬಾಗಲಕೋಟ ಜಿಲ್ಲೆಯ ಕೋಡಿಹಾಳ ಗ್ರಾಮದವರೇ ಹೆಚ್ಚಾಗಿದ್ದಾರೆಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನ್ನ ಗಮನಕ್ಕೆ ಬಂದಿದೆ.

### ೮. ಗಿಳಿಶಾಸ್ತ್ರದವರು

ಜಗತ್ತಿನಾದ್ಯಂತ ಪ್ರಾಣಿ-ಪಕ್ಷಿಗಳ ಮೂಲಕ ಭವಿಷ್ಯ ಹೇಳುವ, ತಿಳಿದುಕೊಳ್ಳುವ ಪರಂಪರೆ ಇರುವುದನ್ನು ಕಾಣುತ್ತೇವೆ. ಹಾಗೆಯೇ ಗೊಂದಲಿಗ ಸಮುದಾಯದಲ್ಲಿಯ ಅನೇಕರು ಗಿಳಿಯ ಮೂಲಕ ಶಕುನ ಹೇಳುವ ವೃತ್ತಿ ಮಾಡಿಕೊಂಡಿದ್ದು, ಅವರನ್ನು ಗಿಳಿಶಾಸ್ತ್ರದವರು ಎಂದೇ ಕರೆಯಲಾಗುತ್ತದೆ. ವಿವಿಧ ಪಕ್ಷಿ, ಪ್ರಾಣಿಗಳ ಮೂಲಕ ಭವಿಷ್ಯ ಹೇಳುವ ವೃತ್ತಿಯನ್ನು ಕೈಗೊಂಡಿರುವ ಗೊಂದಲಿಗರು ವಿಶಿಷ್ಟವಾಗಿ ಕಂಡುಬರುತ್ತದೆ.

ಗಿಳಿಶಾಸ್ತ್ರದವರು ಪರಂಪರಾನುಗತ ವೇಷಭೂಷಣ ಹಾಕಿಕೊಂಡಿರುತ್ತಾರೆ. ಬುಡುಬುಡುಕೆ ಯವರ ಹತ್ತಿರವಿರುವ ನೀಲಿ ಹೊತ್ತಿಗೆಯಲ್ಲಿರುವ ವಿಷಯ ಮತ್ತು ಚಿತ್ರಗಳನ್ನು ಇವರು ಸಣ್ಣ ಸಣ್ಣ ಕವರುಗಳಲ್ಲಿ ಹಾಕಿ ಅವುಗಳನ್ನು ಮುಂದಿಟ್ಟುಕೊಂಡಿರುತ್ತಾರೆ. ಪೆಟ್ಟಿಗೆಯಲ್ಲಿ ಒಂದು ಅಥವಾ ಎರಡು ಗಿಳಿಗಳನ್ನು ಸಾಕಿರುವ ಇವರು ಜನದಟ್ಟಣೆ ಇರುವ ಪ್ರದೇಶಗಳಲ್ಲಿ, ಸಂತೆ/ಮಾರ್ಕೆಟ್ ಇರುವ ದಿವಸಗಳಲ್ಲಿ ರಸ್ತೆಯ ಬದಿಯಲ್ಲಿ ಚಿಕ್ಕದಾದ ಬಟ್ಟೆಯನ್ನು ಹಾಸಿ ಗಿಳಿ ಮತ್ತು ಕವರುಗಳೊಂದಿಗೆ

ಕುಳಿತು ಕೊಂಡಿರುತ್ತಾರೆ. (ಸಾಮಾನ್ಯವಾಗಿ ಗಿಳಿಶಾಸ್ತ್ರದವರು ಜಿಲ್ಲಾ ಹಾಗೂ ತಾಲೂಕು ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಬಾದಾಮಿಯ ಸೋಮವಾರ ಸಂತೆಯಲ್ಲಿ, ಮಂಗಳವಾರ ಕೆರೂರ ಸಂತೆಯಲ್ಲಿ ಕಾಣಸಿಗುತ್ತಾರೆ.) ಇಂಥಹವರ ಹತ್ತಿರ ಭವಿಷ್ಯವನ್ನು ಕೇಳಲು ಹೋದರೆ ಮೊದಲು ದಕ್ಷಿಣೆಯನ್ನು ಇಟ್ಟು ನಮ್ಮ ಹೆಸರು ಹೇಳಿ ಅವನ ಮುಂದೆ ಕುಳಿತುಕೊಳ್ಳಬೇಕು. ಆಗ ಈ ಶಾಸ್ತ್ರದವನು 'ಪ್ರೀಯ ಗಿಣಿಯೇ ಪಂಜರದಿಂದ ಹೊರಬಂದು ಸಾಹೇಬರಿಗಾಗಿ ಒಂದು ಕಾರ್ಡು ತೆಗೆದುಕೊಡು' ಎಂದು ಹೇಳುತ್ತಾ ಪಂಜರದಿಂದ ಗಿಳಿಯನ್ನು ಹೊರಬಿಡುತ್ತಾನೆ. ಆ ಗಿಳಿಯು ಒಂದು ಕಾರ್ಡು ತೆಗೆದು ಕೆಳಗಿಡುತ್ತದೆ. ಹೀಗೆ ಎರಡನೆಯ, ಮೂರನೆಯ ಕಾರ್ಡನ್ನು ತೆಗೆದಿಡುತ್ತದೆ. ಆಮೇಲೆ ಭವಿಷ್ಯವನ್ನು ತೆರೆದಿಡುವ ನಾಲ್ಕನೆ ಕಾರ್ಡು ಬರುತ್ತದೆ. ಈ ಕಾರ್ಡನ್ನು ಗಿಳಿಯು ತನ್ನ ಮಾಲೀಕನ ಕೈಗಿಟ್ಟು ನಿಧಾನವಾಗಿ ಪಂಜರದೊಳಗೆ ಹೋಗುತ್ತದೆ. ಆಗ ಗಿಳಿಶಾಸ್ತ್ರಜ್ಞನು ಆ ಕಾರ್ಡಿನಲ್ಲಿ ಏನಿದೆ ಎಂಬುದನ್ನು ಪ್ರಚುರಪಡಿಸಿ, ಏನಾದರೂ ದೋಷಗಳು ಇದ್ದರೆ ಅದಕ್ಕೆ ಪರಿಹಾರವನ್ನು ಸೂಚಿಸುತ್ತಾನೆ. ಈ ರೀತಿ ಹೇಳುವ ಭವಿಷ್ಯವನ್ನು ತಮ್ಮ ಗುರುಗಳಿಂದ ಕಲಿತು ಕೊಂಡಿರುತ್ತಾರಲ್ಲದೇ ವ್ಯಕ್ತಿಯ ಹೆಸರು ನಕ್ಷತ್ರ, ರಾಶಿ, ಮತ್ತಿತರ ಮಾಹಿತಿಗಳ ಆಧಾರದ ಮೇಲೆ ಒಬ್ಬ ವ್ಯಕ್ತಿಯ ಭವಿಷ್ಯವನ್ನು ಹೇಳುತ್ತಾರೆ.

ಗಿಳಿ ಶಾಸ್ತ್ರದವರು ಗ್ರಾಮಾಂತರ ಪ್ರದೇಶಗಳಿಂದ ಗಿಳಿಗಳನ್ನು ಹಿಡಿದುಕೊಂಡು ಬಂದು ಅದನ್ನು ಚೆನ್ನಾಗಿ ನೋಡಿಕೊಂಡು ಮೂರು ತಿಂಗಳುಗಳವರೆಗೆ ತರಬೇತಿಯನ್ನು ನೀಡಿ ಗುರುಗಳಿಂದ ಅನುಗ್ರಹ ಪಡೆದುಕೊಳ್ಳುತ್ತಾರೆ. ಜ್ಯೋತಿಷ್ಯ ಹೇಳಲು ಗಿಳಿಯನ್ನೇ ಬಳಸಿಕೊಳ್ಳುವುದಕ್ಕೆ ಅವರು ನೀಡುವ ಉತ್ತರ- "ಇಲಿಗಳನ್ನು, ಇತರ ಪ್ರಾಣಿ, ಪಕ್ಷಿಗಳನ್ನು ಭವಿಷ್ಯ ಹೇಳಲು ಬಳಸಿಕೊಳ್ಳುತ್ತಾರೆ. ಆದರೆ ನಾವು ಗಿಳಿಗಳನ್ನು ಬಳಸಿಕೊಳ್ಳುತ್ತೇವೆ. ಗಿಳಿಗಳು ಶುಭಕರವೆಂದು, ಶ್ರೀರಾಮನ ಶ್ರೇಷ್ಠ ಭಕ್ತನಾಗಿದ್ದು ಅವುಗಳಿಗೆ ವಿಶೇಷ ತಪಃಶಕ್ತಿ ಇದೆ. ಆ ಭಗವಂತನ ಧ್ಯಾನದಿಂದ ಅವು ಶಕ್ತಿ ಪಡೆದಿವೆ. ಮಾನವರಂತೆ ಭೇದ-ಭಾವವನ್ನು ಅರಿಯದ ಈ ಪಕ್ಷಿಗಳ ಆಯ್ಕೆ ಪರಿಪೂರ್ಣವಾಗಿದ್ದು, ಅವು ಆಯ್ದುಕೊಡುವ ಕಾರ್ಡಿನ ಆಧಾರದ ಮೇಲೆ ಭವಿಷ್ಯ ಹೇಳುತ್ತೇವೆ. ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಸಾಮಾನ್ಯವಾಗಿ ಗೊಂದಲಿಗರಲ್ಲಿಯ ಈ ಗಿಳಿಶಾಸ್ತ್ರದವರು ಬಾದಾಮಿ, ಕೆರೊರು, ಕುಷ್ಟಗಿ, ಕೊಪ್ಪಳ, ಮಸ್ಕಿ, ಪ್ರದೇಶದಲ್ಲಿ ಕಂಡುಬರುತ್ತಿದ್ದು, ಕರ್ನಾಟಕದ ವಿವಿಧ ಭಾಗಗಳಲ್ಲಿ ಹರಡಿಕೊಂಡಿದ್ದಾರೆ. ಅಲೆಮಾರಿಗಳಾಗಿಯೇ ಇನ್ನೂ ಬದುಕನ್ನು ಕಳೆಯುತ್ತಿರುವ ಈ ಗಿಳಿಶಾಸ್ತ್ರದವರು ದಿನಕ್ಕೆ ೧೦೦ ರೂ.ಗಳವರೆಗೆ ಗಳಿಸುತ್ತಾರೆ. ಇಲ್ಲವೇ ಒಂದೊಂದು ದಿನ ಯಾವುದೇ ಆದಾಯವಿಲ್ಲದೆ ಮುಖ ಒಣಗಿಸಿಕೊಂಡು ತಿರುಗಿ ಹಾಗೇ ತಮ್ಮ ಗುಡಿಸಲು ಕಡೆಗೆ ಬರುವುದುಂಟು. ಅವರಿಗೆ ಇದು ಹೊಸದೇನಲ್ಲ. ಅಷ್ಟಕಷ್ಟೆ ಆದಾಯವನ್ನು ತಂದುಕೊಡುವ ಈ ವೃತ್ತಿಯ ಕುರಿತು 'ಇದು ನಮ್ಮ ವಂಶಪಾರಂಪರ್ಯ ವೃತ್ತಿ' ಎಂದು ಅನುಸರಿಸಿಕೊಂಡು ಬರುವವರು ಇದ್ದಾರೆ. ಇನ್ನು ಕೆಲವರು ಈ ವೃತ್ತಿಯಿಂದ ಜೀವನೋಪಾಯ ಸಾಧ್ಯವಾಗುತ್ತಿಲ್ಲ. ಬದುಕಲು ಸಾಧ್ಯವಾಗುತ್ತಿಲ್ಲ. ನಮಗೆ ಗೌರವ ಇಲ್ಲ, ಅಂದಮೇಲೆ ಈ ವೃತ್ತಿಯನ್ನು ಬಿಡುವುದು ತಪ್ಪಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

### ೫.೧.೨. ಗೊಂದಲಿಗ ಮಹಿಳೆಯರ ವೃತ್ತಿಗಳು

ಜೈವಿಕ ಆಧಾರದ ಮೇಲೆ ಅಥವಾ ಲಿಂಗಭೇಧದ ಆಧಾರದ ಮೇಲೆ ಬೆಳೆದು ಬಂದ ಸ್ತ್ರೀ-ಪುರುಷ ಎನ್ನುವ ಭೇಧವು ಪ್ರತಿಯೊಂದು ಸಮಾಜದಲ್ಲಿ ಸಾಕಷ್ಟು ವ್ಯತ್ಯಾಸಗಳಿಗೆ ಎಡೆಮಾಡಿಕೊಟ್ಟಿದೆ. ಸ್ತ್ರೀ-ಪುರುಷ ಪಾತ್ರಗಳು, ಕರ್ತವ್ಯಗಳು, ಹೊಣೆಗಾರಿಕೆಗಳು, ಅಂತಸ್ತುಗಳ ಹಿನ್ನೆಲೆಯಲ್ಲಿ ಕಂಡುಬಂದ ತಾರತಮ್ಯಗಳು ಪ್ರತ್ಯೇಕತೆಯ ಜೀವನ ವಿಧಾನದ ಮೇಲೂ ಪ್ರಭಾವ ಬೀರಿದೆ. ಪರಿಣಾಮ ಜಗತ್ತಿನ ಪ್ರತಿಯೊಂದು ಸಮುದಾಯಗಳನ್ನು ಸ್ತ್ರೀಯರನ್ನು ಅಸಮಾನತೆಯಿಂದ ಕಾಣುವ, ಶೋಷಣೆಗೆ ಒಳಪಡಿಸುವ ವ್ಯವಸ್ಥೆ ಬಂದಿರುವಂತಹದು.

'ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾಃ' ಎನ್ನುವ ಉಕ್ತಿಯ ಹಿನ್ನೆಲೆಯಲ್ಲಿ ಬೆಳೆದುಬಂದ ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ, ಇನ್ನೊಂದೆಡೆಗೆ 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂಬುದನ್ನು ಪೋಷಿಸಿಕೊಂಡು ಬಂದಿರುವುದು ವಿಪರ್ಯಾಸವೇ ಸರಿ. ಪರಿಣಾಮ ಸ್ತ್ರೀ-ಪುರುಷರ ಅಧೀನಳಾಗಿ, ಭೋಗದ ವಸ್ತುವಾಗಿ, ಅಡುಗೆ ಮನೆಯ ಸೀಮಿತ ಪರಿಧಿಯಲ್ಲಿ ಬದುಕನ್ನು ಕಳೆಯುತ್ತಾ ಬಂದಿರುವ ಸನ್ನಿವೇಶವನ್ನು ಗುರುತಿಸುತ್ತೇವೆ. ಇದಕ್ಕೆ ವ್ಯತಿರಿಕ್ತವಾಗಿ ಇದೇ ಭಾರತೀಯ ಸಂಸ್ಕೃತಿಯಲ್ಲಿ ಮಾತೃದೇವತಾರಾಧನೆಯನ್ನು ಮಾಡುತ್ತಾ ಸ್ತ್ರೀಯರ ಬಗ್ಗೆ ಸಮಾನತೆಯ ಪರಿಕಲ್ಪನೆಯ ದೃಷ್ಟಿಯನ್ನು ಬೆಳೆಸಿಕೊಂಡು ಬಂದ ಅನೇಕ ಬುಡಕಟ್ಟು, ಅಲೆಮಾರಿ ಸಮುದಾಯಗಳನ್ನು ಕಾಣುತ್ತೇವೆ.

ಗೊಂದಲಿಗರ ಸ್ತ್ರೀಯರ ಬಗ್ಗೆ ಅಷ್ಟು ಕನಿಷ್ಠ ಮಟ್ಟದ ವಿಚಾರಗಳು ಬೆಳೆದು ಬಂದಿರುವುದನ್ನು ಕಾಣಲಾರೆವು, ಬದಲಾಗಿ ಸಮಾನ ಸ್ಥಾನಮಾನದ ಅಡಿಯಲ್ಲಿ ಸಮಾನ ಪಾಲುಗಾರಳಾಗಿ ಕೌಟುಂಬಿಕ, ವ್ಯವಹಾರಿಕ ಕಾರ್ಯಗಳನ್ನು ನಿರ್ವಹಿಸುತ್ತಾ ಬಂದಿದ್ದಾಳೆ. ಸಮುದಾಯದಲ್ಲಿಯ ಪುರುಷರು ಕುಲಕಸುಬನ್ನು ನಿರ್ವಹಿಸಲು ಬೇರೆ ಬೇರೆ ಊರುಗಳಿಗೆ ಅಲೆದಾಡುತ್ತಿದ್ದರೆ, ಮನೆಯಲ್ಲಿರುವ ಮಹಿಳೆಯರು ಕುಟುಂಬದ ಹಿರಿಯರನ್ನು ಆರೈಕೆ, ಪೋಷಣೆ ಮಾಡುವುದು, ಅಡುಗೆ ಮಾಡುವುದು, ಮಕ್ಕಳು, ಇರುವ ಸಾಕುಪ್ರಾಣಿಗಳನ್ನು ಸಂರಕ್ಷಣೆ ಮಾಡುವುದರ ಜೊತೆಗೆ ಇನ್ನುಳಿದ ಅವಧಿಯಲ್ಲಿ ಆರ್ಥಿಕ ಸಂಪನ್ಮೂಲದ ಕ್ರೋಢೀಕರಣಕ್ಕಾಗಿ ದುಡಿಯುತ್ತಿರುವುದು ಸರ್ವೇಸಾಮಾನ್ಯವಾಗಿದೆ. ಕುಟುಂಬದ ನಿರ್ವಹಣೆಯ ಪಾಲುದಾರಳಾಗಿರುವ ಮಹಿಳೆಯು ಬಿಡುವಿನ ವೇಳೆಯಲ್ಲಿ ಸ್ವಲ್ಪ ಮಟ್ಟಿಗಾದರೂ ಆದಾಯವನ್ನು ತರಬಲ್ಲ ವೃತ್ತಿಗಳನ್ನು ಅನುಸರಿಸುತ್ತಾ ಬಂದಿದ್ದಾಳೆ. ಅದರಲ್ಲಿ ಪ್ರಮುಖವಾಗಿ ಗೊಂದಲಿಗರ ಮಹಿಳೆಯರು ವಂಶ ಪಾರಂಪರ್ಯವಾಗಿ ಅನುಸರಿಸುತ್ತಾ ಬಂದಿರುವುದು. ಕೌದಿ ಹೊಲಿಯುವುದನ್ನು ಹಾಗೂ ಅದನ್ನು ಮಾರಾಟ ಮಾಡುವುದಾಗಿದೆ.

#### ಕೌದಿ ಹೊಲೆಯುವುದು

ಗೊಂದಲಿಗರ ಮಹಿಳೆಯರ ಪ್ರಧಾನ ವೃತ್ತಿ ಮತ್ತು ಕುಲಕಸಬು ಕೌದಿ ಹೊಲೆಯುವುದಾಗಿದೆ. ಗೊಂದಲಿಗರು ತಮ್ಮ ಪಾರಂಪರಿಕ ವೃತ್ತಿಯಾಗಿರುವ ಬುಡಬುಡಿಕೆ, ಗೊಂದಲ, ಶಾಸ್ತ್ರ-ಶಕುನ

ಹೇಳುವುದು. ಕಾಯಕ ನಿರ್ವಹಣೆಗಾಗಿ ಅಲೆದಾಡುತ್ತಿರುವಾಗ ಮಹಿಳೆಯರು ಸಹ ತಮ್ಮ ಗಂಡಂದಿರ ಜೊತೆಗೆ ಹೋಗುವುದು ಸಹಜ. ಊರ ಹೊರಗಿನ ಬಯಲು ಜಾಗದಲ್ಲಿ ಗುಡಿಸಲು ಹಾಕಿಕೊಂಡು ಜೀವನ ಕಳೆಯುವ ಗೊಂದಲಿಗರು, ಪುರುಷರು ತಮ್ಮ ವೃತ್ತಿಯ ನಿರ್ವಹಣೆಗಾಗಿ ಮನೆ-ಮನೆ ತಿರುಗುತ್ತಿದ್ದರೆ ಮಹಿಳೆಯರು ಅಡಿಗೆ-ಮಕ್ಕಳ ಆರೈಕೆಯಾದ ನಂತರ ಕೌದಿ ಹೊಲೆಯುವ ಕಾರ್ಯದಲ್ಲಿ ನಿರತರಾಗುವುದು ಸರ್ವೇಸಾಮಾನ್ಯವಾಗಿದೆ. ತಾವು ವಾಸಿಸುತ್ತಿರುವ ಅಥವಾ ಬಿಡಾರ ಹೂಡಿರುವ ಗ್ರಾಮಗಳಲ್ಲಿಯ ಮನೆ-ಮನೆಗಳಿಗೆ ಹೋಗಿ ಕೌದಿ ಹೊಲಿಸುವುದರ ಬಗ್ಗೆ ವಿಚಾರಿಸಿ ಅವರು ಇಷ್ಟ ಪಟ್ಟರೆ, ಅವರಿಂದ ಹಳೆಸೀರೆ, ಪಂಚೆ, ಉಟ್ಟು-ಬಿಟ್ಟ ಅರಿವೆಗಳನ್ನು ಸಂಗ್ರಹಿಸಿ ಕೌದಿ ಹೊಲೆದು ಕೊಡುತ್ತಾರೆ. ಅದಕ್ಕೆ ಕನಿಷ್ಠ ೧೦೦ ರೂ.ವರೆಗೆ ಕೂಲಿ ಪಡೆಯುತ್ತಾರೆ. ಕೆಲವು ಮಹಿಳೆಯರು ತಮ್ಮ ಗಂಡಂದಿರ ಜೊತೆಗೆ ಹೋಗದೇ ನೆಲೆ ಕಂಡುಕೊಂಡ ಊರಿನ ತಮ್ಮ ಗುಡಿಸಲು ಅಥವಾ ಮನೆಯ ಮುಂದಿನ ಕಟ್ಟೆಯ ಮೇಲೆ ಅಥವಾ ಓಣಿಯಲ್ಲಿಯ ಬೇವಿನಕಟ್ಟೆಯಂಥ ವಿಸ್ತಾರ ಪ್ರದೇಶದಲ್ಲಿ ಹಲವಾರು ಸ್ತ್ರೀಯರು ಕಟ್ಟೆಪುರಾಣ ಹೇಳುತ್ತಾ ಕೌದಿ ಹೊಲೆಯುತ್ತಿರುವುದನ್ನು ಕಾಣುತ್ತೇವೆ.

ಗೊಂದಲಿಗ ಮಹಿಳೆಯರು ನಿರ್ವಹಿಸುತ್ತಿರುವ ಕೌದಿ ಹೊಲೆಯುವ ಕೆಲಸವನ್ನು ನೆಲೆ ನಿಂತಿರುವ ಪ್ರತಿಯೊಂದು ಊರು-ಗ್ರಾಮಗಳಲ್ಲಿ ಮಧ್ಯಾಹ್ನ ಮತ್ತು ಸಾಯಂಕಾಲದ ಅವಧಿಯಲ್ಲಿ ನಿರ್ವಹಿಸು ತ್ತಿರುವದನ್ನು ಕಾಣಬಹುದಾಗಿದೆ. ಪ್ರಸ್ತುತ ಕ್ಷೇತ್ರಕಾರ್ಯದಲ್ಲಿ ಒಟ್ಟು ವೃತ್ತಿಯಲ್ಲಿರುವ ಮಹಿಳೆಯರಲ್ಲಿ ೪೧೩ ಮಹಿಳೆಯರು ಇಂತಹ ಕೌದಿ ಹೊಲೆಯುವ ವೃತ್ತಿಯಲ್ಲಿ ತೊಡಗಿದ್ದು, ಶೇ. ೧೩ರಷ್ಟು ಕಾಣಸಿಗುತ್ತಾರೆ. ಕೌದಿ ಹೊಲೆಯುವುದಕ್ಕೆ ಸಂಬಂಧಪಟ್ಟಂತೆ ಗೊಂದಲಿಗ ಮಹಿಳೆಯರು ಹೇಳುವು ದೇನೆಂದರೆ 'ತಮ್ಮ ಹಿರಿಯರ ಮೇಲೆ ಅಪಾರ ಗೌರವ, ಭಕ್ತಿ ಇಟ್ಟುಕೊಂಡಿದ್ದೇವೆ. ಹಿರಿಯರು ಬಿಟ್ಟು ಹೋದ ಅವರ ಹಳೆಯ ಬಟ್ಟೆಗಳು ಸದಾ ನಮ್ಮ ಮೈಮೇಲೆ ಇರಲಿ, ಅವರ ಆಶೀರ್ವಾದ ಈ ಮೂಲಕ ತಮಗೂ ತಮ್ಮ ಮುಂದಿನವರಿಗೂ ದೊರಕಲಿ' ಎಂಬ ಪರಿಕಲ್ಪನೆ ಅವರದ್ದಾಗಿದೆ.

ಒಂದು ಕಾಲದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಕೌದಿಗೆ ಅತ್ಯಂತ ಬೇಡಿಕೆ ಇತ್ತು. ಹಾಗೆಯೇ ಅದರ ಬಗ್ಗೆ ಅಷ್ಟೇ ಗೌರವದ ಭಾವನೆಯನ್ನು ಬೆಳೆಸಿಕೊಂಡಿದ್ದರು. ಬಳಸಿ ಬಿಟ್ಟ ಬಟ್ಟೆ, ಧೋತರ, ಸೀರೆ, ಮಕ್ಕಳ ಬಟ್ಟೆಗಳನ್ನೇ ಅಳತೆಗೆ ತಕ್ಕಂತೆ ಕತ್ತರಿಸಿ, ಒಂದರ ಮೇಲೊಂದಿರಿಸಿ ಹೊಲಿಯುತ್ತಾ ಟೇಲರಗಳ ಹತ್ತಿರ ಕತ್ತರಿಸಿದ ಹೊಸ ಬಟ್ಟೆಗಳ ತುಂಡು ತೆಗೆದುಕೊಂಡು ಅವುಗಳ ಮೂಲಕ ಕಲಾತ್ಮಕವಾಗಿ ಬಣ್ಣ ಬಣ್ಣದ ಚಿತ್ತಾರದ ಕೌದಿಗಳನ್ನು ತಯಾರಿಸುತ್ತಾರೆ. ಕೌದಿಯನ್ನು ಹೊಲಿಯಲು ದಪ್ಪದಾದ ದಾರ ಮತ್ತು ಸೂಜಿಯನ್ನು ಉಪಯೋಗಿಸುತ್ತಾರೆ. ಇವರು ತಯಾರಿಸುವ ಕೌದಿಗಳು ಒಂದೇ ಸೈಜಿನಲ್ಲಿರುವುದನ್ನು ಕಾಣುವುದಿಲ್ಲ. ಇಡೀ ಕೋಣೆಯನ್ನು ವ್ಯಾಪಿಸಿರುವಷ್ಟು ದೊಡ್ಡದಾದ ಕೌದಿಯಿಂದ ಹಿಡಿದು ಚಿಕ್ಕ ಮಕ್ಕಳಿಗೆ ಅನುಕೂಲವಾಗುವ 'ದುಬಟಿ'ಯನ್ನು ಸಹ ಇವರು ಹೊಲಿದು ಕೊಡುತ್ತಾರೆ. ಸಾಮಾನ್ಯವಾಗಿ ಒಂದು ಕೌದಿಯನ್ನು ಐದಾರು ದಿನಗಳಲ್ಲಿ ಹೊಲಿದು

ಮುಗಿಸುವರು. ಒಂದೊಂದು ಕೌದಿಯನ್ನು ಕನಿಷ್ಠ ನಾಲ್ಕಾರು ವರ್ಷಗಳವರೆಗೆ ಬಳಸಲಾಗುತ್ತದೆ. ಅನಂತರ ಇದರ ಚಿಂದಿಯನ್ನು ಹೊಸ ಕೌದಿಗೆ ಬಳಸುವುದಿಲ್ಲ. ಆದರೆ ನೆಲ ಒರೆಸಲು ಉಪಯೋಗಿಸುತ್ತಿರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಗೊಂದಲಿಗರ ಮಹಿಳೆಯರು ಕೌದಿಹೊಲೆಯುವ ವೃತ್ತಿಯನ್ನು ಕಂಡ ಗ್ರಾಮೀಣ ಜನರು 'ದೋಷಿಗ್ಯಾನ ಹೆಂಡತಿ ಹಾಸಿಗ್ಯಾಗ ಅಂತ' ಎಂಬ ಗಾದೆಮಾತು ಹೇಳಿದ್ದಾರೆ.

ಬಡವರ ಪಾಲಿನ ರತ್ನಗಂಬಳಿ, ಬಡವರ ಬ್ಲ್ಯಾಂಕೆಟ್ ಎಂದೇ ಕರೆಯುವ ಕೌದಿಯು ಬೇಸಿಗೆಯಲ್ಲಿ ತಂಪು ಹಾಗೂ ಚಳಿಯಲ್ಲಿ ಬೆಚ್ಚನೆಯ ಅನುಭವ ನೀಡುತ್ತದೆ. ಹಿಂದಿನಿಂದಲೂ ಕೌದಿ ಹೊಲಿಯುವುದನ್ನೇ ಮೂಲ ಉದ್ಯೋಗ ಮಾಡಿಕೊಂಡ ಸಹಸ್ರಾರು ಮಹಿಳೆಯರ ಬಾಳಿಗೆ ಅದು ಆದಾಯದ ಮೂಲವಾಗಿತ್ತು. 'ಅಜ್ಜಾ ಆರತಲಿ; ಮುತ್ಯಾ ಮುರತಲಿ' ಎನ್ನುವಂತೆ ವಂಶಪಾರಂಪರ್ಯವಾಗಿ ಕೌದಿ ಹೊಲೆಯುವುದನ್ನು ಕುಲಕಸಬು ಎನ್ನುವ ರೀತಿಯಲ್ಲಿ ಮುಂದುವರೆಸಿ ಕೊಂಡು ಬಂದವರು. ಆಧುನಿಕ ಕಾಲದಲ್ಲಿ ನಗರ ಹಾಗೂ ಗ್ರಾಮಾಂತರ ಪ್ರದೇಶದಲ್ಲಿಯ ಯುವಜನಾಂಗ ಕೌದಿಯನ್ನು ತುಚ್ಛವಾಗಿ ಕಾಣುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಬದಲಾಗಿ ಮಾರ್ಕೆಟಗಳಲ್ಲಿ ಧಾರಳವಾಗಿ ಸಿಗುತ್ತಿರುವ ರಗ್ಗು, ಕಂಬಳಿ, ಚಾದರಗಳನ್ನು ಖರೀದಿಸಿ ಅವುಗಳನ್ನೇ ಬಳಸುತ್ತಿದ್ದಾರೆ. ಇತ್ತಿತ್ತಲಾಗಿ ಬಟ್ಟೆಹೊಲೆಯುವ ರಾಟಿಗಳನ್ನು ಕೌದಿ ಹೊಲೆಯಲು ಬಳಸುತ್ತಿರುವುದು ಕಂಡು ಬರುತ್ತಿದ್ದು, ಕೌದಿ ಉದ್ಯೋಗಕ್ಕೆ ದರ್ಜಿಗಳು/ಟೇಲರಗಳು ಕೈಹಾಕಿದ್ದು, ಗೊಂದಲಿಗ ಮಹಿಳೆಯರು ಹೇಳುವ ದರಕ್ಕಿಂತ ಕಡಿಮೆ ದರದಲ್ಲಿ ಹೊಲೆದು ಕೊಡುತ್ತಿದ್ದಾರೆ. ಹೀಗಾಗಿ ಜನರು ಕೈಹೊಲಿಗೆಗಿಂತ ರಾಟಿ ಹೊಲಿಗೆಗೆ ಹೆಚ್ಚು ಆಸಕ್ತರಾಗಿದ್ದರಿಂದ ಗೊಂದಲಿಗರ ಕೌದಿಗಳಿಗೆ ಬೆಲೆ ಇಲ್ಲದಂತಾಗಿದೆ. ಆಧುನಿಕತೆ ಪರಿಸರದಲ್ಲಿ ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಅಲ್ಲಲ್ಲಿ ಈ ಕೌದಿಗಳು ಬಳಕೆಯಲ್ಲಿರುವುದನ್ನು ನೋಡಬಹುದಾಗಿದೆ.

ಸಾಮಾನ್ಯವಾಗಿ ಕೌದಿ ಹೊಲೆಯುವ ಕೆಲಸ ಸುಲಭವಾದುದೇನಲ್ಲ. ಹಳೆಯ ಬಟ್ಟೆಗಳನ್ನು ತಂದು ಅವುಗಳನ್ನು ಸ್ವಚ್ಛಗೊಳಿಸಿ ಕಣ್ಣಲ್ಲಿ ಕಣ್ಣಿಟ್ಟು ಅವುಗಳನ್ನು ಒಂದರ ಮೇಲೆ ಒಂದರಂತೆ ಜೋಡಿಸುವುದು, ಸೂಜಿಯಿಂದ ಹೊಲಿಯುವುದು, ಅದು ಬಗ್ಗಿಕೊಂಡೇ ಕೆಲಸ ನಿರ್ವಹಿಸಬೇಕಾಗುವುದ ರಿಂದ ಗೊಂದಲಿಗ ಮಹಿಳೆಯರು ಅನೇಕ ದೈಹಿಕ–ಆರೋಗ್ಯಕರ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ವಯಸ್ಸಾದ ಮೇಲೆ ಮಹಿಳೆಯರು ಬೆನ್ನು ಡೂಗವಾಗಿ ಕೋಲು ಹಿಡಿದು ಬಗ್ಗಿ ನಡೆಯುವ ಪರಿಸ್ಥಿತಿ ಒಂದೆಡೆಗಾದರೆ, ಸಣ್ಣ ವಯಸ್ಸಿನಲ್ಲಿ ಕಣ್ಣು ಮಂಜಾಗುತ್ತಿರುವುದು, ಹಳೆಯ ಬಟ್ಟೆಗಳ ದೂಳುಗಳಿಂದ ಮಾರಕ ರೋಗಗಳಿಗೆ ಡಸ್ಟ ಅಲರ್ಜಿಗಳಿಗೆ ಒಳಗಾಗುತ್ತಿದ್ದಾರೆ. ಈ ರೀತಿ ಅನಾರೋಗ್ಯಕ್ಕೆ ಒಳಗಾಗುವುದು ಸರ್ವೇಸಾಮಾನ್ಯವಾದರೂ ನಮ್ಮ ಗೊಂದಲಿಗ ಮಹಿಳೆಯರು ಕೌದಿ ಹೊಲೆಯುವದನ್ನು ಮಾತ್ರ ಬಿಟ್ಟಿಲ್ಲ. 'ಬ್ಯಾಸಿಗಿ ಕಾಲದಾಗ ಕೌದಿ ಹೊಲಿಯೋಕೆ ಚಂದ; ಚಳಿಗಾಲದಾಗ ಕೌದಿ ಹೊದಿಯೋಕೆ ಅಂದ' ಎಂದು ಹೇಳುತ್ತಲೇ ಬಣ್ಣ ಬಣ್ಣದ ಚಿತ್ತಾರದ ಕಲಾತ್ಮಕವಾದ ಕೌದಿಗಳನ್ನು ಈಗಲೂ ಹೊಲೆಯುತ್ತಾ ಬಂದಿದ್ದಾರೆ.

೫.೧.೩. ಪಾರಂಪರಿಕ ವೃತ್ತಿಯ ಸ್ಥಿತಿಗತಿಗಳು

ಗೊಂದಲದ ಪೂಜಾರಾಧನೆಯನ್ನು ಮಾಡುತ್ತಾ ದೇವಿಯ ಮಹಿಮೆ-ಪವಾಡಗಳನ್ನು, ಹಾಡು-ಕಥೆಗಳನ್ನು ಹೇಳುತ್ತಾ, ಅದರಿಂದ ಬರುವ ಆದಾಯದಿಂದಲೇ ಉಪಜೀವನ ಕಳೆಯುತ್ತಾ ಬಂದವರು ಗೊಂದಲಿಗರು. ಶಕ್ತಿದೇವಿಯನ್ನು ಕುಲದೈವವನ್ನಾಗಿ ಮಾಡಿಕೊಂಡ ಕುಟುಂಬಗಳಲ್ಲಿ ವಿವಾಹ, ಉಪನಯನ, ಶುಭ ಸಂದರ್ಭಗಳಲ್ಲಿ ಗೊಂದಲ ಪೂಜೆಯನ್ನು ಮಾಡುತ್ತಾ ಗೌರವದ ಸ್ಥಾನದಲ್ಲಿ ಗುರುತಿಸಲ್ಪಟ್ಟವರಾಗಿದ್ದರು. ಬರುಬರುತ್ತಾ ಗೊಂದಲ ಹಾಕುವ ಧಾರ್ಮಿಕ ಪರಂಪರೆಯು ಕಡಿಮೆಯಾಗುತ್ತಾ ಬಂದಂತೆ ಗೊಂದಲಿಗರಲ್ಲಿ ವಿವಿಧ ಪಂಗಡಗಳಾಗಿ ಕವಲೊಡೆದು, ವಿವಿಧ ಕಲಾ ವೃತ್ತಿಗಳನ್ನು ಅನುಸರಿಸುತ್ತಾ, ಅವುಗಳ ಪ್ರದರ್ಶನದ ಮೂಲಕ ಭಿಕ್ಷಾಟನೆ ಮಾಡುತ್ತಾ ಬಂದಿದ್ದಾರೆ.

ಬದಲಾದ ಇಂದಿನ ಸನ್ನಿವೇಶದಲ್ಲಿ ಪರಂಪರಾಗತವಾಗಿ ಅನುಸರಿಸುತ್ತಾ ಬಂದ ಗೊಂದಲಿಗರ ವಿವಿಧ ಕಲಾವೃತ್ತಿಗಳಿಗೆ ಬೆಲೆ ಇಲ್ಲದ ಸ್ಥಿತಿಯಿಂದ ಅತ್ಯಂತ ಶೋಚನೀಯ ಪರಿಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಗೊಂದಲಿಗರು ಅನುಸರಿಸುತ್ತಾ ಬಂದ ವೃತ್ತಿ ಎಂದೂ ಉತ್ಪಾದನಾ ವ್ಯವಸ್ಥೆಯಲ್ಲಿ ಪ್ರಮುಖವಾದ ವರ್ಗ ಎನ್ನುವ ರೀತಿಯಲ್ಲಿ ಗುರುತಿಸಿಕೊಂಡಿರದೇ ಅನುತ್ಪಾದಕ ಗುಂಪಾಗಿಯೇ ಬದುಕನ್ನು ಕಳೆಯುತ್ತಾ ಬಂದಿದ್ದಾರೆ.

"ನೆಲ ಮತ್ತು ನೆಲೆ ಇಲ್ಲದವರು ಒಂದು ಸಮಾಜದ ಮುಖ್ಯ ಸ್ಥಾನದಲ್ಲಿ ಸ್ಥಾಪಿತವಾಗಲು ಸಾಧ್ಯವಾಗುವದಿಲ್ಲ. ಅವರು ಮುಖ್ಯ ಉತ್ಪತ್ತಿಯಲ್ಲಿ ತೊಡಗಲು, ಪಾಲುದಾರರಾಗಲು ಆಗುವುದಿಲ್ಲ. ಅಲೆಮಾರಿ ಜನಾಂಗ ಎಂದೂ ಮುಖ್ಯ ಉತ್ಪತ್ತಿಯಲ್ಲಿ ತೊಡಗಿಲ್ಲ. ಬೇರೆಯವರ ಉತ್ಪತ್ತಿಯ ಉಳಿತಾಯಕ್ಕೆ ಕೈಚಾಚಿದ್ದಾರೆ. ಅವರ ಕೆಲಸ ಎಂದೂ ಪ್ರಧಾನವಾದುದಲ್ಲ; ಪೂರಕ ಕ್ರಿಯೆಗಳಾಗಿವೆ".[೧] ಅಷ್ಟೇ ಅಲ್ಲ, ಯಾರಿಗೆ ನಿರ್ದಿಷ್ಟ ನೆಲ-ನೆಲೆ ಇರುವದಿಲ್ಲವೋ ಅವರಿಗೆ ಸಂಪತ್ತು, ಅಧಿಪತ್ಯ, ಪಾರುಪತ್ಯ, ಭದ್ರತೆ, ಬೆಳವಣಿಗೆ ಸಿಗುವುದಿಲ್ಲ. ಹೀಗಾಗಿ "ಚಲಿಸುವ ಕಲ್ಲಿಗೆ ತೂಕ ಇರುವುದಿಲ್ಲ" Rolling stone gather's nomass ಎನ್ನುವಂತೆ, ಅಲೆಮಾರಿತನದಡಿಯಲ್ಲಿ ಬದುಕನ್ನು ಕಳೆಯುತ್ತಾ, ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಸಾಮುದಾಯಿಕ ಐಡೆಂಟಿಟಿ ಇಲ್ಲದೆ, ಸಮಾಜದಲ್ಲಿ ಪರಾವಲಂಬಿಯಾಗಿ ಭಿಕ್ಷೆಯನ್ನೇ ಉತ್ಪತ್ತಿ ಎಂದುಕೊಂಡು ಬದುಕನ್ನು ಕಳೆಯುತ್ತಾ ಬಂದಿದ್ದಾರೆ. ಭಾರತೀಯ ಸಂಸ್ಕೃತಿಯಲ್ಲಿ ಬ್ರಾಹ್ಮಣರನ್ನು ಬಿಟ್ಟರೆ ಬೇರೆಯವರಿಗೆ ಭಿಕ್ಷೆ ಗೌರವದ ಕೆಲಸ ಅಲ್ಲ, ಪರಿಣಾಮ ಇನ್ನುಳಿದವರನ್ನು ಅತ್ಯಂತ ಹೀನಾಯ ಸ್ಥಿತಿಯಲ್ಲಿ ಕಾಣುತ್ತಾ ಬಂದಿರುವರು.

ಗೊಂದಲಿಗರು ಪಾರಂಪರಿಕ ವೇಷ-ಭೂಷಣಗಳ ಮೂಲಕ ಪ್ರದರ್ಶಿಸಲ್ಪಡುತ್ತಿದ್ದ ಕಲೆ, ಸಾಹಿತ್ಯ ಜನರಲ್ಲಿ ಭಕ್ತಿ-ಭಾವವನ್ನು ತುಂಬುವುದರ ಜೊತೆಗೆ ನೈತಿಕ ಜಾಗೃತಿಯನ್ನುಂಟು ಮಾಡುತ್ತಿತ್ತು. ಗೊಂದಲ ಮೂಲಕ ಅವರು ಹೇಳುವ ದೇವಿ ಹಾಡು-ಕಥೆಗಳು, ಸಾಮಾಜಿಕವಾದ ಕಥೆಗಳು, ಮಧ್ಯ-ಮಧ್ಯದಲ್ಲಿ ನುಸುಳಿ ಬರುತ್ತಿದ್ದ ಹಾಸ್ಯಘಟನೆಗಳು ಜನರಿಗೆ ಒಂದು ರೀತಿಯ ಆಧ್ಯಾತ್ಮಿಕ ಮನರಂಜನೆಯನ್ನು ಒದಗಿಸುತ್ತಿತ್ತು. ಪರಿಣಾಮ ಇಂತಹ ಕಲಾಕಾರರನ್ನು ಗೌರವದಿಂದ ಕಾಣುವ ಸಂಪ್ರದಾಯವು ಬೆಳೆದು ಬಂದಿತ್ತು.

ಈ ಹಿನ್ನೆಲೆಯಲ್ಲಿ ಗೊಂದಲಿಗರು ತಮ್ಮ ಕುಲಕಸುಬುಗಳನ್ನೇ ನೆಚ್ಚಿಕೊಂಡು ಉಪಜೀವನದ ಮಾರ್ಗವನ್ನು ಕಂಡುಕೊಂಡಿದ್ದರು. ಅಂದರೆ ಉಪಜೀವನಕ್ಕೆ ಆಧಾರವಾಗಿದ್ದ ಕುಲಕಸುಬುಗಳ ಕಲೆಯನ್ನು ನಂಬಿಕೊಂಡು ಬದುಕುತ್ತಿದ್ದರು. ಆದರೆ ಆಧುನಿಕತೆಯ ಪ್ರಭಾವದಿಂದ ಜನಪದ ಕಲಾಪ್ರಕಾರಗಳು ಮೂಲೆಗುಂಪಾಗುತ್ತಿವೆ. ಅನಕ್ಷರಸ್ಥರು ತೋರಿಸುವ ಕಲೆಗಳು ಅಲಕ್ಷಕ್ಕೆ ಗುರಿಯಾಗುತ್ತಿವೆ. ನಾಗರಿಕ ಸಮಾಜದಲ್ಲಿ ಜನಪದ ಕಲೆಗಳ ವಿಷಯದಲ್ಲಿ ಅನಾಸಕ್ತಿ ಬೆಳೆಯುತ್ತಿರುವುದರಿಂದ ಅವುಗಳನ್ನು ನಂಬಿಕೊಂಡ ಕಲಾವಿದರ ಪರಿಸ್ಥಿತಿ ಸಮಸ್ಯಾತ್ಮಕವಾಗಿದೆ. ಈ ಪ್ರದರ್ಶಕ ಕಲೆಯನ್ನು ಬಿಟ್ಟು ಬೇರೆ ಜೀವನ ವಿಧಾನವನ್ನು ಅನುಸರಿಸುವ ಅವಕಾಶಗಳಿಲ್ಲದೇ, ಅನುಸರಿಸುತ್ತಾ ಬಂದ ಕಲೆಯ ಹೆಸರಿನಲ್ಲಿ ಜೀವನ ನಡೆಸುವ ಅವಕಾಶಗಳಿಲ್ಲದೇ ಇರುವುದರಿಂದ, ಬದುಕಿನ ಆಧಾರಸ್ತಂಭವೇ ಕುಸಿದ ಮೇಲೆ, ನಿಶ್ಚಿತ ಆದಾಯ ತರುವ ಸಂಪನ್ಮೂಲಗಳ ಕೊರತೆಯಿಂದ ಅಲೆಮಾರಿಗಳಾಗಿರುವ ಗೊಂದಲಿಗರು ಕಂಗಾಲಾಗಿದ್ದಾರೆ.

ಶಕ್ತಿದೇವತೆಗಳ ಹೆಸರಿನಲ್ಲಿ ಗೊಂದಲ ಹಾಕಿ ಬೆಳತನಕ ಗೊಂದಲದ ಹಾಡುಗಳನ್ನು ಹಾಡುತ್ತಾ ಕುಟುಂಬಗಳಲ್ಲಿ ನಡೆಯುವ ವಿವಾಹ, ಉಪನಯನದ ಸಂದರ್ಭದಲ್ಲಿ ಇಂತಹ ಪೂಜೆಯನ್ನು ಮಾಡುತ್ತಾ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಮುಖ ಗೌರವದ ಸ್ಥಾನವನ್ನು ಪಡೆದುಕೊಂಡ ವೃತ್ತಿ ಕಲಾವಿದರಿಗೆ ಇಂದು ಬೆಲೆಯೇ ಇಲ್ಲದಂತಾಗಿದೆ. ಗೊಂದಲ ಹಾಕುವ ಸಂದರ್ಭದಲ್ಲಿ ಸಾಕಷ್ಟು ಗೌರವ-ಆದರಗಳನ್ನು ಪಡೆದುಕೊಳ್ಳುತ್ತಿದ್ದ ಕಲಾವಿದರಿಗೆ ಸಾಮಾಜಿಕ ಸ್ಥಳಗಳಲ್ಲಿ ತೋರಿಸುವ ಗೊಂದಲದ ಆಟಗಳ ಬಗ್ಗೆ ಅನಾದರ-ತಿರಸ್ಕಾರ ಭಾವನೆಯನ್ನು ತೋರಿಸುತ್ತಿರುವ ಸನ್ನಿವೇಶವು ಬೆಳೆದು ಬಂದಿದೆ. ಬೆಳತನಕ ನಡೆಯುತ್ತಿದ ಗೊಂದಲಪೂಜೆ, ಗೊಂದಲದ ಹಾಡುಗಳು ಇಂದು ೩-೪ ಗಂಟೆಗಳಲ್ಲಿ ಮುಗಿಸುತ್ತಿದ್ದಾರೆ. ಸರ್ಕಾರದ ವತಿಯಿಂದ ನಡೆಯುವ ಜಿಲ್ಲಾ ಉತ್ಸವದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಸ್ಥಳೀಯ ಕಲಾವಿದರಿಗೆ ಆದ್ಯತೆಯನ್ನು ಕೊಡಬೇಕು ಎಂಬ ಕಾರಣದಿಂದ ಕಾಟಾಚಾರದಿಂದ ಇಂತಹ ಕಲಾವಿದರಿಗೆ ತಮ್ಮ ಕಲೆಯನ್ನು ಪ್ರದರ್ಶಿಸಲು ೨೦ರಿಂದ ೩೦ ನಿಮಿಷದ ಕಾಲಾವಧಿ ನಿಗದಿಪಡಿಸಿರುವುದು ಕಂಡುಬರುತ್ತದೆ.

ಗೊಂದಲಿಗರ ಕಲಾವಿದರನ್ನು, ಪ್ರತಿಯೊಂದು ಊರುಗಳಲ್ಲಿ ಕರೆಯಿಸಿ, ಅಹ್ವಾನ ನೀಡಿ ಅವರಿಂದ ಕಾರ್ಯಕ್ರಮ ನಡೆಸುವ ಪರಿಪಾಠ ಇಂದು ಕಣ್ಮರೆಯಾಗಿದೆ. ಈ ಕಲಾವಿದರೇ ಸ್ವತಃ ಹಳ್ಳಿಗೆ ಹೋದರೆ ಅಲ್ಲಿ ಅವರಿಗೆ ಕಾರ್ಯಕ್ರಮ ನಡೆಸಲು ಅವಕಾಶವಿಲ್ಲದಿರುವ ಪರಿಸ್ಥಿತಿ ನಿರ್ಮಾಣವಾಗಿದೆ. ಜೀವನೋಪಾಯಕ್ಕಾಗಿ ಪಾರಂಪರಿಕ ವೃತ್ತಿಯನ್ನೇ ನಂಬಿಕೊಂಡ ಅನೇಕ ಕಲಾವಿದರು ಬೀದಿ ಬೀದಿ ತಿರುಗಿ, ಬಸ್‌ಸ್ಟ್ಯಾಂಡಗಳಲ್ಲಿ ನಿಂತು, ರೈಲುಗಳಲ್ಲಿ ಪ್ರಯಾಣಿಸಿ ದೇವಿ ಸ್ತುತಿಗಳನ್ನು ಮಾಡುತ್ತಾ ಭಿಕ್ಷೆ ಬೇಡುತ್ತಿರುವ ಅತ್ಯಂತ ಹೀನಾಯ ಕರುಣಾಜನಕ ಸ್ಥಿತಿ ಕಂಡುಬರುತ್ತದೆ

ತರಂಗ ವಾರಪತ್ರಿಕೆಯಲ್ಲಿ ಬಂದ 'ಬೆಳಗಿದೆ ನೋಡಾ ಬುಡಬುಡಕೆ ಬದುಕು' ಎಂಬ ಲೇಖನವನ್ನು ಓದುತ್ತಿರುವಾಗ ಹುಡುಗನೊಬ್ಬ ಲೇಖನದ ಶೀರ್ಷಿಕೆಯನ್ನು ನೋಡಿ 'ಬೆಳಗಿಲ್ಲ

ನೋಡಾ ಬುಡಬುಡಕೆ ಬದುಕು' ಎಂದು ತಟ್ಟನೆ ಹೇಳಿಬಿಡಬೇಕೇ! ಈ ಮಾತು ಎಷ್ಟು ಅರ್ಥ ಪೂರ್ಣ ಅನಿಸುತ್ತಿದೆಯಲ್ಲಾ. ಪ್ರಸ್ತುತ ಇಂದಿನ ಅವರ ಬದುಕಿನ ಚಿತ್ರಣವನ್ನು ಪ್ರತಿಬಿಂಬಿಸುತ್ತಿದೆ. ರಾತ್ರಿಯಲ್ಲಾ ಪಣಕಟ್ಟಿ, ಹಕ್ಕಿಗಳು ನುಡಿಯುವ ಹಿನ್ನೆಲೆಯಲ್ಲಿ ಶಕುನವನ್ನು ಗ್ರಹಿಸಿ, ಮನೆಮನೆಗೆ ಹೋಗಿ ಅವರ ಭವಿಷ್ಯ ಹೇಳುತ್ತಾ ಜೀವನದಲ್ಲಿ ಆಶಾದಾಯಕ ಭರವಸೆಯನ್ನು ಹುಟ್ಟಿಸುತ್ತಾ ಧೈರ್ಯ-ಸ್ಥೈರ್ಯದಿಂದ ಜೀವನ ಕಳೆಯುವಂತೆ ಮಾರ್ಗದರ್ಶನ ಮಾಡುತ್ತಿದ್ದ ಬುಡಬುಡಕೆಯವನ ಮಾತು ಹಾಗೂ ಭವಿಷ್ಯವನ್ನು, ಕೇಳುವ ಮನೋಸ್ಥಿತಿ ಇಂದು ಗ್ರಾಮ-ನಗರ ಪ್ರದೇಶದ ಯಾವ ಜನರಲ್ಲೂ ಇಲ್ಲ. ಬುಡಬುಡಕೆಯವರನ್ನು ಒಂದು ರೀತಿ ಕೆಳಮಟ್ಟದ ಭಿಕ್ಷುಕರ ರೀತಿಯಲ್ಲಿಯೇ ಗುರುತಿಸುತ್ತಾ, ಮುಂದಕ್ಕೆ ಹೋಗು ಎಂದು ಹೇಳುತ್ತಾ, ಕೆಲವರು ಬಾಗಿಲನ್ನು ಹಾಕಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. 'ಬುಡಬುಡಕೆ ಯವನ ಮಾತು ಬುಡತನಕ ಸುಳ್ಳು' ಎನ್ನುವಂತೆ ಬುಡಬುಡಕೆಯವರು ಹೇಳುವ ಭವಿಷ್ಯದ ಬಗ್ಗೆ ಜನರ ನಂಬಿಕೆಗಳು ಕಡಿಮೆಯಾಗಿದೆಯಲ್ಲದೆ ಅವನು ಹೇಳುವ ಮಾತುಗಳಿಗೆ ಅಪಹಾಸ್ಯ ಮಾಡುತ್ತಿದ್ದಾರೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ನೆಲೆಯನ್ನು ಕಂಡು ಕೊಳ್ಳಲಿಕ್ಕೆ ಆಗದೆ ಬುಡಬುಡಕೆಯವರ ಬದುಕು ಅತಂತ್ರವಾಗಿದೆ.

ಭೂತೇರ ವೃತ್ತಿ, ಸಿಂಗದರವರ ವೃತ್ತಿ, ಎಣ್ಣೆ ಜೋಗಿಗಳ ಸ್ಥಿತಿಯು ಬುಡುಬುಡಕೆಯವರ ಸ್ಥಿತಿಗಿಂತ ಭಿನ್ನವಾಗಿಲ್ಲ ಎಂದೇ ಹೇಳಬೇಕು. ಅನುಸರಿಸುತ್ತಾ ಬಂದ ಪಾರಂಪರಿಕ ವೃತ್ತಿಯಿಂದ ಜೀವನೋಪಾಯ ಸಾಧ್ಯವಿಲ್ಲವೆಂದು ಕಂಡುಕೊಂಡಿರುವ ಇವರು ಮೂಲ ವೃತ್ತಿಯಿಂದಲೇ ಅವರು ವಿಮುಖರಾಗಿ ವಿವಿಧ ವೃತ್ತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಿದ್ದಾರೆ ಹಸ್ತ ಸಾಮುದ್ರಿಕರು, ಅರೆ-ಪಂಚಾಂಗದವರು, ಗಿಳಿಶಾಸ್ತ್ರದವರು ಅಲೆಮಾರಿಗಳಾಗಿಯೇ ತಮ್ಮ ವೃತ್ತಿಯನ್ನು ಅನುಸರಿಸುತ್ತಾ ಬಂದ ಇವರೂ ಸಹ ತಮ್ಮ ಪಾರಂಪರಿಕ ವೃತ್ತಿಗಳಿಂದ ಬದುಕು ಸಾಗಿಸುವುದು ಅಸಾಧ್ಯ ಎಂದು ಕಂಡುಕೊಂಡಿದ್ದಾರೆ. ಈ ವೃತ್ತಿಗಳಿಂದ ಅವರ ಸಾಮಾಜಿಕ ಸ್ಥಾನಮಾನಗಳು ಕಡಿಮೆಯಾಗಿವೆ. ಜನರು ಇವರನ್ನು ತಿರಸ್ಕಾರದಿಂದ ನೋಡುತ್ತಿದ್ದಾರೆ. ಹಾಗೆಯೇ ಆ ವೃತ್ತಿ ನಿರ್ವಹಣೆಯಿಂದ ಬರುವ ಆದಾಯವು ಅಷ್ಟಕಷ್ಟೇ. ಹೀಗಾಗಿ ಇವರ ಜೀವನ ನಿರ್ವಹಣೆಯೂ ಅತ್ಯಂತ ಹೀನಾಯವಾಗಿದೆ.

ಗೊಂದಲಿಗರು ಅನುಸರಿಸುತ್ತಾ ಬಂದ ಈ ಪಾರಂಪರಿಕ ಎಲ್ಲ ವೃತ್ತಿಗಳಿಂದ ಜೀವನ ನಿರ್ವಹಣೆಗೆ ತೊಂದರೆಯಾಗುತ್ತಿದೆ. ಅಲೆಮಾರಿತನದ ಮೂಲಕವೇ ವೃತ್ತಿನಿರ್ವಹಣೆ ಮಾಡಬೇಕಾಗಿರುವುದರಿಂದ ಅವರ ಬದುಕು ದಯನೀಯ ಸ್ಥಿತಿಗೆ ತಲುಪಿದೆ. ಸದಾ ಅಲೆಮಾರಿತನಿಂದಲೇ ಜೀವನೋಪಾಯದ ಅನ್ವೇಷಣೆಯಲ್ಲಿ ಇರಬೇಕಾದ ಸ್ಥಿತಿ ಇವರದಾಗಿದೆ. ನೆಲೆ ಕಂಡುಕೊಂಡವರಿಗೆ ಜೀವನದಲ್ಲಿ ಒಂದು ಯೋಚನೆ, ಒಂದು ಯೋಜನೆ ಇರಲು ಸಾಧ್ಯ. ಅದರೆ ಅಲೆಮಾರಿಗಳ ಬದುಕೇ ಒಂದು ಪ್ರಶ್ನೆಯಾಗಿದ್ದರೆ. ಗೊಂದಲಿಗರು ಇಂದು ಒತ್ತಡದ ಪರಿಸ್ಥಿತಿಯಲ್ಲಿ ಕಾಲ ಕಳೆಯಬೇಕಾದ ಸನ್ನಿವೇಶವನ್ನು ಎದುರಿಸುತ್ತಿದ್ದಾರೆ. ನಗರಗಳ ವಸತಿಗೃಹಗಳಲ್ಲಿ ರೂಮ್ ಮಾಡಿಕೊಂಡು ಜ್ಯೋತಿಷ್ಯ ಹೇಳುವ ಕಲಾವಿದರ ಪರಿಸ್ಥಿತಿ ಸ್ವಲ್ಪ ಉತ್ತಮವಾಗಿದ್ದು ಅವರು ಆರ್ಥಿಕವಾಗಿ ಸಾಮಾಜಿಕವಾಗಿ ಸುಧಾರಣೆ

ಕಂಡುಕೊಂಡಿದ್ದು ಕಂಡುಬರುತ್ತದೆ. ಇಂಥವರು ನಗರಗಳಲ್ಲಿಯೇ ವಾಸಿಸುತ್ತಿದ್ದು ಉತ್ತಮವಾದ ಜೀವನ ನಿರ್ವಹಣೆ ಮಾಡಿಕೊಂಡಿದ್ದಾರೆ. ಇದು ಸಹ ಬೆರಳಣಿಕೆಯಷ್ಟು ಜ್ಯೋತಿಷಿಗಳಿಗೆ ಮಾತ್ರ ಎಂದು ಹೇಳಬೇಕಾಗುತ್ತದೆ.

### ೫.೧.೪. ವರ್ತಮಾನದಲ್ಲಿ ವೃತ್ತಿಗಳು

ಆಧುನಿಕ ಜಗತ್ತಿನಲ್ಲಿ ಗೊಂದಲಿಗರು ಅನುಸರಿಸುತ್ತಾ ಬಂದ ಅನೇಕ ವೃತ್ತಿಗಳು ಕಣ್ಮರೆಯಾಗಿದ್ದು, ಇನ್ನುಳಿದ ಕೆಲವು ವೃತ್ತಿಗಳು ಬೆರಳೆಣಿಕೆಯಷ್ಟು ಪ್ರಮಾಣದಲ್ಲಿ ಅನಿವಾರ್ಯವಾಗಿ ಉಳಿದುಕೊಂಡಿವೆ. ವಂಶಪಾರಂಪರ್ಯ ಕುಲಕಸುಬುಗಳು ಎನ್ನುವ ರೀತಿಯಲ್ಲಿಯೇ ಅಥವಾ ಬೇರೆ ಉದ್ಯೋಗ ಮಾಡಲು ಯಾವುದೇ ರೀತಿಯ ಜ್ಞಾನ–ತಿಳುವಳಿಕೆಯಿಲ್ಲದೇ ಇರುವುದರಿಂದಲೂ, ಅನಿವಾರ್ಯವಾಗಿ ಗೊಂದಲಿಗರು ಕೆಲ ವೃತ್ತಿಗಳನ್ನು ಈಗಲೂ ಅನುಸರಿಸುತ್ತಿರುವುದು ಕಂಡುಬರುವುದು. ಆಧುನಿಕತೆಯ ಪ್ರಭಾವದಿಂದ ಗೊಂದಲಿಗರ ವೃತ್ತಿಗಳು ಪಲ್ಲಟಗಳಾಗಿವೆ ಮತ್ತು ಅವರ ಜೀವನ ಶೈಲಿಯಲ್ಲಿಯೂ ಬದಲಾವಣೆಗಳಾಗಿರುವುದು ಕಂಡುಬರುತ್ತದೆ.

ಪಾರಂಪರಿಕ ವೃತ್ತಿಗಳ ಹಿನ್ನೆಲೆಯಲ್ಲಿಯೇ ಬದುಕನ್ನು ಕಳೆಯುತ್ತಾ ಬಂದ ಗೊಂದಲಿಗರು ಆಧುನಿಕ ಕಾಲದಲ್ಲಿ ತೊಡಗಿರುವ ವೃತ್ತಿಗಳಿಗೆ ಸಂಬಂಧಿಸಿದಂತೆ ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ಮಾದರಿ ನಮೂನೆಗಳ ಸಮೀಕ್ಷೆಗಳಡಿಯಲ್ಲಿ ಕುಟುಂಬಗಳ ಸದಸ್ಯರು ಕೈಗೊಂಡ ವೃತ್ತಿಗಳ ಬಗ್ಗೆ ನೋಡಲಾಗಿ:

**ಕೋಷ್ಟಕ ೫.೧ ಗೊಂದಲಿಗರ ಲಿಂಗವಾರು ಕಸಬುಗಳ ಪ್ರಮಾಣ**

| ಕಸುಬುಗಳು | ಗಂಡು | ಹೆಣ್ಣು | ಒಟ್ಟು |
|---|---|---|---|
| ಕೃಷಿ | ೪೧ | ೧೪ | ೫೫ |
| ಕೃಷಿಕೂಲಿ | ೪೯೩ | ೩೬೦ | ೮೫೩ |
| ಪಾತ್ರೆ ವ್ಯಾಪಾರ | ೧೧೮೭ | ೩೨೦ | ೧೫೦೭ |
| ಜ್ಯೋತಿಷ್ಯ/ಬುಡಬುಡುಕಿ | ೬೬ | ೦ | ೬೬ |
| ಕೌದಿ ಹೊಲೆಯುವುದು | ೦ | ೪೧೫ | ೪೧೫ |
| ಸರ್ಕಾರಿ | ೫೬ | ೫ | ೬೧ |
| ಖಾಸಗಿ | ೪೫ | ೧೦ | ೫೫ |
| ಇತರೆ | ೧೨೦ | ೮೬ | ೨೦೬ |

### ವೃತ್ತಚಿತ್ರ ೫.೧. ಗೊಂದಲಿಗರ ಕಸಬುಗಳ ಶೇಕಡಾವಾರು ಪ್ರಮಾಣ




ಕೋಷ್ಟಕ ೫.೧ ಹಾಗೂ ವೃತ್ತ ಚಿತ್ರ ೫.೧ನ್ನು ಗಮನಿಸಿದಾಗ ಇಂದಿನ ಆಧುನಿಕ ಕಾಲದಲ್ಲಿ ಭಾಂಡೆ ವ್ಯಾಪಾರದಲ್ಲಿ ತೊಡಗಿದ್ದರೆ, ಅದರ ನಂತರ ಕೃಷಿ-ಕೂಲಿಕಾರರಾಗಿ ತಮ್ಮ ಉಪಜೀವನವನ್ನು ಕಳೆಯುತ್ತಿದ್ದಾರೆ. ಅದೇರೀತಿ ದುಡಿಯುವವರ ಹಾಗೂ ಅವಲಂಬಿತರ ಪ್ರಮಾಣವನ್ನು ನೋಡಲಾಗಿ-

### ಲಂಬರೇಖಾ ಚಿತ್ರ ೫.೧ ಕಾಯಕವಲ್ಲದ ಹಾಗೂ ಕಾಯಕರ್ಹ ಗುಂಪುಗಳು



**ಕೋಷ್ಟಕ ೫.೨ ಕಾಯಕ ಅರ್ಹವಲ್ಲದ ಹಾಗೂ ಕಾಯಕರ್ಹ ಗುಂಪುಗಳು ಅಂಕಿ–ಸಂಖ್ಯಾ ಪ್ರಮಾಣ**

| ಕ್ರಸಂ. | ಜಿಲ್ಲೆಗಳು | ಕಾಯಕವಲ್ಲದ ಗುಂಪು | | | ಕಾಯಕರ್ಹ ಗುಂಪು | | | ಆಶ್ರಿತರ ಗುಂಪು | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಬಾಗಲಕೋಟೆ | ೨೮೫ | ೨೩೨ | ೫೧೭ | ೪೦೮ | ೪೦೯ | ೮೧೭ | ೩೭ | ೪೧ | ೭೮ |
| ೨ | ಬೆಳಗಾವಿ | ೧೩೦ | ೮೩ | ೨೧೩ | ೧೯೯ | ೧೮೯ | ೩೮೮ | ೧೦ | ೧೩ | ೨೩ |
| ೩ | ಬಳ್ಳಾರಿ | ೫೮ | ೭೪ | ೧೩೨ | ೯೦ | ೭೭ | ೧೬೭ | ೧೦ | ೩ | ೧೩ |
| ೪ | ಬೀದರ | ೩೩ | ೨೩ | ೫೬ | ೯೬ | ೯೫ | ೧೯೧ | ೧೫ | ೬ | ೨೧ |
| ೫ | ಬಿಜಾಪುರ | ೬೩ | ೩೨ | ೯೫ | ೧೦೯ | ೮೫ | ೧೯೪ | ೭ | ೨ | ೯ |
| ೬ | ದಾವಣಗೆರೆ | ೯೭ | ೯೮ | ೧೯೫ | ೧೬೫ | ೧೪೭ | ೩೧೨ | ೧೧ | ೫ | ೧೬ |
| ೭ | ಧಾರವಾಡ | ೭೩ | ೮೪ | ೧೫೭ | ೧೭೬ | ೧೫೨ | ೩೨೮ | ೭ | ೮ | ೧೫ |
| ೮ | ಗದಗ | ೧೬೨ | ೧೬೬ | ೩೨೮ | ೨೫೪ | ೨೧೮ | ೪೭೨ | ೨೨ | ೧೧ | ೩೩ |
| ೯ | ಗುಲಬರ್ಗಾ | ೨೨೧ | ೨೨೬ | ೪೪೭ | ೩೪೬ | ೩೨೩ | ೬೬೯ | ೨೫ | ೨೪ | ೪೯ |
| ೧೦ | ಹಾವೇರಿ | ೩೩ | ೩೪ | ೬೭ | ೪೧ | ೪೭ | ೮೮ | ೪ | ೫ | ೯ |
| ೧೧ | ಕೊಪ್ಪಳ | ೧೩೫ | ೧೭೮ | ೩೧೩ | ೨೨೭ | ೨೦೦ | ೪೩೭ | ೨೧ | ೨೦ | ೪೧ |
| ೧೨ | ರಾಯಚೂರು | ೭೬ | ೯೧ | ೧೬೭ | ೧೩೨ | ೧೩೬ | ೨೬೮ | ೧೨ | ೧೧ | ೨೩ |
| ೧೩ | ಉತ್ತರಕನ್ನಡ | ೧೩ | ೬ | ೧೯ | ೪೬ | ೪೮ | ೯೪ | ೫ | | ೫ |
| | | ೧೩೭೯ | ೧೩೨೭ | ೨೭೦೬ | ೨೨೮೯ | ೨೧೩೬ | ೪೪೨೫ | ೧೮೬ | ೧೪೯ | ೩೩೫ |

ಈ ಕೋಷ್ಟಕ ೫.೨೮ ಹಾಗೂ ಲಂಬರೇಖಾ ಚಿತ್ರ ೫.೧೮ರಲ್ಲಿ ಗೊಂದಲಿಗ ಕುಟುಂಬದವರಲ್ಲಿ ದುಡಿಯುವ ವರ್ಗ ಶೇ. ೬೦ರಷ್ಟು ಇದ್ದರೆ ಅವಲಂಬಿತರ ಪ್ರಮಾಣ ಶೇ.೪೦ರಷ್ಟು ಇದೆ. ದುಡಿಯುವ ವರ್ಗದಲ್ಲಿ ಬರುವ ಶೇ. ೬೦ರಷ್ಟು ಜನರು ಸಂಪೂರ್ಣ ಉದ್ಯೋಗದಲ್ಲಿ ತೊಡಗಿರುವದನ್ನು ಕಾಣುವದಿಲ್ಲ. ಅಲ್ಲಿಯೂ ನಿರುದ್ಯೋಗ–ಅರೆನಿರುದ್ಯೋಗಿಗಳಿರುವವರು ಕಂಡುಬರುತ್ತಾರೆ. ಪರಿಣಾಮ ಅವಲಂಬಿತರ ಪ್ರಮಾಣವು ಅವರ ಜೀವನ ನಿರ್ವಹಣೆಯ ಮೇಲೆ ಪ್ರಭಾವ ಬೀರಿ ಬಡತನದ ಪರಸ್ಥಿತಿಯಲ್ಲಿ ತೊಳಲಾಡಲು ಕಾರಣವಾಗಿದೆ.

ನಾಗರೀಕತೆಯ ಗಾಳಿ ಬೀಸಿದಂತೆ ಎಂತೆಂಥಹ ಅಲೆಮಾರಿ ಸಮುದಾಯಗಳು ಬದಲಾಗಿರುವಾಗ ನಾವೇಕೆ ಹಿಂದುಳಿಯಬೇಕೆಂಬ ವಿವೇಕ ಮೂಡಿದ ಫಲವಾಗಿ ಹೊಟ್ಟೆ ತುಂಬಿಸಲು ಸಹಾಯಕವಾಗದ ಬುಡಬುಡಿಕೆಯನ್ನು ಮೂಲೆಗೆಸೆದು, ಆ ಉಪಾದಿಯ ಬದಲಾಗಿ ಭವಿಷ್ಯ ಅಥವಾ ಜ್ಯೋತಿಷ್ಯ ಹೇಳುವ ಶಾಸ್ತ್ರಿಗಳಾಗಿ ಬದಲಾಗುತ್ತಿದ್ದಾರೆ. ಬುಡಬುಡಿಕೆಯ ವೃತ್ತಿಯಿಂದ ನಿರ್ದಿಷ್ಟ–ನಿರೀಕ್ಷಿತ ಆದಾಯ ಸಾಧ್ಯವಾಗುತ್ತಿಲ್ಲ ಎಂಬುದು ಅರಿತು ಅವರು ಪರ್ಯಾಯವಾಗಿ ಜ್ಯೋತಿಷ್ಯ ವೃತ್ತಿಯಲ್ಲಿ ಹೆಚ್ಚಿನ ಜ್ಞಾನ, ಪಂಚಾಂಗದ ಅಧ್ಯಯನ ಮಾಡಿ ಆ ಮೂಲಕ ತಾಲೂಕು ಹಾಗೂ ಜಿಲ್ಲಾ ಪ್ರದೇಶ ಗಳಲ್ಲಿ ಜ್ಯೋತಿಷ್ಯದ ಫಲಕಗಳನ್ನು ಹಾಕಿ ಜಾಹೀರಾತುಗಳನ್ನು ನೀಡಿ ಆಮೂಲಕ ಜನರನ್ನು ತಮ್ಮೆಡೆಗೆ ಆಕರ್ಷಿಸಿ ಜ್ಯೋತಿಷ್ಯ ಹೇಳುತ್ತಿದ್ದಾರೆ. ಇಂತಹ ಜ್ಯೋತಿಷ್ಯಿಗಳ ಸ್ಥಿತಿ ಮಾತ್ರ ಉತ್ತಮವಾಗಿದೆ. ಅನೇಕರು ಅನಿವಾರ್ಯವಾಗಿ ತಮ್ಮ ಮೂಲ ವೃತ್ತಿಗಳನ್ನು ಬಿಟ್ಟು, ವರ್ತಮಾನದಲ್ಲಿಯ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಪರಿಣಾಮವಾಗಿ ಇಂದಿನ ಆಧುನಿಕ ಕಾಲದಲ್ಲಿ ಜ್ಯೋತಿಷ್ಯ ಹಾಗೂ ಬುಡಬುಡಕೆ ವೃತ್ತಿಯಲ್ಲಿ ಸಮೀಕ್ಷೆ ಸಂದರ್ಭದಲ್ಲಿ ತೊಡಗಿದವರ ಪ್ರಮಾಣ ಕೇವಲ ಶೇ. ೨ರಷ್ಟು ಮಾತ್ರ, ಇನ್ನುಳಿದವರು ಇತರೆ ವೃತ್ತಿಗಳಲ್ಲಿ ತೊಡುಗುತ್ತಾ ಪಾರಂಪರಿಕ ಈ ವೃತ್ತಿಯನ್ನು ಒಂದು ದೃಷ್ಟಿಯಲ್ಲಿ ಪ್ರವೃತ್ತಿಯಾಗಿ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

ಬಡತನದ ಸ್ಥಿತಿಯಲ್ಲಿರುವ ಗೊಂದಲಿಗರು ಬಂಡವಾಳ ಹೂಡಿ ವ್ಯವಸ್ಥಿತವಾದ ವ್ಯಾಪಾರ ಮಾಡಬೇಕೆಂದರೆ ಅದು ಅವರಿಂದ ಸಾಧ್ಯವಾಗುತ್ತಿಲ್ಲ. ಏಕೆಂದರೆ ವ್ಯಾಪಾರ ಕೈಗೊಳ್ಳಬೇಕಾದರೆ ಬಂಡವಾಳ ಹಾಕಲೇಬೇಕು, ಆರ್ಥಿಕವಾಗಿ ಅತ್ಯಂತ ಹಿಂದುಳಿದ ಇವರು ಹಣಕಾಸಿನ ನೆರವಿಲ್ಲದೆ, ಪರದಾಡುತ್ತಿದ್ದಾರೆ. ಪರಿಣಾಮ ಅನೇಕರು ಕೂಲಿ ಮಾಡಿಯೋ ಭಿಕ್ಷಾಟನೆ ಮಾಡಿಯೋ ಜೀವನ ಕಳೆಯುವವರು ಅಲ್ಲಲ್ಲಿ ಕಂಡುಬರುತ್ತಾರೆ. ಇನ್ನು ಕೆಲವರು ಭಾಂಡೆ(ಪಾತ್ರೆ) ವ್ಯಾಪಾರಸ್ಥರ ಹತ್ತಿರ ಪಾತ್ರೆಗಳನ್ನು ತೆಗೆದುಕೊಂಡು ಊರೂರು ಅಲೆದು ಪಾತ್ರೆ ವ್ಯಾಪಾರ ಮಾಡಿ, ಸಾಯಂಕಾಲ ವ್ಯಾಪಾರಸ್ಥನಿಗೆ ತೆಗೆದುಕೊಂಡ ಭಾಂಡೆಯ ಲೆಕ್ಕವನ್ನು ಕೊಟ್ಟು ಉಳಿದ ಲಾಭವನ್ನು ತಮ್ಮ ಉಪಜೀವನಕ್ಕಾಗಿ ಬಳಸುತ್ತಿದ್ದಾರೆ. ಕೆಲವರು ಈ ವ್ಯಾಪಾರದಿಂದಲೇ ಮುಂದೆ ಬಂದು ಆರ್ಥಿಕವಾಗಿ ಭದ್ರತೆಯನ್ನು ಪಡೆದುಕೊಂಡು ಸ್ವಂತ ಅಂಗಡಿಗಳನ್ನು ಇಟ್ಟುಕೊಂಡು ಭಾಂಡೆ ವ್ಯಾಪಾರ ಮಾಡುತ್ತಿದ್ದಾರೆ. ಜೊತೆಗೆ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಿ ಸರ್ಕಾರಿ ಉದ್ಯೋಗಾವಕಾಶಗಳಿಗೆ ಕಾಯುತ್ತಿದ್ದಾರೆ. ಕೆಲವರು ಸರ್ಕಾರಿ ಉದ್ಯೋಗಗಳಲ್ಲಿ ಕಾರ್ಯನಿರ್ವಹಿಸುತ್ತಿರುವುದು ಕಂಡುಬರುತ್ತದೆ.

### ೫.೧.೪.೧. ಭಾಂಡೆ ವ್ಯಾಪಾರ

ಔದ್ಯೋಗಿಕ ಕ್ರಾಂತಿಯ ಪರಿಣಾಮ ತಂತ್ರಜ್ಞಾನ ಕ್ಷೇತ್ರದಲ್ಲಿ ಸಾಧಿಸಿರುವ ಅಗಾಧವಾದ ಪ್ರಗತಿಯಿಂದ ಉದ್ದಿಮೆ-ಕೈಗಾರಿಕೆಗಳು ತೀವ್ರಗತಿಯಲ್ಲಿ ಬೆಳೆದು ಬಂದಿವೆ. ಈ ಹಿನ್ನೆಲೆಯಲ್ಲಿ ಗೃಹ ಕೈಗಾರಿಕೆಗಳಿಂದ ತಯಾರಾಗುವ ವಸ್ತುಗಳೆಲ್ಲಾ, ಉದ್ದಿಮೆ ಕೈಗಾರಿಕೆಗಳಿಂದ ಉತ್ಪಾದನೆ ಯಾದವು. ಅದರಲ್ಲೂ ವ್ಯಾಪಕವಾಗಿ ಬಳಕೆಯಲ್ಲಿರುವ ಮನೆ ಬಳಕೆಗೆ ಸಂಬಂಧಪಟ್ಟ ವಸ್ತುಗಳ ಉತ್ಪಾದನೆಗೆ ಹೆಚ್ಚು ಒತ್ತು ಕೊಟ್ಟಿದ್ದರಿಂದ ಸ್ಟೀಲ್, ಅಲ್ಯೂಮಿನಿಯಂ, ಪಾತ್ರೆಗಳ ತಯಾರಿಕೆಯು ತೀವ್ರ ಗತಿಯಲ್ಲಿ ಬೆಳೆದುಬಂದಿತು. ಪರಿಣಾಮ ಕುಂಬಾರಿಕೆಯಿಂದ ತಯಾರಾಗುತ್ತಿದ್ದ ಮತ್ತು ಬಳಸುತ್ತಿದ್ದ ಮಣ್ಣಿನ ಪಾತ್ರೆಗಳ ಬದಲಾಗಿ ಮನೆಯ ಅಡಿಗೆ ಮನೆಗಳಲ್ಲಿ ವಿವಿಧ ನಮೂನೆಯ ಸ್ಟೀಲ್, ಅಲ್ಯೂಮಿನಿಯಂ ಪಾತ್ರೆಗಳು ಆಕ್ರಮಿಸಿಕೊಂಡವು. ಸಮಾಜ ಜೀವನದಲ್ಲಿ ಕೌಟುಂಬಿಕ ವಾತಾವರಣದಲ್ಲಿ ಅಗಾಧ ಪ್ರಭಾವ ಬೀರಿದ ಈ ವಸ್ತುಗಳ ಭರಾಟೆಯ ವ್ಯಾಪಾರದ ಸಂದರ್ಭದಲ್ಲಿ ಅಲೆಮಾರಿತನದಡಿಯಲ್ಲಿ ಬದುಕನ್ನು ಕಳೆಯುತ್ತಾ, ಜೀವನೋಪಾಯದ ಸಂಕಷ್ಟವನ್ನು ಎದುರಿಸುತ್ತಿದ್ದ ಗೊಂದಲಿಗರಿಗೆ ಪಾತ್ರೆ ವ್ಯಾಪಾರದಲ್ಲಿ ಕಂಡು ಬರುತ್ತಿದ್ದ ಬೇಡಿಕೆಯ ಹಿನ್ನೆಲೆಯಲ್ಲಿ, ಈ ವೃತ್ತಿಯ ಅವಕಾಶ ಒಂದು ರೀತಿ ವರವಾಗಿ ಪರಿಣಮಿಸಿತು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ವರ್ತಮಾನದಲ್ಲಿ ಗೊಂದಲಿಗರು ಅನುಸರಿಸುತ್ತಿರುವ ಅಥವಾ ತೊಡಗಿರುವ ಪ್ರಮುಖವಾದ ವೃತ್ತಿ ಪಾತ್ರೆ ವ್ಯಾಪಾರವಾಗಿದೆ. ಪ್ರಸ್ತುತ ಕುಟುಂಬಗಳ ಸಮೀಕ್ಷೆಯ ಪ್ರಕಾರ ಶೇ. ೪೬ರಷ್ಟು ಜನರು ಈ ಭಾಂಡೆ ವ್ಯಾಪಾರದಲ್ಲಿ ತೊಡಗಿರುವುದು ಕಾಣುತ್ತೇವೆ. ಸಾಮಾನ್ಯವಾಗಿ ಕುಟುಂಬದಲ್ಲಿಯ ಪುರುಷರು, ಮಹಿಳೆಯರು ಮತ್ತು ಮಕ್ಕಳು ಅಲ್ಯೂಮಿನಿಯಂ ಭಾಂಡೆಗಳನ್ನು ಊರು-ಊರುಗಳಲ್ಲಿಯ ಓಣಿ-ಓಣಿಗಳಲ್ಲಿ, ಹೊತ್ತು ಮಾರುತ್ತಿದ್ದಾರೆ. ಒಂದು ರೀತಿ ಆಧುನಿಕ ಮಾದರಿಯ ಅಡುಗೆಯ ಪಾತ್ರೆಗಳ ವಿವಿಧ ನಮೂನೆಗಳನ್ನು ಪ್ರತಿಯೊಂದು ಗ್ರಾಮಗಳಿಗೆ ಪರಿಚಯಿಸಿದವರೆಂದರೆ ಗೊಂದಲಿಗರೇ ಎಂದು ಧೈರ್ಯದಿಂದ ಹೇಳಬಹುದು. ಗೊಂದಲಿಗರು ಶ್ರಮಜೀವಿಗಳು, ಆತ್ಮ ವಿಶ್ವಾಸಿಗಳು, ಧೈರ್ಯಶಾಲಿಗಳು, ಬಿಕ್ಕಟ್ಟು ಬಂದಾಗ ಅದನ್ನು ಎದುರಿಸುವಂತಹ ಛಲಗಾರರು ಅವರ ಈ ಮನೋಭಾವನೆಗಳೇ ಈ ವೃತ್ತಿಯ ನಿರ್ವಹಣೆಗೆ ಸಹಾಯಕವೂ ಆಗಿದೆ.

ಗೊಂದಲಿಗರು ಈ ಭಾಂಡೆ ವ್ಯಾಪಾರವನ್ನು ಅತ್ಯಂತ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ನಿರ್ವಹಿಸುತ್ತಾ ಬರುತ್ತಿದ್ದಾರೆ. ಗೊಂದಲಿಗರ ಅನೇಕ ಯುವಕರು ದೊಡ್ಡದಾದ ಬಿದಿರಿನ ಬುಟ್ಟಿಗಳಲ್ಲಿ ಪಾತ್ರೆಗಳನ್ನು ಇಟ್ಟುಕೊಂಡು ಕೈಯಲ್ಲಿ ವಿವಿಧ ಗಾತ್ರದ ಅಲ್ಯೂಮಿನಿಯಂ ಪಾತ್ರೆಗಳನ್ನು, ಅಲ್ಯೂಮಿನಿಯಂ ಗುಂಡಿಗಳನ್ನು ತೆಗೆದುಕೊಂಡು ಅಥವಾ ಅವುಗಳನ್ನು ಒಂದು ಗಂಟಿನಲ್ಲಿ ಕಟ್ಟಿ ಬಗಲಲ್ಲಿ ಇಟ್ಟುಕೊಂಡು ಅಕ್ಕಪಕ್ಕದ ಹಳ್ಳಿಗಳ ಪ್ರತಿಯೊಂದು ಮನೆಗಳಿಗೂ ಹೋಗಿ, ಇರುವ ಪಾತ್ರೆಗಳ ಬಗ್ಗೆ ಪರಿಚಯಿಸುತ್ತಾ, ಅವರಲ್ಲಿರುವ ಹಳೆಯ ಪಾತ್ರೆಗಳನ್ನು ಕಡಿಮೆ ದರದಲ್ಲಿ ತೆಗೆದುಕೊಂಡು, ಅದಕ್ಕೆ ಪ್ರತಿಯಾಗಿ ತಮ್ಮಲ್ಲಿರುವ ಹೊಸ ಪಾತ್ರೆಗಳನ್ನು ಯೋಗ್ಯದರದಲ್ಲಿ ಕೊಡುತ್ತಾರೆ. ಅಕ್ಕ-ಪಕ್ಕದ ಊರುಗಳಲ್ಲಿ

ನಡೆಯುವ ಸಂತೆ ಹಾಗೂ ಜಾತ್ರೆಗಳಲ್ಲಿಯೂ ಈ ಪಾತ್ರೆ ವ್ಯಾಪಾರವನ್ನು ಮಾಡುತ್ತಿದ್ದಾರೆ. ತಲೆಯ ಮೇಲೆ ಭಾರವಾಗಿರುವ ಪಾತ್ರೆಗಳನ್ನು ಹೊತ್ತು ಎರಡೂ ಕೈಗಳಲ್ಲಿ ಪಾತ್ರೆಗಳನ್ನು ಹಿಡಿದುಕೊಂಡು ಊರೂರು ಅಲೆಯುತ್ತಾ ಸಂಚಾರಿ ವ್ಯಾಪಾರ ಮಾಡುವುದರಲ್ಲಿ ಗೊಂದಲಿಗರು ಶಕ್ತಿವಂತರು ಮತ್ತು ಅಷ್ಟೇ ವ್ಯವಹಾರಿಕ ಜಾಣ್ಮೆಯನ್ನು ಹೊಂದಿದವರು.

ಮಹಿಳೆಯರು ಸಹ ತಮ್ಮ ಸೊಸೆಯಂದಿರನ್ನು, ಮಕ್ಕಳನ್ನು ಕರೆದುಕೊಂಡು ಈ ವ್ಯಾಪಾರವನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಈ ವ್ಯಾಪಾರದಲ್ಲಿ ತೊಡಗಿರುವವರು ದೊಡ್ಡ ಪ್ರಮಾಣ ದಲ್ಲಿರುವ ಭಾಂಡೆ ವ್ಯಾಪಾರಸ್ಥರಿಂದ ಉದ್ರಿ ತೆಗೆದುಕೊಂಡು, ಅವುಗಳನ್ನು ಮಾರಿ ಅವರ ಉದ್ರಿ ಹಣವನ್ನು ತೀರಿಸಿ, ತಾವು ತೆಗೆದುಕೊಂಡು ಬಂದ ಹಳೆಯ ಪಾತ್ರೆಗಳನ್ನು ಅವರಿಗೆ ಕೊಟ್ಟು, ಮತ್ತೆ ಮಾರಾಟಕ್ಕೆ ಬೇಕಾಗುವ ಹಾಗೂ ಜನರು ಕೇಳಿರುವ ಪಾತ್ರೆಗಳನ್ನು ತೆಗೆದುಕೊಳ್ಳುವರು. ಈ ವ್ಯಾಪಾರ ದಿಂದ ಸರಾಸರಿ ೧೦೦ರಿಂದ ೧೫೦ ರೂ.ಗಳವರೆಗೆ ಲಾಭ ಬರುತ್ತದೆ.

ಪಾತ್ರೆ ವ್ಯಾಪಾರದಿಂದ ಗೊಂದಲಿಗರ ಅನೇಕ ಕುಟುಂಬಗಳು ಆರ್ಥಿಕವಾಗಿ ಸಬಲರಾಗಿದ್ದು, ಅವರಲ್ಲಿ ಕೆಲವರು ದೊಡ್ಡ ಪ್ರಮಾಣದಲ್ಲಿ ಭಾಂಡೆ ವ್ಯಾಪಾರ ಮಾಡುತ್ತಿದ್ದಾರೆ. ಕೆಲ ಗೊಂದಲಿಗರ ಕುಟುಂಬಗಳು ಲಕ್ಷಾಧೀಶರೂ ಆಗಿದ್ದಾರೆ. ಸ್ಥಿತಿವಂತ ಪಾತ್ರೆ ವ್ಯಾಪಾರಸ್ಥರು ಅನೇಕ ಗೊಂದಲಿಗರ ಯುವಕರಿಗೆ ಪಾತ್ರೆ ಸಾಮಾನುಗಳನ್ನು ಕೊಟ್ಟು ಮಾರಾಟ ಮಾಡಿಸುತ್ತಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಪ್ರತಿಯೊಂದು ಊರುಗಳಲ್ಲಿ, ನಗರಗಳಲ್ಲಿ ಭಾಂಡೆ ಅಂಗಡಿಗಳು ಕಂಡುಬಂದರೆ ಅದು ಗೊಂದಲಿಗರದ್ದೇ ಎಂದು ನಿಶ್ಚಯವಾಗಿ ಹೇಳಬಹುದಾಗಿದೆ. ಗೊಂದಲಿಗರಿಗೆ ಈ ಭಾಂಡೆ ವ್ಯಾಪಾರವು ಒಲಿದಷ್ಟು ಇನ್ನಾವ ಸಮುದಾಯಗಳಿಗೂ ಅದು ಒಲಿದಿಲ್ಲ ಎಂದು ಹೇಳಿದರೆ ತಪ್ಪಾಗಲಾರದು.

### ೫.೧.೪.೨. ಕೃಷಿ ಉದ್ಯೋಗ

ಕೃಷಿ ಪ್ರಧಾನವಾದ ಭಾರತದಲ್ಲಿ ಶೇ. ೭೫ಕ್ಕೂ ಬಹುಸಂಖ್ಯಾತ ಜನರು ಕೃಷಿಯನ್ನೇ ಪ್ರಧಾನ ಉದ್ಯೋಗವಾಗಿ ಅನುಸರಿಸಿದ್ದಾರೆ. ಗೊಂದಲಿಗರು ಪ್ರಾರಂಭದಿಂದಲೂ ಉತ್ಪಾದನಾ ಚಟುವಟಿಕೆಗಳಲ್ಲಿ ಒಂದಾದ ಕೃಷಿ ಉದ್ಯೋಗದಲ್ಲಿ ತೊಡಗಿರುವುದನ್ನು ಕಾಣುವದಿಲ್ಲ. ಬದಲಾದ ಇಂದಿನ ಸನ್ನಿವೇಶದಲ್ಲಿ ಅಲ್ಲಲ್ಲಿ ಸಮುದಾಯದ ಕೆಲವು ಕುಟುಂಬಗಳು ಸಾಗುವಳಿ ಮಾಡುವ ಭೂಮಿಯನ್ನು ಹೊಂದಿದ್ದಾರೆ. ಮುಖ್ಯವಾಗಿ ಬಾಗಲಕೋಟೆ ಜಿಲ್ಲೆಯ ಕೋಡಿಹಾಳ, ಬಿಜಾಪುರ ಜಿಲ್ಲೆಯ ಕೋರವಾರ, ಗುಲಬರ್ಗಾ ಜಿಲ್ಲೆಯ ಹಳಕಟ್ಟಿ, ರಾಯಚೂರ ಜಿಲ್ಲೆಯ ನಾಗರಾಳ, ಅಂತಹ ಊರುಗಳಲ್ಲಿ ಅನೇಕ ಗೊಂದಲಿಗರು ೫-೬ ಎಕರೆಯವರೆಗೆ ಭೂಮಿಯನ್ನು ಹೊಂದಿದ್ದು, ಸ್ವತಃ ಸಾಗುವಳಿ ಮಾಡುತ್ತಿದ್ದಾರೆ. ಸಮೀಕ್ಷೆ ಹಿನ್ನೆಲೆಯಲ್ಲಿ ನೋಡಿದಾಗ ಭೂಮಿಯನ್ನು ಹೊಂದಿದವರು, ಕೃಷಿ ಉದ್ಯೋಗವನ್ನು ಅನುಸರಿ ಸುತ್ತಿರುವವರು ಗೊಂದಲಿಗ ಸಮುದಾಯದಲ್ಲಿ ಕೇವಲ ಬೆರಳೆಣಿಕೆಯಷ್ಟು ಮಾತ್ರ ಎಂದು ಹೇಳಬಹುದಾಗಿದೆ.

ಈ ಹಿನ್ನೆಲೆಯಲ್ಲಿ ಸಮೀಕ್ಷೆಯ ಪ್ರಕಾರ ಕೇವಲ ೪೧ ಕುಟುಂಬಗಳು ಮಾತ್ರ ಕೃಷಿ ಭೂಮಿಯನ್ನು ಹೊಂದಿದ್ದು, ಲಿಂಗವಾರು ಶೇ. ೨ರಷ್ಟು ಜನರು ಈ ಕೃಷಿ ಉದ್ಯೋಗದಲ್ಲಿ ತೊಡಗಿದ್ದಾರೆ. ಈ ಕುಟುಂಬಗಳು ಹೊಂದಿರುವ ಕೃಷಿಭೂಮಿಯೂ ಸಹ ನೀರಾವರಿಗೆ ಒಳಪಟ್ಟರದೆ, ಒಣಬೇಸಾಯವಾಗಿದ್ದು ಅದನ್ನೇ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಆದರೆ ಗ್ರಾಮಾಂತರ ಪ್ರದೇಶದಲ್ಲಿಯ ಗೊಂದಲಿಗ ಕುಟುಂಬಗಳು ಕೃಷಿಭೂಮಿ ಇಲ್ಲದ ಕಾರಣ ಕೃಷಿ ಕೂಲಿಕಾರರಾಗಿ ಶೇ. ೨೭ರಷ್ಟು ಕಾರ್ಯನಿರ್ವಹಿಸುತ್ತಿರುವದನ್ನು ಕಾಣುತ್ತೇವೆ. ಈ ವರ್ಗದಲ್ಲಿ ೪೯೩ ಪುರುಷರು ಮತ್ತು ೩೬೦ ಮಹಿಳೆಯರಿದ್ದು ಒಟ್ಟು ೮೫೩ರಷ್ಟು ಕೃಷಿಕೂಲಿ ಕಾಯಕದಲ್ಲಿ ತೊಡಗಿಕೊಂಡಿದ್ದಾರೆ. ಇನ್ನೂಳಿದ ಕುಟುಂಬಗಳು ಭೂರಹಿತ ಕುಟುಂಬಗಳಾಗಿರುವುದು ಕಾಣಬಹುದು.

**೫.೧.೪.೩. ಇತರ ವೃತ್ತಿಗಳು**

ಆಧುನಿಕತೆಯ ಪ್ರಭಾವದಿಂದ ಗೊಂದಲಿಗರು ಇಂದು ಯಾವುದೇ ಒಂದು ವೃತ್ತಿಗೆ ಅಂಟಿಕೊಂಡಿರದೇ ವಿವಿಧ ವೃತ್ತಿಗಳಲ್ಲಿ ತೊಡಗುವುದರ ಮೂಲಕ ತಮ್ಮ ಆದಾಯದ ಮೂಲಗಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಆದರೆ ಕೆಲವರು ಹೇಳುವಂತೆ ಗೊಂದಲಿಗರು ತೊಗಲಿನ ವ್ಯಾಪಾರವನ್ನು ಬಿಟ್ಟು ಎಲ್ಲ ಕೆಲಸಗಳಲ್ಲಿ ತೊಡಗಿಕೊಂಡಿದ್ದಾರೆ. ಗೊಂದಲಿಗರು ತೊಡಗಿಕೊಂಡಿರುವ ಇತರ ವೃತ್ತಿಗಳು ಯಾವುವೆಂದರೆ ಭಾಂಡೆ ಬೆಸೆಯುವ, ಕೊಡೆ, ಸ್ಟೋವ್ ರಿಪೇರಿ, ಪ್ಲಾಸ್ಟಿಕ್ ವಸ್ತಗಳ ಮಾರಾಟ, ಸೋಡಾ ವ್ಯಾಪಾರ, ಬಟ್ಟೆ ವ್ಯಾಪಾರ ಮುಂತಾದ ವೃತ್ತಿಯಲ್ಲಿ ತೊಡಗಿದ್ದಾರೆ. ಕೆಲವರು ಕಣ್ಣು-ಕಿವಿಯಲ್ಲಿನ ಕಸ ತೆಗೆಯುವ ವೃತಿ ಮಾಡುತ್ತಿದ್ದು ಸಂತೆ, ಜಾತ್ರೆ, ಉತ್ಸವಗಳಲ್ಲಿ, ನಗರಗಳ ಬಸ್‌ಸ್ಟ್ಯಾಂಡ್‌ಗಳಲ್ಲಿ ಕೊಳಲಿನ ಆಕಾರದಲ್ಲಿರುವ ವಸ್ತುವನ್ನು ಬಳಸಿ ಮನುಷ್ಯರ ಕಿವಿಯಲ್ಲಿರುವ ಕಸವನ್ನು ಹಾಗೂ ಕಣ್ಣಿನಲ್ಲಿರುವ ಕಲ್ಲುಗಳನ್ನು ತೆಗೆಯುವ ವೃತ್ತಿಯಲ್ಲಿ ನಿರತರಾಗಿದ್ದಾರೆ. ಬಾದಾಮಿ, ಕೆರೂರ, ಬಾಗಲಕೋಟ್, ಗದಗ, ಅಣ್ಣಿಗೇರಿ, ಹುಬ್ಬಳ್ಳಿ, ಗೋಕಾಕ, ಕಿತ್ತೂರ, ಬೈಲಹೊಂಗಲ, ಬೆಳಗಾಂವ, ಸವದತ್ತಿ, ರಾಮದುರ್ಗಗಳಲ್ಲಿ ಇವರು ಕಂಡುಬರುತ್ತಾರೆ.

ಗೊಂದಲಿಗರ ಹೆಣ್ಣುಮಕ್ಕಳು ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳ ದಿನಬಳಕೆಗೆ ಉಪಯೋಗಿಸುವ ಕನ್ನಡಿ, ಹಣೆಗೆ ಕುಂಕುಮ, ಟಿಕಳಿ, ಸೂಜಿ ದಾರ, ಪಿನ್ನ, ಬಣ್ಣದ ಡಬ್ಬಿ, ಸ್ನೋ, ಪೌಡರ್, ರಿಬ್ಬನ್, ಕ್ಲಿಪ್, ಹೆಣಿಕೆಯ ವಸ್ತುಗಳು, ಹೀಗೆ ಹಲವಾರು ವಸ್ತುಗಳನ್ನು ಮಾರಾಟ ಮಾಡುತ್ತಿರುವದನ್ನು ಕಾಣುತ್ತೇವೆ. ಮಹಿಳೆಯರು ಈ ಎಲ್ಲಾ ವಸ್ತುಗಳನ್ನು ಒಂದು ಬುಟ್ಟಿಯಲ್ಲಿ ಹಾಕಿಕೊಂಡು ಮನೆ-ಮನೆಯ ಮುಂದೆ ತಮ್ಮಲ್ಲಿರುವ ವಸ್ತುಗಳ ಬಗ್ಗೆ ಎತ್ತರದ ಧ್ವನಿಯಲ್ಲಿ ಕೂಗಿ ಹೇಳುವುದರ ಮೂಲಕ ಮಾರಾಟ ಮಾಡಲು ಪ್ರಯತ್ನಿಸುತ್ತಾರೆ.

ತಮ್ಮ ಪಾರಂಪರಿಕ ವೃತ್ತಿಯ ಹೊರತಾಗಿ ಇನ್ನಿತರ ವೃತ್ತಿಗಳಲ್ಲಿ ತೊಡಗಿರುವ ಗೊಂದಲಿಗರು ಸಮೀಕ್ಷೆಯ ಪ್ರಕಾರ ೨೦೬ ಅಂದರೆ ಶೇ. ೬ರಷ್ಟು ಜನರು ಇತರ ವೃತ್ತಿಗಳಲ್ಲಿ ತೊಡಗಿರುವದನ್ನು ಕಾಣಬಹುದಾಗಿದೆ.

### ೫.೧.೪.೩.೧. ಸರ್ಕಾರಿ-ಖಾಸಗಿ ಕ್ಷೇತ್ರದಲ್ಲಿ ಉದ್ಯೋಗಿಗಳು

ಅಲೆಮಾರಿತನದ ಬದುಕಿನಿಂದ ಮುಕ್ತರಾಗಿ ಸ್ಥಿರ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿರುವ ಗೊಂದಲಿಗರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವ ಮೂಲಕ ಸರ್ಕಾರಿ ಕ್ಷೇತ್ರದಲ್ಲಿ ಉದ್ಯೋಗಾವಕಾಶ ಗಳನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ. ೨-೩ ದಶಕಗಳ ಹಿಂದಿನಿಂದಲೂ ಅಲೆಮಾರಿಗಳಾಗಿಯೇ ಕಷ್ಟ ಪಟ್ಟು ಸಾಧನೆ ಮಾಡಿದ ಅನೇಕ ವ್ಯಕ್ತಿಗಳು ಡಾಕ್ಟರ, ಎಂಜಿನೀಯರ್‌ರಾಗಿ ಪ್ರಥಮ ದರ್ಜೆ ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇತ್ತೀಚೆಗೆ ಅನೇಕ ಜನರು ಸರ್ಕಾರಿ ಕ್ಷೇತ್ರದಲ್ಲಿ ಉದ್ಯೋಗದ ಅವಕಾಶಗಳನ್ನು ಪಡೆದುಕೊಂಡಿದ್ದಾರೆ. ಉಪನ್ಯಾಸಕ, ಶಿಕ್ಷಕ, ನಿರ್ವಾಹಕ, ಚಾಲಕ, ಪೋಲಿಸ್, ಮುಂತಾದ ಸರ್ಕಾರಿ ಕೆಲಸಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನು ಕೆಲವರು ಮಿಲಿಟರಿ ವಿಭಾಗದಲ್ಲಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಗೊಂದಳಿ ಸಮಾಜದವರು ೨೦೦೭ರ ಅವಧಿಯಲ್ಲಿ ನಡೆಸಿದ ಮಹಾಅಧಿವೇಶನದ ಸಂದರ್ಭದಲ್ಲಿ ಹೊರ ತಂದ ಸ್ಮರಣ ಸಂಚಿಕೆಯ ಅನುಬಂಧ-೩ರಲ್ಲಿ ಸಾರ್ವಜನಿಕ ಸೇವೆಯಲ್ಲಿರುವ ಅಂಕಿ ಸಂಖ್ಯಾ ಪ್ರಮಾಣ ಕೊಟ್ಟಿದ್ದು ಅದರ ವಿವರ ಈ ಕೆಳಗಿನಂತಿದೆ.

**ಕೋಷ್ಟಕ ೫.೩ ಸಾರ್ವಜನಿಕ ಸೇವೆಯಲ್ಲಿರುವ ಅಂಕಿ ಸಂಖ್ಯಾ ಪ್ರಮಾಣ**

| ವರ್ಗ | ನೌಕರರ ಸಂಖ್ಯೆ | | |
|---|---|---|---|
| | ಪುರುಷ | ಮಹಿಳೆ | ಒಟ್ಟು |
| IAS,IPS, ಶ್ರೇಣಿ | ಇಲ್ಲ | ಇಲ್ಲ | ಇಲ್ಲ |
| ಕ್ಲಾಸ್ ೧ KAS ಶ್ರೇಣಿ | ಇಲ್ಲ | ಇಲ್ಲ | ಇಲ್ಲ |
| ಕ್ಲಾಸ್ ೧ ಅಧಿಕಾರಿಗಳು | ೦೬ | - | ೦೬ |
| ಕ್ಲಾಸ್ ೨ ಅಧಿಕಾರಿಗಳು | ೦೫ | - | ೦೫ |
| ಮೊದಲನೇ ದರ್ಜೆ ಗುಮಾಸ್ತರು | ೩೦೦ | ೧೦ | ೩೧೦ |
| ೪ನೇ ದರ್ಜೆಯವರು | ೧೧೫ | ೧೪ | ೧೨೯ |

* ೦೭.೦೧.೨೦೦೭ರ ಅನುಬಂಧ-೩ರ ಗೊಂದಳಿ, ಜೋಶಿ... ಸಮಾಜಗಳ ಬೃಹತ್ ಅಧಿವೇಶನದ ಸ್ಮರಣ ಸಂಚಿಕೆ.

ಇತ್ತೀಚಿನ ಅವಧಿಯಲ್ಲಿ ಸರ್ಕಾರಿ ಉದ್ಯೋಗ ಕ್ಷೇತ್ರದಲ್ಲಿ ಗೊಂದಲಿಗರು ಹೆಚ್ಚುತ್ತಿದ್ದರೂ, ರಾಜ್ಯದ ಗೊಂದಲಿಗರ ಒಟ್ಟು ಜನಸಂಖ್ಯೆಗನುಣವಾಗಿ ಅದರ ಪ್ರಮಾಣ ಕಡಿಮೆಯಂದೇ ಹೇಳಬೇಕು. ಇಂದು ಗೊಂದಲಿಗರ ಬೆರಳೆಣಿಕೆಯಷ್ಟು ಮಹಿಳೆಯರು ಸಹ ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣದಲ್ಲಿ ಪದವಿ ಪಡೆಯುತ್ತಿದ್ದಾರೆ. ಇವರಲ್ಲಿ ಶಿಕ್ಷಕರಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸೇವೆ ಸಲ್ಲಿಸುತ್ತಿರುವುದು ಕಂಡುಬರುತ್ತಿದೆ. ವೈದ್ಯಕೀಯ ಮತ್ತು ತಾಂತ್ರಿಕ ಪದವಿ ಪಡೆದವರು. ಖಾಸಗಿ ಸೇವೆ ಸಲ್ಲಿಸುತ್ತಿದ್ದಾರೆ. ಗೊಂದಲಿಗರ ಅನೇಕ ಯುವಕರು ಖಾಸಗಿ ಕ್ಷೇತ್ರದ ಉದ್ಯೋಗದಲ್ಲಿ ತೊಡಗಿದ್ದಾರೆ.

ಸಮೀಕ್ಷೆಯ ಹಿನ್ನೆಲೆಯಲ್ಲಿ ನೋಡಲಾಗಿ ಗೊಂದಲಿಗರಲ್ಲಿ ೬೧ ಜನರು ಸರ್ಕಾರಿ ಕ್ಷೇತ್ರದಲ್ಲಿಯೂ ಹಾಗೂ ೫೫ ಜನರು ಖಾಸಗಿ ಕ್ಷೇತ್ರದಲ್ಲಿಯೂ ಉದ್ಯೋಗದಲ್ಲಿ ತೊಡಗಿರುವದನ್ನು ಗಮನಿಸಿದಾಗ ದುಡಿಯುವ ವರ್ಗದಲ್ಲಿ ಸರ್ಕಾರಿ ಹಾಗೂ ಖಾಸಗಿ ಕ್ಷೇತ್ರದಲ್ಲಿ ದುಡಿಯುವವರ ಪ್ರಮಾಣ ಶೇ. ೪ರಷ್ಟು ಮಾತ್ರ ಎಂದು ಹೇಳಬಹುದು.

ಆಧುನಿಕತೆಯ ಇಂದಿನ ಪರಿಸರದಲ್ಲಿ ಗೊಂದಲಿಗರು ಪಾರಂಪರಿಕ ವೃತ್ತಿಯಿಂದ ಬೇಸತ್ತು, ಇತರೆ ಸಮುದಾಯಗಳಂತೆ ಸರಕಾರಿ ಕ್ಷೇತ್ರದಲ್ಲಿ ಸೇವೆ ಸಲ್ಲಿಸಬೇಕೆಂಬ ಹಂಬಲ ಇವರಲ್ಲಿ ಹೆಚ್ಚಾಗುತ್ತಿದೆ. ಸರಕಾರದ ಪ್ರತಿಯೊಂದು ಕ್ಷೇತ್ರದಲ್ಲಿ ಅವಕಾಶ ಪಡೆದುಕೊಂಡು ಮುಖ್ಯವಾಹಿನಿಯತ್ತ ತಾವು ಗುರುತಿಸಿಕೊಳ್ಳಬೇಕು ಎಂಬ ಹಂಬಲ ಈ ಸಮುದಾಯದ ಹಿರಿಯರಲ್ಲಿ, ಯುವಕರಲ್ಲಿ ಹೆಚ್ಚಾಗುತ್ತಿರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗುರುತಿಸಿದ್ದೇನೆ. ಬೆಳಗಾವಿಯ ಸುಭಾಷ ಆ. ಜೋಶಿ ಪೋಲಿಸ್ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ ಇವರ ೩ ಜನ ಗಂಡು ಮಕ್ಕಳಲ್ಲಿ ಇಬ್ಬರು ಎಂ.ಬಿ.ಬಿ.ಎಸ್, ಎಂ.ಎಸ್., ಪದವಿ ಪಡೆದಿದ್ದರೆ ಇನ್ನೊಬ್ಬರು ಎಂಜನಿಯರ್ ಕೋರ್ಸ್ ಮುಗಿಸಿದ್ದಾನೆ, ಸೊಸೆಯೊಬ್ಬಳು ವೈದ್ಯಕೀಯ ಪದವಿ ಪಡೆದು ಡಾಕ್ಟರ್ ಆಗಿದ್ದಾಳೆ, ಮಗಳು ಎಂ.ಎಸ್ಸಿ. ಮಾಡಿಕೊಂಡಿದ್ದಾಳೆ. ಹೀಗೆ ಆರ್ಥಿಕವಾಗಿ ಪ್ರಬಲರಾಗುತ್ತಿರುವ ಅನೇಕ ಗೊಂದಲಿಗರು ಶೈಕ್ಷಣಿಕವಾಗಿ ಬೆಳೆಯುತ್ತಿರುವುದು ಸಂತಸದ ಸಂಗತಿಯಾಗಿದೆ.

### ೫.೨. ಶೈಕ್ಷಣಿಕ ಸ್ಥಿತಿಗತಿಗಳು

ಸಮಾಜದಲ್ಲಿ ನಾಗರೀಕತೆಯ ಲಕ್ಷಣವಾಗಿರುವ ಶಿಕ್ಷಣವು ಮಾನವನ ಜೀವನದ ಉಸಿರು. ನಾಗರೀಕ ಜೀವನದ ಸಾಧನೆ-ಸಾರ್ಥಕತೆಗಳು ಶಿಕ್ಷಣವನ್ನು ಅವಲಂಬಿಸಿವೆ. ಆಧುನಿಕ ಜೀವನದ ಮೂಲಭೂತ ಚಟುವಟಿಕೆಗಳಲ್ಲಿ ಒಂದಾಗಿರುವ, ಸಮೂಹ ಜೀವನದ ಅನಿವಾರ್ಯ ಅವಶ್ಯಕತೆಗಳಲ್ಲಿ ಪ್ರಮುಖವಾದ ಶಿಕ್ಷಣವು, ಮಾನವ ಜೀವನದ ದಿಕ್ಕು-ದೆಸೆಗಳನ್ನು, ಗುರಿ-ಗಂತವ್ಯಗಳನ್ನು ನಿರ್ಧರಿಸುವ ಪ್ರಭಾವಿ ಮಾಪನವಾಗಿದೆ. ಶೈಕ್ಷಣಿಕ ಪ್ರಗತಿಯ ದ್ಯೋತಕವಾಗಿದ್ದು, ಶಿಕ್ಷಣ ರಾಷ್ಟ್ರದ ಪ್ರಗತಿಗೆ ಅವಶ್ಯಕವಾದ ಸಾಧನವಾಗಿದೆ. ಶಿಕ್ಷಣವೆಂದರೆ ಕೇವಲ ಜ್ಞಾನ-ಸಂಪತ್ತಿನ ವರ್ಗಾವಣೆ ಮಾತ್ರವಾಗಿರದೆ, ಭವಿಷ್ಯವನ್ನು ಎದುರಿಸಲು ಅಗತ್ಯವಾದ ಕಲೆ-ಕುಶಲತೆಗಳನ್ನು ಮತ್ತು ಮನೋಭಾವಗಳನ್ನು ವ್ಯಕ್ತಿಗಳಲ್ಲಿ ಬೆಳಸುವುದೇ ಆಗಿದೆ. ಶಿಕ್ಷಣ ಸಾಂಘಿಕ, ಸಂಘಟಿತ ಬದುಕಿಗೆ ಎಡೆಮಾಡಿಕೊಡುವುದರ ಜೊತೆಗೆ ಐಕ್ಯತೆಯನ್ನು ಕಾಯ್ದುಕೊಳ್ಳಲು ಸಾಧ್ಯವಾಗುವುದು. ನಮ್ಮ ಸಂವಿಧಾನದಲ್ಲಿ ಮೂಲಭೂತವಾಗಿ ಶಿಕ್ಷಣವನ್ನು ಸಾರ್ವತ್ರಿಕವಾಗಿ ಎಲ್ಲರಿಗೂ ಉಚಿತ ಮತ್ತು ಕಡ್ಡಾಯವಾಗಿ ಕಲ್ಪಿಸಿಕೊಡಬೇಕು ಎಂಬ ಮೂಲೋದ್ದೇಶಕ್ಕನುಗುಣವಾಗಿ ಯಾವುದೇ ತಾರತಮ್ಯವಿಲ್ಲದೆ ಸಮಾಜದ ಎಲ್ಲಾ ವರ್ಗಗಳಿಗೂ ಸರಿಸಮಾನವಾಗಿ ಶಿಕ್ಷಣ ಸೌಲಭ್ಯಗಳನ್ನು ಕಲ್ಪಿಸಿ ಕೊಡಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಸಮಾಜದ ದುರ್ಬಲ ವರ್ಗಗಳು, ಅಲೆಮಾರಿ-ಬುಡಕಟ್ಟು ಸಮುದಾಯಗಳು ರಚನಾತ್ಮಕ ಬದಲಾವಣೆ ಮೂಲಕ ತಮ್ಮ ಆರ್ಥಿಕ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಶಿಕ್ಷಣವು ಒಂದು

ಸಾಧನವಾಗಿದೆಯಲ್ಲದೆ ಅವರಲ್ಲಿ ಜಾಗೃತಿ ಮೂಡಿಸಿ ತಮಗಾಗುವ ಶೋಷಣೆ ತಾರತಮ್ಯವನ್ನು ಹೋಗಲಾಡಿಸಿ ಕೊಳ್ಳಲು ಸಾಧ್ಯವಾಗುವುದು. ರಾಜಕೀಯ ಹಾಗೂ ಸಾಮಾಜಿಕ ಪರಿವರ್ತನೆಯ ಪ್ರಬಲ ಸಾಧನವಾಗಿರುವ ಶಿಕ್ಷಣವು, ಸಮಾಜದ ಮುಖ್ಯವಾಹಿನಿಯಲ್ಲಿ ತಮ್ಮನ್ನು ತಾವು ತೊಡಗಿಸಿ ಕೊಳ್ಳಲು ಪ್ರೇರಕಶಕ್ತಿಯಾಗಿದೆ.

ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಗೆ ಅನುವು ಮಾಡಿಕೊಡುವ ಶಿಕ್ಷಣವು ತನ್ನ ಸ್ಥಾನಮಾನವನ್ನು ನಿರ್ಧರಿಸಲು ಮತ್ತು ಉತ್ತಮಪಡಿಸಿಕೊಳ್ಳಲು ಸಹಾಯಕವಾಗಿದೆ. ಏಕೆಂದರೆ ವ್ಯಕ್ತಿಯ ಸ್ಥಾನಮಾನಕ್ಕೂ ಅವನು ಪಡೆದುಕೊಂಡಿರುವ ಶಿಕ್ಷಣಕ್ಕೂ ನಿಕಟ ಸಂಬಂಧವಿದ್ದು, ಇಂದಿನ ಆಧುನಿಕ ಸಂಕೀರ್ಣ ಸಮಾಜದಲ್ಲಿ ಕಂಡುಬರುವ ವಿಭಿನ್ನ ಉದ್ಯೋಗಾವಕಾಶಗಳಿಗೂ ಶಿಕ್ಷಣವು ಅಳತೆಗೋಲಾಗಿದೆ.

ಅಲೆಮಾರಿಗಳು ಶಿಕ್ಷಣದ ಪರಿಜ್ಞಾನವಿಲ್ಲದೇ ಅನಕ್ಷರಸ್ಥರಾಗಿ, ಇತರೆ ಸಮುದಾಯಗಳ ಆಶ್ರಯಕ್ಕಾಗಿ ಕೈಚಾಚುತ್ತಾ ಬದುಕನ್ನು ಕಳೆಯುತ್ತಾ ಬಂದಿವೆ. ಪರಂಪರಾನುಗತ ವೃತ್ತಿಯ ಮೂಲಕ ಕೈಸುಟ್ಟುಕೊಂಡು ಅನೇಕ ಸಂಕಷ್ಟಗಳಿಂದ ಮುಕ್ತರಾಗಲು ಮತ್ತು ಅವರ ಮುಂದಿನ ಪೀಳಿಗೆ ಈ ರೀತಿ ತೊಂದರೆಗಳನ್ನು ಅನುಭವಿಸಬಾರದು ಎಂಬ ಕಾರಣದಿಂದ ಗೊಂದಲಿಗರ ಅನೇಕ ಕುಟುಂಬಗಳು ಸ್ಥಿರವಾದ ನೆಲೆ ಕಂಡುಕೊಂಡು ಮಕ್ಕಳಿಗೆ ಶಿಕ್ಷಣ ನೀಡಲು ಹೆಣಗಾಡುತ್ತಿರುವುದನ್ನು ಕಾಣುತ್ತೆವೆ. ಇದರ ಪರಿಣಾಮವಾಗಿ ಗೊಂದಲಿಗರ ಬೆರಳೆಣಿಕೆ ಕುಟುಂಬಗಳ ಮಕ್ಕಳು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಆದರೆ ಅದೆಷ್ಟೊ ಕುಟುಂಬದ ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಶಿಕ್ಷಣದಿಂದ ವಂಚಿತರಾಗಲು ಅವರಲ್ಲಿ ಆರ್ಥಿಕ ದುರ್ಬಲತೆ ಮತ್ತು ಅಲೆಮಾರಿತನ ಕಾರಣವಾಗಿದೆ. ಆರ್ಥಿಕ ದುಸ್ಥಿತಿಯಿಂದ, ಪೋಷಕರು ಮಕ್ಕಳ ದುಡಿಮೆಯನ್ನೂ ಬಯಸುತ್ತಾರೆ. ಗೊಂದಲಿಗರು ಇತ್ತೀಚೆಗೆ ಅನುಸರಿಸುತ್ತಿರುವ ಭಾಂಡೆ ವ್ಯಾಪಾರದ ಸಂದರ್ಭದಲ್ಲಿ ತಮ್ಮ ಮಕ್ಕಳನ್ನು ಕರೆದುಕೊಂಡು ಹೋಗುತ್ತಿರುವುದನ್ನು ಕಾಣುತ್ತೇವೆ.

ಪ್ರಸ್ತುತ ಕೈಗೊಂಡ ಸಮೀಕ್ಷೆಯ ಹಿನ್ನೆಲೆಯಲ್ಲಿ ಕೋಷ್ಟಕ ೫.೪ನ್ನು ಗಮನಿಸಿದಾಗ ಅನಕ್ಷರತೆಯು ಇನ್ನು ಕಂಡುಬರುತ್ತಿದೆ. ಈ ರೀತಿ ಕಂಡುಬರುವ ಅಂಕಿಸಂಖ್ಯೆಗಳ ಪ್ರಕಾರ ಸಾಕ್ಷರತೆಯ ಪ್ರಮಾಣವು ಶೇ. ೫೬.೦೩ರಷ್ಟಿದ್ದಾರೆ, ಅನಕ್ಷರಸ್ಥರ ಪ್ರಮಾಣವು ಶೇ. ೪೩.೯೭ರಷ್ಟು ಇದೆ. ಜಿಲ್ಲಾವಾರು ಗಮನಿಸಿದಾಗ ರಾಯಚೂರು (ಶೇ. ೮೨.೯೭), ಬಾಗಲಕೋಟ (ಶೇ. ೭೪.೦೪), ಕೊಪ್ಪಳ (ಶೇ. ೭೦.೪೨), ಗದಗ (ಶೇ. ೬೨.೯೪), ಹಾವೇರಿ (ಶೇ. ೫೭.೧೮) ಜಿಲ್ಲೆಗಳಲ್ಲಿ ಗೊಂದಲಿಗರ ಸರಾಸರಿ ಸಾಕ್ಷರತಾ ಪ್ರಮಾಣಕ್ಕಿಂತ ಅತಿಹೆಚ್ಚು ಇರುವದು ಕಂಡುಬಂದರೆ, ಬೆಳಗಾವಿ, ಬೀದರ, ಗುಲಬರ್ಗಾ, ದಾವಣಗೆರೆ, ಕಾರವಾರ, ಬಿಜಾಪೂರ, ಧಾರವಾಡ ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವು ಶೇ. ೩೫ಕ್ಕಿಂತ ಹೆಚ್ಚು ಇರುವುದು ಕಂಡುಬಂದರೆ, ಬಳ್ಳಾರಿಯಲ್ಲಿ ಮಾತ್ರ ಕೇವಲ ಶೇ. ೧೩.೨೨ರಷ್ಟು ಇದೆ. ಈ ದೃಷ್ಟಿಯಲ್ಲಿ ಒಟ್ಟು ಪ್ರಮಾಣವನ್ನು ಗಮನಿಸಿದಾಗ ಗೊಂದಲಿಗರಲ್ಲಿ ರಾಷ್ಟ್ರದ ಸಾಕ್ಷರತಾ ಪ್ರಮಾಣಕ್ಕಿಂತ ಅತ್ಯಂತ ಕಡಿಮೆ ಇದ್ದು ಇನ್ನೂ ಅವರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅನಕ್ಷರಸ್ಥರು ಇದ್ದಾರೆ.

## ಕೋಷ್ಟಕ ೫.೪ ಗೊಂದಲಿಗರಲ್ಲಿಯ ಸಾಕ್ಷರಸ್ಥರ ಹಾಗೂ ಅನಕ್ಷರಸ್ಥರ ಪ್ರಮಾಣ

| ಕ್ರಸಂ. | ಜಿಲ್ಲೆಗಳು | ಸಾಕ್ಷರಸ್ಥರ ಪ್ರಮಾಣ | | | | | | | | |
|---|---|---|---|---|---|---|---|---|---|---|
| | | ಸಾಕ್ಷರರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಬಾಗಲಕೋಟೆ | ೬೫೬ | ೬೨೭ | ೧೨೮೩ | ೫೩೮ | ೪೧೨ | ೯೫೦ | ೧೧೮ | ೨೧೫ | ೩೩೩ |
| ೨ | ಬೆಳಗಾವಿ | ೩೧೪ | ೨೬೫ | ೫೭೯ | ೨೦೨ | ೯೩ | ೨೯೫ | ೧೧೨ | ೧೭೨ | ೨೮೪ |
| ೩ | ಬಳ್ಳಾರಿ | ೧೨೮ | ೧೨೯ | ೨೫೭ | ೨೬ | ೮ | ೩೪ | ೧೦೨ | ೧೨೧ | ೨೨೩ |
| ೪ | ಬೀದರ | ೧೩೭ | ೧೨೦ | ೨೫೭ | ೯೦ | ೪೬ | ೧೩೬ | ೪೭ | ೭೪ | ೧೨೧ |
| ೫ | ಬಿಜಾಪುರ | ೧೬೨ | ೧೧೩ | ೨೭೫ | ೮೬ | ೨೦ | ೧೦೬ | ೭೬ | ೯೩ | ೧೬೯ |
| ೬ | ದಾವಣಗೆರೆ | ೨೫೦ | ೨೨೭ | ೪೭೭ | ೧೧೫ | ೮೮ | ೨೦೩ | ೧೩೫ | ೧೩೯ | ೨೭೪ |
| ೭ | ಧಾರವಾಡ | ೨೪೩ | ೨೨೦ | ೪೬೩ | ೯೮ | ೪೧ | ೧೩೯ | ೧೪೫ | ೧೭೯ | ೩೨೪ |
| ೮ | ಗದಗ | ೩೯೬ | ೩೬೫ | ೭೬೧ | ೨೯೦ | ೧೮೯ | ೪೭೯ | ೧೦೬ | ೧೭೬ | ೨೮೨ |
| ೯ | ಗುಲಬರ್ಗಾ | ೫೩೭ | ೫೦೫ | ೧೦೪೨ | ೩೨೯ | ೧೪೫ | ೪೭೪ | ೨೦೮ | ೩೬೦ | ೫೬೮ |
| ೧೦ | ಹಾವೇರಿ | ೬೯ | ೮೦ | ೧೪೯ | ೪೬ | ೪೦ | ೮೬ | ೨೩ | ೪೦ | ೬೩ |
| ೧೧ | ಕೊಪ್ಪಳ | ೩೫೮ | ೩೭೯ | ೭೩೭ | ೨೮೪ | ೨೩೫ | ೫೧೯ | ೭೪ | ೧೪೪ | ೨೧೮ |
| ೧೨ | ರಾಯಚೂರು | ೨೦೬ | ೨೦೭ | ೪೧೩ | ೧೯೨ | ೧೫೯ | ೩೫೧ | ೧೪ | ೫೮ | ೭೨ |
| ೧೩ | ಉತ್ತರಕನ್ನಡ | ೬೪ | ೫೩ | ೧೧೭ | ೩೮ | ೧೧ | ೪೯ | ೨೬ | ೪೨ | ೬೮ |
| | ಒಟ್ಟು | ೩೫೨೦ | ೩೩೦೦ | ೬೮೨೦ | ೨೩೩೪ | ೧೪೮೭ | ೩೮೨೧ | ೧೧೮೬ | ೧೮೧೩ | ೨೯೯೯ |

## ಕೋಷ್ಟಕ ೫.೫ ಗೊಂದಲಿಗರಲ್ಲಿಯ ಜಿಲ್ಲಾ ಹಾಗೂ ಲಿಂಗವಾರು ಶೈಕ್ಷಣಿಕ ಹಂತಗಳ ವಿವರ

| ಕ್ರಸಂ. | ಜಿಲ್ಲೆಗಳು | ಶೈಕ್ಷಣಿಕ ಮಟ್ಟ | | | | | | | | | | | | | |
|---|---|---|---|---|---|---|---|---|---|---|---|---|---|---|---|
| | | ಪ್ರಾಥಮಿಕ | | ಮಾಧ್ಯಮಿಕ | | ಪ್ರೌಢಶಾಲೆ | | ಪದವಿಪೂರ್ವ | | ಪದವಿಯೇತರ | | ಸ್ನಾತಕೋತ್ತರ | | ಇತರೆ | |
| | | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು | ಗಂಡು | ಹೆಣ್ಣು |
| ೧ | ಬಾಗಲಕೋಟೆ | ೧೫೨ | ೧೩೭ | ೧೨೭ | ೧೧೯ | ೧೬೩ | ೧೧೨ | ೫೭ | ೨೫ | ೩೨ | ೧೪ | ೩ | ೩ | ೪ | ೨ |
| ೨ | ಬೆಳಗಾವಿ | ೫೫ | ೩೬ | ೫೩ | ೩೧ | ೫೧ | ೧೭ | ೨೫ | ೩ | ೧೭ | ೬ | ೧ | | | |
| ೩ | ಬಳ್ಳಾರಿ | ೧೩ | ೭ | ೬ | ೧ | ೭ | | | | | | | | | |
| ೪ | ಬೀದರ | ೭ | ೧೦ | ೧೦ | ೧೧ | ೪೭ | ೧೭ | ೮ | ೧ | ೧೮ | ೭ | | | | |
| ೫ | ಬಿಜಾಪುರ | ೩೦ | ೭ | ೨೩ | ೬ | ೨೩ | ೭ | ೭ | | ೩ | | | | | |
| ೬ | ದಾವಣಗೆರೆ | ೬೨ | ೪೬ | ೧೮ | ೧೨ | ೩೧ | ೨೩ | ೧ | ೩ | ೧ | ೩ | ೨ | ೧ | | |
| ೭ | ಧಾರವಾಡ | ೨೮ | ೧೩ | ೨೦ | ೧೧ | ೩೦ | ೧೧ | ೭ | ೪ | ೧೩ | ೨ | | | | |
| ೮ | ಗದಗ | ೧೦೫ | ೭೪ | ೭೭ | ೫೫ | ೬೮ | ೩೮ | ೨೫ | ೯ | ೧೨ | ೧ | ೧ | | ೨ | ೧೨ |
| ೯ | ಗುಲಬರ್ಗಾ | ೧೦೪ | ೫೩ | ೭೬ | ೪೦ | ೧೦೩ | ೪೩ | ೪೦ | ೯ | ೬ | | | | | |
| ೧೦ | ಹಾವೇರಿ | ೨೦ | ೨೦ | ೧೨ | ೧೧ | ೧೧ | ೯ | ೩ | | | | | | | |
| ೧೧ | ಕೊಪ್ಪಳ | ೧೧೧ | ೮೦ | ೮೦ | ೯೦ | ೭೮ | ೫೨ | ೨೧ | ೧೦ | ೪ | ೧ | ೦ | ೦ | ೦ | ೨ |
| ೧೨ | ರಾಯಚೂರು | ೪೯ | ೩೫ | ೩೩ | ೩೬ | ೬೩ | ೬೨ | ೩೧ | ೧೯ | ೧೪ | ೭ | | | ೨ | |
| ೧೩ | ಉತ್ತರಕನ್ನಡ | ೧೪ | ೫ | ೮ | ೩ | ೧೧ | ೩ | ೪ | | ೧ | | | | | |
| | ಒಟ್ಟು | ೭೪೦ | ೫೨೩ | ೫೪೩ | ೪೨೬ | ೬೮೬ | ೩೯೪ | ೨೨೯ | ೮೩ | ೧೨೧ | ೪೧ | ೭ | ೪ | ೮ | ೧೬ |

### ಲಂಬರೇಖಾ ಚಿತ್ರ ೫.೨ ಲಿಂಗವಾರು ಶೈಕ್ಷಣಿಕ ಹಂತಗಳು




ಕೋಷ್ಟಕ ೫.೫ನ್ನು ಹಾಗೂ ಲಂಬಚಿತ್ರ ೫.೨ನ್ನು ಅವಲೋಕಿಸಿದಾಗ ಮೆಟ್ರಿಕ್ ಪೂರ್ವ ಶಿಕ್ಷಣವನ್ನು ಪಡೆದುಕೊಂಡವರು ೩೩೧೨ ಇದ್ದು ಒಟ್ಟು ಸಾಕ್ಷರರಲ್ಲಿ ಈ ಹಂತದ ಶಿಕ್ಷಣವನ್ನು ಪಡೆದುಕೊಂಡವರು ಶೇ. ೮೭ರಷ್ಟು ಇದ್ದರೆ, ಪದವಿಪೂರ್ವ ಶಿಕ್ಷಣವನ್ನು ೩೧೨, ಅಂದರೆ ಒಟ್ಟು ಸುಶಿಕ್ಷಿತರಲ್ಲಿ ಕೇವಲ ಶೇ. ೮ರಷ್ಟು ಹಾಗೂ ಪದವಿ, ಸ್ನಾತಕೋತ್ತರ ಪದವಿ, ಇತರ ಶಿಕ್ಷಣವನ್ನು ಪಡೆದುಕೊಂಡವರು ಕೇವಲ ಶೇ. ೫ರಷ್ಟು ಮಾತ್ರ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಗೊಂದಲಿಗರು ಪ್ರೌಢಶಿಕ್ಷಣದವರೆಗೆ ಕಲಿಯುವದಕ್ಕೆ ಹೆಚ್ಚು ಒತ್ತು ಕೊಟ್ಟಿದ್ದು, ನಂತರದ ಶೈಕ್ಷಣಿಕ ಹಂತಗಳಲ್ಲಿಯ ಅವರ ಪ್ರಮಾಣವು ಕಡಿಮೆಯಾಗುತ್ತಾ ಬಂದಿದೆ. ಶಿಕ್ಷಣವನ್ನು ಅರ್ಧದಲ್ಲಿಯೇ ಬಿಡುವ ಪ್ರಮಾಣವು (Drop-out Ratio) ಹೆಚ್ಚಾಗಿದೆ. ಇದಕ್ಕೆ ಮುಖ್ಯ ಕಾರಣಗಳೆಂದರೆ– ಆರ್ಥಿಕ ಸ್ಥಿತಿ, ಉದ್ಯೋಗದ ಭರವಸೆ ಇಲ್ಲದೆ ಇರುವದು, ನಿರ್ಲಕ್ಷ ಮನೋಭಾವನೆ ಮುಂತಾದವುಗಳು ಎಂದೇ ಹೇಳಬಹುದು. ಆರ್ಥಿಕ ಸುಸ್ಥಿತಿಯಲ್ಲಿರುವವರು ಮಾತ್ರ ಪದವಿ ಹಾಗೂ ಪದವಿ ನಂತರದ ಶಿಕ್ಷಣವನ್ನು ಪಡೆದು ಕೊಂಡವರಾಗಿದ್ದಾರೆ.

ಅದೇರೀತಿ ಸಮೀಕ್ಷೆಯಲ್ಲಿ ಪುರುಷರ ಸಾಕ್ಷರತಾ ಶೇ. ೬೬.೩೦ರಷ್ಟು ಇದ್ದರೆ, ಸ್ತ್ರೀಯರ ಸಾಕ್ಷರತಾ ಪ್ರಮಾಣವು ಕೇವಲ ಶೇ. ೪೫.೦೬ರಷ್ಟು ಇದೆ. ಈ ಪ್ರಮಾಣವನ್ನು ಗಮನಿದಾಗ ಸ್ತ್ರೀಯರ ಕಲಿಯುವಿಕೆಗೆ ಇನ್ನು ಹೆಚ್ಚು ಪ್ರೋತ್ಸಾಹವನ್ನು ನೀಡುತ್ತಿಲ್ಲವೆಂದೆ ಹೇಳಬೇಕಾಗಿದೆ.

ಗೊಂದಲಿಗರಲ್ಲಿ ಶಿಕ್ಷಣದ ಸಮಸ್ಯೆ ಪ್ರಮುಖವಾಗಿ ಎದ್ದು ಕಾಣುತ್ತದೆ. ಗೊಂದಲಿಗರು ಸಾಮಾಜಿಕವಾಗಿ, ಆರ್ಥಿಕವಾಗಿ ತೀರ ಹಿಂದುಳಿಯಲು ಅನಕ್ಷರತೆ ಪ್ರಮುಖ ಕಾರಣವಾಗಿದೆ. ಉತ್ತರ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಗೊಂದಲಿಗರ ಶೈಕ್ಷಣಿಕ ವಿವರಗಳ ಸಮೀಕ್ಷೆ ಮಾಡಿದಾಗ ಅನಕ್ಷರಸ್ಥರ ಪ್ರಮಾಣ ಹೆಚ್ಚಾಗಿರುವುದು ಕಂಡುಬರುತ್ತದೆ. ಪ್ರಾಥಮಿಕ, ಮಾಧ್ಯಮಿಕ ಹಂತದ ಶಿಕ್ಷಣ ಪಡೆದವರು ಅಲ್ಲಲ್ಲಿ ಕಂಡುಬರುತ್ತಾರೆ.

### ೫.೩. ರಾಜಕೀಯ ಸ್ಥಿತಿಗತಿಗಳು

ಆಧುನಿಕತೆ ಮತ್ತು ರಾಜಕೀಯ ಪ್ರಭಾವದಿಂದ ಇಂದು ಅನೇಕ ಸಮುದಾಯಗಳು ರಾಜಕೀಯ ಪ್ರಾತಿನಿಧ್ಯ ಪಡೆದುಕೊಂಡು ಆ ಮೂಲಕ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳಬೇಕೆಂಬ ಉದ್ದೇಶ ಇತ್ತಿತ್ತಲಾಗಿ ಹೆಚ್ಚಾಗುತ್ತಿದೆ. ರಾಜಕೀಯ ಪ್ರಾತಿನಿಧ್ಯ ಪಡೆಯುವ ಸಲುವಾಗಿ ಅನೇಕ ಸಮುದಾಯಗಳು ದೊಡ್ಡ ದೊಡ್ಡ ನಗರಗಳಲ್ಲಿ ಸಮುದಾಯದ ಸಮಾವೇಶಗಳನ್ನು ಏರ್ಪಡಿಸುತ್ತಿರುವುದನ್ನು ಕಾಣುತ್ತೇವೆ. ರಾಜ್ಯದಲ್ಲಿ ನಮ್ಮ ಸಮುದಾಯದ ಜನಸಂಖ್ಯೆ ಇಷ್ಟಿದೆ, ನಮಗೆ ರಾಜಕೀಯವಾಗಿ ಬೆಳೆಯಲು ಅವಕಾಶ ಕಲ್ಪಿಸಿಕೊಡಬೇಕೆಂದು ಸರ್ಕಾರವನ್ನು ಒತ್ತಾಯಿಸುವ ಅನೇಕ ಸಭೆ ಸಮಾರಂಭಗಳು ನಡೆಯುತ್ತಿರುತ್ತವೆ. ಅಲೆಮಾರಿಗಳಾದ ಗೊಂದಲಿಗರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳಲು ಅವರಿಗೆ ಇಲ್ಲಿಯವರೆಗೆ ಸಾಧ್ಯವಾಗಿಲ್ಲ. ಗ್ರಾಮಪಂಚಾಯಿತಿಯಿಂದ ವಿಧಾನಸಭೆಯವರೆಗೆ ನಾವು ರಾಜಕೀಯವಾಗಿ ಬೆಳೆಯಬೇಕು ಮತ್ತು ಆ ಮೂಲಕ ನಮ್ಮ ಸಮುದಾಯದ ಅಸ್ತಿತ್ವ ಗುರುತಿಸಿಕೊಳ್ಳಬೇಕು ಎಂಬುದು ಗೊಂದಲಿಗರ ಮುಖ್ಯ ಆಶಯವಾಗಿದೆ. ಒಂದು ಕಾಲದಲ್ಲಿ ಗೂಢಚಾರಿಕೆ ವೃತ್ತಿಯಲ್ಲಿ ತೊಡಗಿದ್ದರು ಮತ್ತು ಆ ಮೂಲಕ ಅವರು ಸಾಮ್ರಾಜ್ಯಶಾಹಿ ಆಡಳಿತದಲ್ಲಿ ಗೌರವದ ಸ್ಥಾನ ಹೊಂದಿದ್ದರು. ಆದರೆ ಇಂದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಗಣ್ಯರಾಗಿದ್ದಾರೆ.

ಪ್ರತಿಯೊಂದು ಸಮುದಾಯವು ರಾಜಕೀಯ ಕ್ಷೇತ್ರದಲ್ಲಿ ಸ್ಥಾನಮಾನ ಗಿಟ್ಟಿಸಿಕೊಂಡರೆ ಮಾತ್ರ ಆ ಸಮುದಾಯ ಸರ್ಕಾರದಿಂದ ಅನೇಕ ಸೌಲಭ್ಯಗಳನ್ನು ಪಡೆದುಕೊಳ್ಳಬಹುದು. ಎಂ.ಎನ್. ಶ್ರೀನಿವಾಸ ಅವರು ತಮ್ಮ 'ಪ್ರಬಲ ಜಾತಿ' ಎನ್ನುವ ಪರಿಕಲ್ಪನೆಯಲ್ಲಿ 'ಯಾವದೇ ಒಂದು ಜಾತಿ ಸಮುದಾಯವು ರಾಜಕೀಯವಾಗಿ ಪ್ರಾಬಲ್ಯವನ್ನು ಮತ್ತು ಪ್ರಾತಿನಿಧಿತ್ವವನ್ನು ಪಡೆದುಕೊಳ್ಳಬೇಕಾದರೆ ಸಂಖ್ಯಾತ್ಮಕ ಅಂಶಗಳು ಅಷ್ಟೆ ಅಲ್ಲ, ಶೈಕ್ಷಣಿಕ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳು ಪ್ರಭಾವ ಬೀರುತ್ತವೆ', ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಕರ್ನಾಟಕ ರಾಜ್ಯ ಗೊಂದಳಿ, ಜೋಶಿ, ಬುಡಬುಡಿಕೆ, ವಾಸುದೇವ ಒಕ್ಕೂಟದ ಅಡಿಯಲ್ಲಿ ಸಂಗ್ರಹಿಸಿರುವ, ಜನಸಂಖ್ಯಾ ಮಾಹಿತಿಯ ಪ್ರಕಾರ ರಾಜ್ಯಾದ್ಯಂತ ಚದುರಿರುವ ಗೊಂದಲಿಗ ಜನ ಸಂಖ್ಯೆಯು ಸುಮಾರು ೬ ಲಕ್ಷದಷ್ಟಿದ್ದರೂ, ಆಯಾ ಮತ ಕ್ಷೇತ್ರವಾರು ಸಂಖ್ಯಾತ್ಮಕವಾಗಿ ಗಣನೆಗೆ ತೆಗೆದುಕೊಂಡರೆ ನಗಣ್ಯ ಪ್ರಮಾಣದಲ್ಲಿ ಇರುವುದು. ಹಾಗೆಯೇ ಮತದಾನದಲ್ಲಿ ಯಾವುದೇ ರೀತಿ ಇವರ ಮತಗಳು ನಿರ್ಣಾಯಕವಾದ ಮತಗಳು ಆಗಿರದೇ ಇರುವುದರಿಂದ ಯಾವುದೇ ರಾಜಕೀಯ ಪಕ್ಷಗಳಾಗಲೀ ಅಥವಾ ಚುನಾವಣಾ ಅಭ್ಯರ್ಥಿಗಳಾಗಲೀ ಇವರನ್ನು ಯಾವದೇ ರೀತಿ Vote bank ಎಂಬ ಲೆಕ್ಕಕ್ಕೆ ತೆಗೆದುಕೊಳ್ಳಲಾರರು. ಅಲೆಮಾರಿ ಸಮುದಾಯವೆಂದೇ ಗುರುತಿಸಿಕೊಂಡಿರುವ ಇವರು Voter card ಹೊಂದಿರುವುದು ಬೆರಳೆಣಿಕೆಯಷ್ಟು ಮಾತ್ರ. Voter card ಇದ್ದರೂ ಮತದಾರರ ಪಟ್ಟಿಯಲ್ಲಿ ಇವರ ಹೆಸರು ಇರುವುದು ಅಪರೂಪ. ಗೊಂದಲಿಗರಿಗೆ ರಾಜಕೀಯವಾಗಿ ಗುರುತಿಸಿಕೊಳ್ಳಬೇಕು ಎಂಬ ವಿಚಾರ ಹೊಳೆಯುತ್ತಿರುವುದೇ ಇತ್ತಿತ್ತಲಾಗಿ ಎಂದು ಹೇಳಬಹುದು.

Voter card ಹೊಂದಿರುವವರು ಅದರ ಉಪಯೋಗ ಏನು? ಎಂಬುದು ಅರಿಯದ ಮುಗ್ಧರು. ಇದಕ್ಕೆ ಪೂರಕವಾಗಿ ಮಾಡಿರುವ ಸಮೀಕ್ಷೆಯ ಪ್ರಕಾರ:

**ಕೋಷ್ಟಕ ೫.೬ ಗೊಂದಲಿಗರ ವಯೋಮಾನದ ಗುಂಪು**

| ವಯೋಮಾನ ಗುಂಪು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೪ | ೩೩೪ | ೩೧೨ | ೬೪೬ |
| ೫-೧೭ | ೧೦೪೫ | ೧೦೧೫ | ೨೦೬೦ |
| ೧೮-೪೦ | ೧೬೩೨ | ೧೬೦೧ | ೩೨೩೩ |
| ೪೧-೬೦ | ೬೫೭ | ೫೩೫ | ೧೧೯೨ |
| ೬೧ರ ಮೇಲ್ಪಟ್ಟು | ೧೮೬ | ೧೪೯ | ೩೩೫ |

ಸಾಮಾನ್ಯವಾಗಿ ೧೮ ವರ್ಷ ಮೇಲ್ಮಟ್ಟದಲ್ಲಿರುವವರು ಗುರುತಿನ ಚೀಟಿ ಹೊಂದಿರಬೇಕಾದದ್ದು ಅವಶ್ಯಕವಾದುದು. ಗೊಂದಲಿಗರ ಕುಟುಂಬಗಳಲ್ಲಿ ಈ ವರ್ಗದಲ್ಲಿ ೪೭೮೯ ಸ್ತ್ರೀ-ಪುರುಷರು ಬರುತ್ತಾರೆ. ಅಂದರೆ ೨೪೩೦ ಪುರುಷರು, ೨೨೮೯ ಸ್ತ್ರೀಯರು ೧೮ ವರ್ಷ ಮೇಲ್ಮಟ್ಟದಲ್ಲಿರುವವರಾಗಿದ್ದು ಅದರಲ್ಲಿ ೨೦೩೬ ಪುರುಷರು, ೧೯೯೩ ಸ್ತ್ರೀಯರು ಮಾತ್ರ ಗುರುತಿನ ಚೀಟಿಯನ್ನು ಹೊಂದಿದ್ದು, ಇನ್ನೂ ೬೯೨ ರಷ್ಟು ಸ್ತ್ರೀ-ಪುರುಷರು ಗುರುತಿನ ಚೀಟಿಯನ್ನು ಹೊಂದಿರುವದಿಲ್ಲ. ಏಕೆಂದರೆ ಇನ್ನೂ ಅವರಲ್ಲಿ ಅಲೆಮಾರಿತನ-ಅರೆಅಲೆಮಾರಿತನದ ಸ್ಥಿತಿ ಇರುವದರಿಂದ ಹಾಗೂ ಮತದಾನದ ಬಗೆಗಿನ ತಾತ್ಸಾರ ಮನೋಭಾವನೆಯಿಂದ ಹಾಗೂ ಗುರುತಿನ ಚೀಟಿಯ ಮೌಲ್ಯದ ಅರಿವು ಇಲ್ಲದೇ ಇರುವದರಿಂದ ಈ ರೀತಿ ಅನೇಕರು ಇನ್ನೂ ಗುರುತಿನ ಚೀಟಿಯನ್ನು ಹೊಂದಿರುವದಿಲ್ಲ.

ಅನಕ್ಷರತೆ, ಬಡತನ ಆರ್ಥಿಕ ದುಸ್ಥಿತಿಯಿಂದ ಯಾವದೇ ರೀತಿಯಲ್ಲಿ ಸ್ಥಳೀಯ ಮಟ್ಟದಲ್ಲಿಯೂ ಸಹಿತ ರಾಜಕೀಯ ಸ್ಥಾನಮಾನಗಳನ್ನು ಪಡೆದುಕೊಳ್ಳಲು ಇವರಿಗೆ ಸಾಧ್ಯವಾಗಿಲ್ಲ. ಇತ್ತಿತ್ತಲಾಗಿ ರಾಜ್ಯ ಸರ್ಕಾರ ಮಂಡಿಸುತ್ತಿರುವ ಮುಂಗಡ ಪತ್ರದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ, ನೂರಾರು ಕೋಟಿ ರೂ. ಹಣವನ್ನು ಮೀಸಲಿಡುತ್ತಿದೆ. ಹಿಂದುಳಿದ ವರ್ಗಗಳಲ್ಲಿ ಬರುವ ಹಲವಾರು ಜಾತಿ ಸಮುದಾಯಗಳಿಗೆ ಪ್ರತ್ಯೇಕವಾಗಿ ಸಮುದಾಯ ಭವನ ಕಟ್ಟಲು, ಅವರ ಗುರುಪೀಠ ಸ್ಥಾಪನೆ, ಕಟ್ಟಡ ನಿರ್ಮಾಣಕ್ಕಾಗಿ ೩-೪ ಕೋಟಿ ಅನುದಾನವನ್ನು ನೀಡುತ್ತಿದೆ. ಇಂತಹ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಹ ಗೊಂದಲಿಗರ ಸಮುದಾಯ ಹಿಂದುಳಿದಿದೆ. ಕಳೆದ ವರ್ಷದಲ್ಲಿ ರಾಜ್ಯಸರ್ಕಾರದ ಮುಖ್ಯಮಂತ್ರಿಗಳ ಮನವೊಲಿಸಿ ಶ್ರೀಘಂಡರಾಪುರದಲ್ಲಿ ಗೊಂದಲಿಗ ಸಮುದಾಯದ ವಾರಕರಿಗಳು ತಂಗಲು ಸಮುದಾಯ ಭವನ ನಿರ್ಮಾಣಕ್ಕಾಗಿ ೧ ಕೋಟಿ ರೂಪಾಯಿ ಅನುದಾನವನ್ನು ಪಡೆದು ಕೊಂಡಿರುವುದಷ್ಟೆ ಸಮಾಧಾನಕರ ಅಂಶವಾಗಿದೆ.

ಪ್ರಸ್ತುತ ಇಂತಹ ಸನ್ನಿವೇಶದಲ್ಲಿ ಅಲ್ಪಸ್ವಲ್ಪ ಶಿಕ್ಷಣ ಪಡೆದುಕೊಂಡು ಆರ್ಥಿಕವಾಗಿ ಮುಂದುವರೆದ ನಾಯಕತ್ವದ ಗುಣಗಳನ್ನು ಹೊಂದಿರುವ ಸಮುದಾಯದ ಕೆಲವು ವ್ಯಕ್ತಿಗಳು ಸ್ಥಳೀಯ ಕ್ಷೇತ್ರದಲ್ಲಿ ಪ್ರಬಲವಾಗಿರುವ ಪಕ್ಷಗಳಲ್ಲಿ ಗುರುತಿಸಿಕೊಳ್ಳುವುದರ ಜೊತೆಗೆ ಸ್ಥಳೀಯ ಚುನಾವಣೆಗಳಲ್ಲಿ ಮೀಸಲಾತಿ ಸೌಲಭ್ಯಗಳ ಅಡಿಯಲ್ಲಿ, ಅಲ್ಲಲ್ಲಿ ಗ್ರಾಮ ಪಂಚಾಯತಿ, ಪುರಸಭೆ, ತಾಲೂಕ ಪಂಚಾಯತಿ ಜಿಲ್ಲಾ ಪಂಚಾಯಿತಿ ಚುನಾವಣೆಗಳಲ್ಲಿ ಸ್ಪರ್ಧಿಸಲು ಅವಕಾಶಗಳನ್ನು ಪಡೆದುಕೊಂಡಿದ್ದು, ಅದರಲ್ಲಿ ಕೆಲವರು ಮಾತ್ರ ಚುನಾಯಿತರಾಗಿದ್ದಾರೆ. ಗ್ರಾಮ ಪಂಚಾಯತಿಯಲ್ಲಿ ೯ ಪುರುಷರು ೫ ಸ್ತ್ರೀಯರು, ಪುರಸಭೆ/ ನಗರ ಸಭೆಗಳಲ್ಲಿ ೨, ಜಿಲ್ಲಾಪಂಚಾಯತ ಕ್ಷೇತ್ರದಲ್ಲಿ ೫ ಪುರುಷರು ಆಯ್ಕೆಗೊಂಡಿದ್ದಾರೆ. ೨೦೧೦ರಲ್ಲಿ ಶ್ರೀಮತಿ ಭಾರತಿ ಅರುಣ ಗೊಂದಳಿಯವರು ಹಳಿಯಾಳ ಪುರಸಭೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ರಾಜಕೀಯವಾಗಿ ಗೊಂದಲಿಗರ ಸಮುದಾಯದ ಪ್ರತಿಯೊಬ್ಬರು, ತಮ್ಮದೇ ಆದ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಬೇಕು. ಇತರೆ ಸಮುದಾಯದವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರಿಂದಲೂ ನಾಯಕನಾಗಲು ಅರ್ಹವ್ಯಕ್ತಿ ಎಂಬ ಪಟ್ಟ ಪಡೆಯಬೇಕು. ನಾವು ಹಿಂದುಳಿದ ಸಮುದಾಯದ ಎಲ್ಲರ ಏಳ್ಗೆಗಾಗಿ ಶ್ರಮಿಸುತ್ತೇವೆ ಎಂಬ ಛಲ ಬರಬೇಕು. ಅಂದರೆ ಮಾತ್ರ ಗೊಂದಲಿಗರು ರಾಜಕೀಯವಾಗಿ ಬೆಳೆಯಲು ಸಾಧ್ಯವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಬಸವಾ ಕೆ.ಡಿ., ಸೂಕ್ಷ್ಮ ಅರ್ಥಶಾಸ್ತ್ರ, ಪು. ೧-೧೬, ೨೦೧೦
೨. ತಾರಾಮತಿ ಬಿ., ಕರ್ನಾಟಕ ಖಾಟಿಕ್ ಸಮುದಾಯ(ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಪು. ೧೨೬
೩. ಪೋತೆ ಎಚ್.ಟಿ., ಅಲೆಮಾರಿಗಳ ಸ್ಥಿತಿಗತಿ, (ಸಂ.) ಸ.ಚಿ. ರಮೇಶ, ಪು. ೧೫೨, ೨೦೦೫
೪. ಪ್ರಭಾಕರ ಎ.ಎಸ್., ಅದೇ, ಪು. ೯೫
೫. ಪೋತೆ ಎಚ್.ಟಿ., ಅದೇ, ಪು. ೧೬೨
೬. ಬಸವರಾಜ ಮಲಶೆಟ್ಟಿ, ಅದೇ, ಪು. ೧೯೨
೭. ಗಂಗಾಧರ ದೈವಜ್ಞ, ಗೊಂದಲಿಗರು, ಪು. ೭೨, ೨೦೧೦
೮. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ ಪು. ೧೪೪, ೧೯೯೩
೯. ರಾಮಚಂದ್ರಗೌಡ ಹಿ.ಶಿ., ಅಲೆಮಾರಿಗಳ ಸ್ಥಿತಿಗತಿ, (ಸಂ.) ಸ.ಚಿ. ರಮೇಶ, ಪು. ೧೫೨, (ಆಶಯ ಭಾಷಣ) ೨೦೦೫

ಅಧ್ಯಾಯ - ೬

# ಆಧುನಿಕತೆ ಮತ್ತು ಗೊಂದಲಿಗರು

೬.೧ ಆಧುನಿಕತೆ ಮತ್ತು ಸಾಮಾಜಿಕ ಬದುಕು

೬.೨ ಆಧುನಿಕತೆ ಶಿಕ್ಷಣ ಮತ್ತು ಉದ್ಯೋಗ

೬.೩ ಆಧುನಿಕತೆ ಮತ್ತು ಆರ್ಥಿಕ ಜೀವನ

೬.೪ ಆಧುನಿಕತೆ ರಾಜಕೀಯ ಜೀವನ

೬.೪.೧ ಆಯೋಗಗಳು ಮತ್ತು ಗೊಂದಲಿಗರು

೬.೪.೨ ಮೀಸಲಾತಿ ಮತ್ತು ಸರ್ಕಾರಿ ಸೌಲಭ್ಯಗಳು

೬.೪.೩ ಹೋರಾಟ ಪ್ರಯತ್ನಗಳು

೬.೫ ಆಧುನಿಕತೆ ಮತ್ತು ಧಾರ್ಮಿಕತೆ

೬.೫.೧ ವಾರಕರಿ ಸಂಪ್ರದಾಯ

ಅಧ್ಯಾಯ ಆರು

# ಆಧುನಿಕತೆ ಮತ್ತು ಗೊಂದಲಿಗರು

ಜೀವನೋಪಾಯಕ್ಕಾಗಿ ಕೈಗೊಂಡ ವೃತ್ತಿಗಳು ಅದರ ಪರಿಣಾಮದಿಂದ ಕಂಡುಬಂದ ಅತಂತ್ರ ಬದುಕಿನಿಂದಾಗಿ ಅಲೆಮಾರಿ ಜೀವನವನ್ನು ಮುಂದುವರೆಸಿಕೊಂಡು ಬಂದ ಹಲವಾರು ಸಮುದಾಯ ಗಳು, ಶತ-ಶತಮಾನಗಳಿಂದಲೂ ಒಂದು ರೀತಿ ಕಡೆಗಣಿಸಿದಂತಹ ಸಮುದಾಯಗಳೇ ಆಗಿವೆ. ಜಾತಿ ಆಧಾರಿತ ಭಾರತೀಯ ಸಮಾಜದಲ್ಲಿ ವೃತ್ತಿ ನಿರ್ಬಂಧನೆಯ ಜೊತೆಗೆ ಮೇಲು-ಕೀಳು, ಸ್ಪರ್ಶ-ಅಸ್ಪರ್ಶ, ಶ್ರೇಷ್ಠ-ಕನಿಷ್ಠ ಎನ್ನುವ ತಾರತಮ್ಯಕ್ಕೂ ಎಡೆ ಮಾಡಿಕೊಟ್ಟಿದೆ.

ಒಂದು ಕಾಲದಲ್ಲಿ ಉಪಜೀವನಕ್ಕೆ ಆಧಾರವಾಗಿದ್ದ ಅಲೆಮಾರಿಗಳ ಕುಲಕಸಬುಗಳು ಇಂದು ಕಲೆಗಳು ಆಧುನಿಕತೆಯ ಪ್ರಭಾವಕ್ಕೆ ಸಿಲುಕಿ ಮೂಲೆ ಗುಂಪಾಗಿವೆ. ಅನಕ್ಷರಸ್ಥರು ತೋರಿಸುವ ಕಲೆಗಳು ಅಲಕ್ಷ್ಯಕ್ಕೆ ಗುರಿಯಾಗಿವೆ. ನಿಶ್ಚಿತ ಆದಾಯ ತರುವ ಸಂಪನ್ಮೂಲಗಳಿಲ್ಲದೇ ಅಲೆಮಾರಿಗಳು ಕಂಗಾಲಾಗಿದ್ದಾರೆ. ಆಧುನೀಕರಣ, ನಗರೀಕರಣ, ವೈಜ್ಞಾನಿಕರಣದ ಪರಿಣಾಮದಿಂದಾಗಿ ಅಲೆಮಾರಿಗಳ ವೃತ್ತಿಗಳು ಪಲ್ಲಟಗೊಂಡಿವೆ. ಹಾಗೆಯೇ ಜೀವನ ವಿಧಾನದಲ್ಲಿಯೂ ಅನೇಕ ಮಾರ್ಪಡುಗಳಾಗಿರುವುದು ಗೋಚರಿಸುತ್ತಿದೆ.

"ಅಲೆಮಾರಿ ಸಮುದಾಯಗಳ ಇಂದಿನ ಸ್ಥಿತಿ ಪಾರಂಪರಿಕ ಸಾಮಾಜಿಕ ಸಂರಚನೆಯ ವಿನ್ಯಾಸ ದಲ್ಲಿ ಇದ್ದುದಕ್ಕಿಂತ ಬೇರೆ ತೆರನಾಗಿವೆ. ಅಂದರೆ ಅಲೆಮಾರಿ ಸಮುದಾಯಗಳಿಗೆ ಆಧುನಿಕ ಪೂರ್ವ ಸಮಾಜದಲ್ಲಿ ನಿರ್ದಿಷ್ಟ ಕರ್ತವ್ಯ ಮತ್ತು ಹಕ್ಕುಗಳಿದ್ದವು. ಈ ಕರ್ತವ್ಯಗಳು ಒಟ್ಟು ಸಮಾಜ ರಚನೆಯಲ್ಲಿ ಸಮುದಾಯಗಳ ಪರಸ್ಪರ ಕೊಡು-ಕೊಳ್ಳುವಿಕೆಯ ವಿಧಾನದಲ್ಲಿಯೇ ಅಸ್ತಿತ್ವವನ್ನು

ಕಂಡು ಕೊಂಡಿದ್ದವು. ಆ ಸಮಯದಲ್ಲಿ ಭಾಷೆಯಾಗಲೀ, ಸಮುದಾಯವಾಗಲೀ ತಮ್ಮ ಅಸ್ತಿತ್ವವನ್ನು ಪ್ರತ್ಯೇಕವಾಗಿ ಉಳಿಸಿ-ಬೆಳೆಸುವ ಪ್ರತ್ಯೇಕ ಪ್ರಯತ್ನಗಳ ಅಗತ್ಯವಿರದೆ ಸಮಾಜದ ರಚನೆಯೊಳಗಡೆಯೇ ಉಳಿಯುವಿಕೆ-ಬೆಳೆಯುವಿಕೆಗೆ ಸ್ಥಿರವಾದ ಸ್ಥಿತಿಯಿತ್ತು. ಅಲೆಮಾರಿ ಸಮುದಾಯಗಳು ಯಾವುದೇ ಭಾಷಿಕ ಸಮುದಾಯಗಳಿಗೆ ಸೇರಿದ್ದರೂ, ಪ್ರತಿಯೊಂದು ಸಮುದಾಯಗಳೊಂದಿಗೆ ನಿರ್ದಿಷ್ಟ ಅಗತ್ಯ ಪೂರೈಕೆಗಳ ಹಿನ್ನೆಲೆಯಲ್ಲಿ ವ್ಯವಹರಿಸುತ್ತಿದ್ದರು. ಆದರೆ ಆಧುನಿಕ ಸಮಾಜದ ಅಗತ್ಯದ ಉತ್ಪಾದನೆ, ವಿತರಣೆ ಕೇಂದ್ರೀಕೃತ ವ್ಯವಸ್ಥೆಯಿಂದ ನಿರ್ವಹಿಸಲ್ಪಡುತ್ತಿದ್ದು. ಸಮುದಾಯ ಘಟಕಗಳ ಪರಸ್ಪರ ಅವಲಂಬನೆಯ ಅಗತ್ಯ ಕಳೆದುಕೊಂಡಿದೆ. ಇಂತಹ ಸಂದರ್ಭದಲ್ಲಿ ಅಲೆಮಾರಿ ಸಮುದಾಯಗಳು ಯಾವದೇ ಸಮಾಜದ ಅಗತ್ಯದ ಭಾಗವಾಗಿ ಉಳಿದಿಲ್ಲ. ಹೀಗಾಗಿ ಅಲೆಮಾರಿ ಸಮುದಾಯಗಳು ತಮ್ಮ ಸಾಮಾಜಿಕ ಅಸ್ತಿತ್ವವನ್ನು ಕಳೆದುಕೊಂಡಿವೆ. ಪ್ರಧಾನ ಸಮಾಜ ವ್ಯವಸ್ಥೆಯಿಂದ ಪರೋಕ್ಷವಾಗಿ ಹೊರಹಾಕಲ್ಪಟ್ಟ ಈ ಸಮುದಾಯಗಳು ಬಹುತೇಕವಾಗಿ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಅಸ್ತಿತ್ವವಿಲ್ಲದ ದುರ್ಬಲ ಸಮುದಾಯಗಳು".[೧] ಈ ಹಿನ್ನೆಲೆಯಲ್ಲಿ ತೀವ್ರ ಗತಿಯಲ್ಲಿ ಕಂಡುಬರುತ್ತಿರುವ ಸಾಮಾಜಿಕ ಬದಲಾಣೆಗಳ ಸಂದರ್ಭಗಳಲ್ಲಿ ಅಲೆಮಾರಿ ಸಮುದಾಯಗಳು ಕಂಡುಬರುತ್ತಿರುವ ಬದಲಾವಣೆಯ ಪರಿಧಿಯಿಂದಾಚೆಗೆ ಉಳಿದುಕೊಂಡಿವೆಯೇನೋ, ಎನ್ನುವ ಸ್ಥಿತಿಯು ಕಂಡುಬರುತ್ತಿದೆ.

ಪ್ರಚಲಿತ ಇಂದಿನ ಸಂದರ್ಭದಲ್ಲಿ ಅಲೆಮಾರಿಗಳು ಮುಖ್ಯವಾಹಿನಿಗೆ ಸೇರಬೇಕೇ? ಬೇಡವೇ? ಎನ್ನುವ ಚರ್ಚೆಗೆ ಒಳಪಟ್ಟ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟಕರ. ಏಕೆಂದರೆ ಅಸಮಾನತೆಯನ್ನು ಸಾಂಸ್ಥಿಕರಿಸಿದ ಭಾರತೀಯ ಸಮಾಜದಲ್ಲಿ ಮೇಲ್ಜಾತಿಯ/ಮೇಲ್ವರ್ಗದ ಜನರು ಆಧುನೀಕರಣದ ಪ್ರಕ್ರಿಯೆಗೆ ಒಳಗಾಗುವುದು, ಕಷ್ಟಕರವಾಗದು. ಇದೇ ಸಂದರ್ಭದಲ್ಲಿ ಕೆಳಜಾತಿಯ/ಕೆಳವರ್ಗದ ಅನೇಕ ಬುಡಕಟ್ಟು ಅಲೆಮಾರಿ ಸಮುದಾಯಗಳು ಆಧುನೀಕರಣಕ್ಕೆ ಒಳಗಾಗುವುದಾಗಲೀ ಅದರ ಲಾಭ ಪಡೆಯುವುದಕ್ಕಾಗಲಿ ಕಷ್ಟಕರವಾದುದು ಅಂತಾ ಹೇಳಿದರೆ ತಪ್ಪಾಗಲಾರದು. ಕಾರಣ ಆರ್ಥಿಕ ಸ್ಥಿರತೆ ಹಾಗೂ ವ್ಯವಹರಿಸಲು ಬೇಕಾದ ಭಾಷಾ ಜ್ಞಾನದ ಕೊರತೆಯಿಂದಾಗಿ ಅಲೆಮಾರಿಗಳು ಆಧುನೀಕರಣದ ಲಾಭವನ್ನು ಪಡೆದುಕೊಳ್ಳುವುದು ಸಾಧ್ಯವಾಗದ ಸ್ಥಿತಿ.

ಇಂತಹ ಸಂದಿಗ್ಧ ಸನ್ನಿವೇಶದಲ್ಲಿ ರಾಷ್ಟ್ರಮಟ್ಟದಲ್ಲಿ ಅಲೆಮಾರಿ-ವಿಮುಕ್ತ ಬುಡಕಟ್ಟು ಸಮಸ್ಯೆಗಳ ಕುರಿತು ಇತ್ತೀಚಿನ ದಿನಗಳಲ್ಲಿ ರಾಷ್ಟ್ರೀಯ ಮಟ್ಟದಲ್ಲಿ ಸಮಾನ ಮನಸ್ಕರ ಗಮನ ಸೆಳೆದವರಲ್ಲಿ ಪ್ರಮುಖವಾಗಿ ಜ್ಞಾನಪೀಠ ಪುರಸ್ಕೃತರಾದ ಸಾಹಿತಿ ಮಹಾಶ್ವೇತಾದೇವಿ ಅವರು "ಬುಡಕಟ್ಟು ಸಮುದಾಯಗಳು ಮುಖ್ಯವಾಹಿನಿಗೆ ಬರಲೇಬೇಕು. ನಗರ ಪ್ರದೇಶಗಳ ಜೊತೆ ನಿರಂತರ ಸಂಪರ್ಕ ಹೊಂದಬೇಕು. ಅಲ್ಲಿಯ ವಹಿವಾಟುಗಳನ್ನು ಅರ್ಥಮಾಡಿಕೊಳ್ಳಬೇಕು. ಬುಡಕಟ್ಟು ಜನರು ಸ್ಪರ್ಧಾತ್ಮಕ ಜಗತ್ತಿನಲ್ಲಿ ಸೆಣಸಲು ತನ್ನನ್ನೂ ತಾನು ಸಿದ್ಧಮಾಡಿ ಕೊಳ್ಳಬೇಕೆಂದರೆ ಅವರಿಗೆ ಹೊರ ಜಗತ್ತಿನ ನಿತ್ಯದ ಬೆಳವಣಿಗೆಗಳ ಅರಿವು ಅಗತ್ಯ. ತಮ್ಮ ಕೌಶಲ್ಯಗಳ ಜೊತೆ ಹೊರ ಜಗತ್ತಿನ ವೇಗದೊಡನೆ ಲಯ ಕಂಡುಕೊಳ್ಳಬೇಕು. ಭಾರತದ ಇವತ್ತಿನ ಆಧುನಿಕ ಸಂವೇದನೆಗಳು ಅವರ ಅರಿವಿನ ಭಾಗ

ವಾಗಬೇಕು. ಮುಖ್ಯವಾಹಿನಿಯ ವೈರುದ್ಧದ ಚಲನೆಗಳನ್ನು ಅರಿತು ಬಾಳಬೇಕು. ಅದಕ್ಕೆ ಪೂರಕವಾಗಿ ಬುಡಕಟ್ಟು ಜನರು ಶಿಕ್ಷಣ ಪಡೆಯಬೇಕು. ಆಡಳಿತದ ವಿವಿಧ ಹಂತಗಳಲ್ಲಿ ಪಾಲ್ಗೊಳ್ಳುವಂತಾಗಬೇಕು" ಎಂಬುದು ಮಹಾಶ್ವೇತಾದೇವಿಯವರ ಆಶಯವಾಗಿದೆ.

ಸ್ವಾತಂತ್ರ್ಯದ ನಂತರದ ಅವಧಿಯಲ್ಲಿ ಮಹಾಶ್ವೇತಾದೇವಿಯವರ ಆಶಯಗಳಿಗೆ ಅನುಗುಣವಾಗಿ ಸೌಲಭ್ಯಗಳು-ಅವಕಾಶಗಳು ಬುಡಕಟ್ಟು ಅಲೆಮಾರಿ ಸಮುದಾಯಗಳಿಗೆ ಲಭ್ಯವಾಗಿವೆಯೇ? ಅವರು ಪಡೆದುಕೊಂಡಿದ್ದಾರೆಯೇ? ಆಧುನಿಕತೆಯ ಮುಖ್ಯವಾಹಿನಿಗೆ ಅವರು ಬಂದಿದ್ದಾರೆಯೇ? ಎನ್ನುವ ಪ್ರಶ್ನೆಗಳು ಅಥವಾ ವಿಷಯಗಳು ಬಹಳ ಚರ್ಚೆಗೆ ಒಳಪಟ್ಟಿವೆ.

ಪ್ರಸ್ತುತ ಸಂದರ್ಭದಲ್ಲಿ ಅಲೆಮಾರಿಗಳ ಸ್ಥಿತಿ-ಗತಿಯನ್ನು ಅವಲೋಕಿಸಿದಾಗ ಅವರಲ್ಲಿ ಇನ್ನೂ ಅಲೆಮಾರಿತನದ ಸ್ಥಿತಿಯನ್ನು ಕಾಣುತ್ತಿದ್ದೇವೆ. ಯಾವುದೇ ಒಂದು ಸಮುದಾಯ ಅಭಿವೃದ್ಧಿ ಹೊಂದಬೇಕಾದರೆ ನಿಶ್ಚಿತವಾದ ನೆಲೆ, ಆರ್ಥಿಕವಾಗಿ ಅವಲಂಬನೆ, ಸಾಮಾಜಿಕವಾದ ಭದ್ರತೆ ಮುಖ್ಯವಾಗಿ ಬೇಕು. ಇದು ಇಲ್ಲದಿದ್ದಾಗ ಅಂತಹ ಸಮುದಾಯಗಳು ಅಲೆಮಾರಿಗಳಾಗಿಯೇ ಉಳಿಯುತ್ತವೆ. ಇಂದಿನ ಆಧುನಿಕ ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಅಲೆಮಾರಿ ಸಮುದಾಯಗಳು ಸಾಧ್ಯವಾದಷ್ಟು ಸ್ಥಿರವಾಸದ ನೆಲೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿವೆ. ಅದರಲ್ಲಿ ಕೆಲವು ಸಮುದಾಯಗಳು ಮುಖ್ಯವಾಗಿ ಪ್ರದರ್ಶಕ ಕಲೆಗಳನ್ನು ಅನುಸರಿಸುತ್ತಿರುವ ಅಲೆಮಾರಿಗಳು, ಯಾವುದಾದರೊಂದು ಊರನ್ನೂ ತಮ್ಮ ಸ್ಥಿರವಾಸ ಮಾಡಿಕೊಂಡಿದ್ದರೂ ವರ್ಷದ ಹೆಚ್ಚಿನ ಭಾಗವನ್ನು ಅಲೆಮಾರಿಗಳಾಗಿಯೇ ಕಳೆಯುವವರನ್ನು ಕಾಣುತ್ತೇವೆ. ಅಂದರೆ ಬದಲಾದ ಇಂದಿನ ಸಂದರ್ಭದಲ್ಲಿ ಅಲೆಮಾರಿ ಸಮುದಾಯಗಳು ಸ್ಥಿರ ನೆಲೆಯನ್ನು ಕಂಡುಕೊಳ್ಳಲು ಹವಣಿಸುತ್ತಿದ್ದು, ಪರಿಣಾಮ ಅನೇಕ ಅಲೆಮಾರಿಗಳು ಆಧುನಿಕತೆಯ ಪ್ರಕ್ರಿಯೆಗಳಿಗೆ ಸ್ಪಂದಿಸುತ್ತಿದ್ದಾರೆ.

**ಆಧುನಿಕತೆ ಮತ್ತು ಗೊಂದಲಿಗರು**

ನೂರಾರು ವರ್ಷಗಳಿಂದ ಅಲೆಮಾರಿಗಳಾಗಿ ಶಾಸ್ತ್ರ-ಶಕುನ ಹೇಳುತ್ತಾ, ಗೊಂದಲದ ಆರಾಧನೆ, ದೇವಿಯ ಹಾಡು, ಕಥೆ, ಮಹಿಮೆಗಳನ್ನು ಹಾಡುತ್ತಾ, ಆ ಮೂಲಕ ಭಿಕ್ಷೆ ಬೇಡಿ, ಗುಡಿ-ಗುಂಡಾರ ಗಳಲ್ಲಿಯೇ ಜೀವನ ನಡೆಸುತ್ತಾ ಬಂದ ಗೊಂದಲಿಗರು ಆಧುನಿಕತೆಯತ್ತ ವಾಲಿದ್ದಾರೆ. ಈ ಮೊದಲು ಇತರ ಅಲೆಮಾರಿಗಳಂತೆ ಇವರೂ ಕಾಡು-ಮೇಡು ಅಲೆಯುತ್ತಾ ಗಡ್ಡೆ ಗೆಣಸು, ಹಕ್ಕಿ-ಪಕ್ಷಿ-ಪ್ರಾಣಿಗಳನ್ನು ತಿನ್ನುತ್ತಾ ಕುಲ ಕಸಬಿನಡಿಯಲ್ಲಿ ಜೀವನ ದೂಡಿದವರು. ನಾಗರೀಕತೆಯ ಗಾಳಿಯ ಪ್ರಭಾವದಿಂದ ನಾವೇಕೆ ಹಿಂದುಳಿಯಬೇಕು ಎಂಬ ವಿವೇಕ, ತಿಳುವಳಿಕೆಯ ಹಿನ್ನೆಲೆಯಲ್ಲಿ ಮೂಲ ಕಸಬುಗಳಿಗೆ ಭಿನ್ನವಾದ ವೃತ್ತಿಯಲ್ಲಿ ತೊಡಗುತ್ತಾ, ಜೀವನ ವಿಧಾನವನ್ನು ಮಾರ್ಪಡಿಸಿ ಕೊಳ್ಳುತ್ತಾ ಅಲೆಮಾರಿ ಸಮುದಾಯಗಳಲ್ಲಿಯೇ ಸುಸಂಸ್ಕೃತ ಸಮುದಾಯದವರಾಗಿ ಮಾರ್ಪಡಲು ಪ್ರಯತ್ನಿಸುತ್ತಿದ್ದಾರೆ. ಬದಲಾವಣೆ ನಿಸರ್ಗ ನಿಯಮ. ಸಜೀವಿಗಳಾದ ಮಾನವ ಜೀವಿಗಳನ್ನು ಒಳಗೊಂಡ ಸಮಾಜವು ನಿರಂತರ ಬದಲಾವಣೆಗೆ ಒಳಪಡುತ್ತದೆ. ಸಮಾಜದಲ್ಲಿ ಕಂಡು ಬರುವ

ಯಾವದೇ ರೀತಿಯ ಬದಲಾವಣೆಗಳು ಆ ಸಮಾಜದಲ್ಲಿಯ ಸಂಘ–ಸಂಸ್ಥೆಗಳ ಮೇಲೆ ಪ್ರಭಾವ ಬೀರುವಂತೆ ಅಲ್ಲಿಯ ಸಾಮುದಾಯಿಕ ವ್ಯವಸ್ಥೆಯ ಮೇಲೂ ಬದಲಾವಣೆಗೆ ಎಡೆಮಾಡಿಕೊಡುತ್ತವೆ. ಈ ಹಿನ್ನೆಲೆಯಲ್ಲಿ ನಗರೀಕರಣ, ಆಧುನೀಕರಣ, ಕೈಗಾರಿಕರಣ, ಮತ್ತು ಇತರ ಜಾತಿ–ಜನಾಂಗಗಳ ಪ್ರಭಾವಗಳಿಂದಾಗಿ ಗೊಂದಲಿಗರ ಸಮುದಾಯದ ಸಾಮಾಜಿಕ–ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳಲ್ಲಿ ಬದಲಾವಣೆಯ ಅಂಶಗಳು ಕಂಡು ಬರುತ್ತಿವೆ. ವಸತಿ, ಊಟ, ವೇಷ–ಭೂಷಣ, ಉಡುಗೆ–ತೊಡುಗೆಗಳಲ್ಲಿ, ಅನುಸರಿಸುತ್ತಿರುವ ವೃತ್ತಿಗಳ ಹಿನ್ನೆಲೆಯಲ್ಲಿ ಗಮನಾರ್ಹ ಬದಲಾವಣೆಗಳು ಗೋಚರಿಸತೊಡಗಿವೆ.

ಅಖಿಲೇಶ್ವರ ಜ್ಞಾ ರವರು ತಮ್ಮ ಗ್ರಂಥದಲ್ಲಿ ಹೇಳಿರುವಂತೆ – "ಆಧುನೀಕರಣವು ಐತಿಹಾಸಿಕವಾಗಿ ತಪ್ಪಿಸಿಕೊಳ್ಳಲಾಗದ ಹಾಗೂ ಬಿಡಿಸಿಕೊಳ್ಳಲೂ ಆಗದ ಸಾಮಾಜಿಕ ಬದಲಾವಣೆಯ ಸಂಬಂಧವಾದ ಪ್ರಕ್ರಿಯೆ. ಈ ಪ್ರಕ್ರಿಯೆಯು ನಿರಂತರವಾದುದು".[೩]

ಸಿರಿಲ್ ಇ ಬ್ಲ್ಯಾಕ್ ಅವರು – "ಪ್ರಪಂಚದ ಎಲ್ಲ ಸಮಾಜಗಳೂ ಇಚ್ಚೆಯಿಂದಲೂ ಅಥವಾ ಇಚ್ಚೆಗೆ ವಿರುದ್ಧವಾಗಿಯೋ ತಮ್ಮ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸಂಸ್ಥೆಗಳ ಆಧುನೀಕರಣಕ್ಕೆ ಒಳಗಾಗಲೇಬೇಕು".[೪] ಬರ್ಕ ರವರು : "ಆಧುನೀಕರಣವು ಕಳೆದ ಕೆಲವು ಶತಮಾನಗಳಿಂದೀಚೆಗೆ ವಿಶ್ವದಲ್ಲಿ ಸಂಭವಿಸಿದ ತಾಂತ್ರಿಕ ಅನ್ವೇಷಣೆಗಳು, ಆರ್ಥಿಕ–ಸಾಮಾಜಿಕ ಪರಿಸ್ಥಿತಿಗಳಿಗೆ ಹೊಸ ಆಯಾಮಗಳನ್ನು ಒದಗಿಸುವ ಪರಿವರ್ತನೆಯಾಗಿರುತ್ತದೆ"[೫] ಎನ್ನುವಂತೆ ಆಧುನೀಕರಣವು ಒಂದು ಸಂಕೀರ್ಣವಾದ ಪರಸ್ಪರ ಸಂಭಂಧಿತ ಪರಿವರ್ತನೆಯನ್ನುಂಟು ಮಾಡುವ ಒಂದು ಜೀವನವಿಧಾನ ವಾಗಿದ್ದು, ಸಾಮಾನ್ಯವಾಗಿ ವಿವಿಧ ಕಾರಣಗಳಿಂದ ಆಗಬಹುದಾದ ಏಳಿಗೆ, ಮುನ್ನಡೆ, ಪ್ರಗತಿ, ಹಾಗೂ ಅಭ್ಯುದಯವನ್ನು ಆಧುನೀಕರಣವು ಸೂಚಿಸುತ್ತದೆ. ಆಧುನೀಕರಣ ಪ್ರಕ್ರಿಯೆಯು ಸಮಾಜದಲ್ಲಿ ಕಂಡುಬರುವ ಬದಲಾವಣೆಯನ್ನು ಎತ್ತಿ ತೋರಿಸುತ್ತದೆ. ಅಂದರೆ ಆಧುನೀಕರಣದಿಂದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ವ್ಯವಸ್ಥೆಗಳಲ್ಲಿ ಗತಿಶೀಲತೆಯು ಕಂಡುಬರುತ್ತದೆ. ಆಧುನೀಕರಣದ ಪ್ರಭಾವದಿಂದ ಗೋಚರಿಸುವ ಬದಲಾವಣೆಯ ಪ್ರಕ್ರಿಯೆಗೆ ಸಹಜವಾಗಿ–ಅನಿವಾರ್ಯವಾಗಿ ಪ್ರತಿಯೊಂದು ಜನಾಂಗ ಮತ್ತು ಸಮುದಾಯಗಳು ಒಳಗಾಗಲೇಬೇಕು.

### ೬.೧. ಆಧುನಿಕತೆ ಮತ್ತು ಸಾಮಾಜಿಕ ಜೀವನ

ಮಾನವ ತನ್ನ ಸಹಜೀವಿಗಳ–ಒಡನಾಡಿಗಳ ಜೊತೆಗೂಡಿ ರೂಪಿಸಿಕೊಂಡ ಬದುಕೇ ಸಾಮಾಜಿಕ ಜೀವನ. ಅದಕ್ಕೆ ಪೂರಕವಾಗಿ ಹಲವಾರು ಸಂಘ ಸಮೂಹ–ಸಾಂಸ್ಥಿಕ ವ್ಯವಸ್ಥೆಗಳನ್ನು ರೂಪಿಸಿಕೊಂಡು ಬೆಳೆಯಿಸಿಕೊಂಡು ಬಂದಿದ್ದಾನೆ. ಈ ದಿಶೆಯಲ್ಲಿ ಪ್ರತಿಯೊಂದು ಸಮುದಾಯ ಪಾರಂಪರಿಕವಾಗಿ ತಮ್ಮದೇ ಆದ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿದ್ದು ಬದಲಾವಣೆಯ ಪ್ರಸ್ತುತ ಸನ್ನಿವೇಶದಲ್ಲಿ ಸಾಮಾಜದಲ್ಲಿ ಆಗುವ ಬದಲಾವಣೆಗಳು ಸಾಮುದಾಯಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರುತ್ತವೆ.

ಈ ಕುರಿತಂತೆ ಸಾಮಾಜಿಕ ಬದಲಾವಣೆಯ ಕುರಿತು ಹಲವಾರು ಸಮಾಜಶಾಸ್ತ್ರಜ್ಞರು ತಮ್ಮದಾದ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ.

**ಮುಜುಮ್‌ದಾರ ಅವರು** : "ಸಮಾಜದ ಕಾರ್ಯದ ವಿಧಾನಗಳಲ್ಲಿ ಹಾಗೂ ಜನರ ಜೀವನ ದಲ್ಲಿ ಪ್ರಾಚೀನತೆಯ ಬದಲಾಗಿ ನವೀನತೆಯ ನಿರ್ಮಾಣವಾಗುವ ಪ್ರಕ್ರಿಯೆಯೇ ಸಾಮಾಜಿಕ ಬದಲಾವಣೆ".[೬]

**ಕೆ. ಡೇವಿಸ್ ಅವರು** : "ಸಾಮಾಜಿಕ ಸಂಘಟನೆಯ ರಚನೆ ಮತ್ತು ಕಾರ್ಯಗಳಲ್ಲಾಗುವ ಬದಲಾವಣೆಯೇ ಸಾಮಾಜಿಕ ಬದಲಾವಣೆ".[೭]

**ಗಿಲಿನ್ ಮತ್ತು ಗಿಲಿನ್** : "ಯಾವ ಒಂದು ಜೀವನದ ವಿಧಾನದಲ್ಲಿ ಪರಿವರ್ತನೆಯಾದರೆ ಅಂದರೆ ಆಚಾರ–ವಿಚಾರ, ಸಂಪ್ರದಾಯ ಜೀವನದಲ್ಲಿ ಕಂಡು ಬರುವ ಪರಿವರ್ತನೆ ಸಾಮಾಜಿಕ ಬದಲಾವಣೆ".[೮]

**ಎಚ್ ಎಮ್ ಜಾನ್ಸನ್** : "ಸಾಮಾಜಿಕ ರಚನೆಯಲ್ಲಿ ಉಂಟಾಗುವ ಬದಲಾವಣೆಯೇ ಸಾಮಾಜಿಕ ಬದಲಾವಣೆ".[೯] ಪರಿವರ್ತನೆಯು ಸರ್ವವ್ಯಾಪಕವಾದ ಒಂದು ಪ್ರಕ್ರಿಯೆಯಾಗಿದ್ದು, ಆದಿಯಿಂದಲೂ ಸಮಾಜವು ನಿರಂತರವಾಗಿ ಬದಲಾಗುತ್ತಲೇ ಇದೆ. ಅವ್ಯಾಹತವಾಗಿ ಈ ಪರಿವರ್ತನೆ ಸಂಭವಿಸು ತ್ತಿದ್ದುದರಿಂದಲೇ ಮಾನವನು ಇಂದು ಅನಾಗರೀಕ ಸ್ಥಿತಿಯಿಂದ ನಾಗರಿಕ ಸ್ಥಿತಿಗೆ ಬರಲು ಮತ್ತು ಇನ್ನೂ ಹೆಚ್ಚಿನ ಪರಿಪೂರ್ಣತೆಯ ಸ್ಥಿತಿಗೆ ಸಾಗಲು ಸಾಧ್ಯವಾಗಿದೆ. ಕಾರಣ ಯಾವುದೇ ಸಮಾಜ ವಾದರೂ ಕೂಡಾ ಪರಿವರ್ತನೆಗೆ ಒಳಪಡದೇ ಜಡವಾಗಿರಲು ಸಾಧ್ಯವಿಲ್ಲ.

ಆಧುನಿಕತೆ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ತೀವ್ರ ತೆರನಾದ ಬದಲಾವಣೆಗಳು ಗೋಚರಿಸುತ್ತಿದ್ದು ವಿಶಿಷ್ಟ–ವಿಭಿನ್ನ ಸಾಂಸ್ಕೃತಿಕ ಪರಂಪರೆಯ ಹಿನ್ನೆಲೆಯಲ್ಲಿ ಗೊಂದಲಿಗರು ರೂಪಿಸಿಕೊಂಡ ಪಾರಂಪರಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಹಲವಾರು ಸ್ಥಿತ್ಯಂತರಗಳು ಕಂಡುಬರುತ್ತಿವೆ. ಆಧುನಿಕತೆಯ ಬದಲಾವಣೆಯ ಈ ಸಂದರ್ಭದಲ್ಲಿ ತಮ್ಮ ಪರಂಪರಾಗತ ಜೀವನವಿಧಾನಕ್ಕೆ ಅನುಗುಣವಾಗಿ ಆಧುನಿಕ ಜೀವನವನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ಅಂದರೆ ಆಧುನಿಕ ತಂತ್ರಜ್ಞಾನ, ಸಮೂಹ–ಸಂವಹನ ಮಾಧ್ಯಮಗಳ ಬಳಕೆ ಮಾಡಿ ಕೊಳ್ಳುತ್ತಿರುವುದರಿಂದ ಆಧುನಿಕತೆಯ ಗಾಳಿಯು ಈ ಜನರ ಮೇಲೂ ತೀವ್ರವಾದ ಪ್ರಭಾವ ಬೀರಿದ್ದು, ಇನ್ನುಳಿದ ಸಮುದಾಯದವರಂತೆ ಈ ಸಮುದಾಯವು ಪರಿವರ್ತನೆಗೊಳ್ಳುತ್ತಿದೆ. ಸಮಕಾಲೀನ ಸಮಾಜದ ಆಚಾರ–ವಿಚಾರ, ಸಂಪ್ರದಾಯ ಗಳಿಂದ ಇಂದಿನ ಯುವ ಪೀಳಿಗೆಯವರು ಸಾಕಷ್ಟು ಪ್ರಭಾವಿತರಾಗಿದ್ದು, ಹಿಂದಿನ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಆಸಕ್ತಿಯನ್ನು ಕಾಣುತ್ತಿಲ್ಲ.

ಗೊಂದಲಿಗ ಸಮುದಾಯವು ಪರಂಪರಾಗತ ಜೀವನ ಶೈಲಿಯ ಜೊತೆಗೆ ಆಧುನಿಕತೆಯ ಪ್ರಭಾವಗಳಿಗೆ ಒಳಗಾಗಿ ತಮ್ಮ ಸಾಮಾಜಿಕ–ವ್ಯಕ್ತಿಗತ ಜೀವನ ವಿಧಾನದಲ್ಲಿ ಹಲವಾರು ಮಾರ್ಪಾಡು ಗಳನ್ನು ಮಾಡಿಕೊಳ್ಳುವುದರ ಜೊತೆಗೆ ಆ ರೀತಿಯ ಜೀವನ ಶೈಲಿಯನ್ನು ಅನುಸರಿಸುತ್ತಿದ್ದಾರೆ.

**ಕುಟುಂಬ :** ಪರಂಪರಾನುಗತವಾಗಿ ಮಾತೃಪ್ರಧಾನ ಕುಟುಂಬದ ಹಿನ್ನೆಲೆಯನ್ನು ಹೊಂದಿರುವ ಗೊಂದಲಿಗರು ಕಾಲಾಂತರದಲ್ಲಿ ಪಿತೃಪ್ರಧಾನ ಕೌಟಂಬಿಕ ವ್ಯವಸ್ಥೆಯನ್ನು ಹೊಂದಿದ್ದಾರೆ. ರಕ್ತ ಸಂಬಂಧದ ಬಲವತ್ತತೆಯಿಂದ ಅವಿಭಕ್ತ ಕುಟುಂಬಗಳನ್ನೇ ಹೊಂದಿದ್ದ ಗೊಂದಲಿಗರಲ್ಲಿ ಇತ್ತಿತ್ತಲಾಗಿ ವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ. ದಂಪತಿಗಳು ತಮ್ಮ ಸಂಸಾರಿಕ ಜೀವನವನ್ನು ಹೊಂದಿದ್ದರೂ, ರಕ್ತ ಸಂಬಂಧದ ಇತರ ಸದಸ್ಯರೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದು, ಪ್ರತಿಯೊಂದು ಕೌಟಂಬಿಕ ಕಾರ್ಯಕ್ರಮಗಳ ಸಂದರ್ಭದಲ್ಲಿ ಒಟ್ಟುಗೊಡಿಯೇ ಆಚರಿಸುತ್ತಾರೆ. ಇನ್ನೂ ಅಲೆಮಾರಿಗಳಾಗಿರುವ ಗೊಂದಲಿಗರು ತಮ್ಮ ಪಾರಂಪರಿಕ ವೃತ್ತಿ ನಿರ್ವಹಣೆಯ ಸಂದರ್ಭದಲ್ಲಿ ಅಣ್ಣ-ತಮ್ಮಂದಿರು-ಚಿಕ್ಕಪ್ಪ ಜೊತೆಗೊಡಿಯೇ ಊರೂರು ಅಲೆಯುತ್ತಿರುವುದು ಕಂಡು ಬರುವುದನ್ನು ಗಮನಿಸಿದಾಗ ಕೌಟಂಬಿಕ ಸಂಬಂಧಗಳು-ರಕ್ತಸಂಬಂಧದ ಭಾವನೆಗಳು ಇನ್ನೂ ಅವರಲ್ಲಿ ತೀವ್ರ ವಾಗಿಯೇ ಉಳಿದುಕೊಂಡಿವೆ. ಜೊತೆಗೆ ಸಾಮುದಾಯಿಕ ಭಾವನೆಗಳು ಅಷ್ಟೇ ಬಲವಾಗಿದೆ.

ಕುಟುಂಬದ ಕಾರ್ಯ ಚಟುವಟಿಕೆಗಳಿಗೆ ಸಂಬಂಧಪಟ್ಟಂತೆ ಗಮನಿಸಿದಾಗ ಗೊಂದಲಿಗರಲ್ಲಿಯ ಕೌಟುಂಬಿಕ ಚಟುವಟಿಕೆಗಳು ಪಾರಂಪರಿಕವಾಗಿಯೇ ಮುಂದುವರೆದುಕೊಂಡೆ ಬಂದಿವೆಯಾದರೂ, ಕೆಲವೊಂದು ಬದಲಾವಣೆಗಳನ್ನು ಗುರುತಿಸಬಹುದಾಗಿದೆ. ವಿಭಕ್ತ ಕುಟುಂಬಗಳು ಕಂಡು ಬರುತ್ತಿದ್ದರೂ, ಬಲವಾದ ಸಂಬಂಧಗಳನ್ನು ಹೊಂದಿರುವ ಗೊಂದಲಿಗರಲ್ಲಿ ವಿರಾಮದ ಅವಧಿಯಲ್ಲಿ ಒಟ್ಟು ಗೂಡಿಯೇ ಸಾಯಂಕಾಲದ ಅವಧಿಯಲ್ಲಿ ಮನೆಯ ಮುಂದೆ ಕುಳಿತುಕೊಂಡು ಹರಟೆಯಲ್ಲಿ ತೊಡಗುವುದು, ಧಾರ್ಮಿಕ ವ್ರತಾಚಾರಣೆಗಳಿಗೆ ಸಂಬಂಧಪಟ್ಟಂತೆ ಸ್ಥಳೀಯ ದೇವರುಗಳಿಗೆ ನಡೆದುಕೊಳ್ಳುವುದರ ಜೊತೆಗೆ ಉಪವಾಸ ವ್ರತಗಳನ್ನು ಮಾಡುತ್ತಾರಲ್ಲದೇ ಸಾಮೂಹಿಕವಾಗಿಯೇ ಧಾರ್ಮಿಕ ಕಾರ್ಯಗಳನ್ನು ನೇರವೇರಿಸುತ್ತಾರೆ. ಹಿರಿಯರ ಸಂರಕ್ಷಣೆಯ ಬಗೆಗೂ ಅತ್ಯಂತ ಕಳಕಳಿಯ ಭಾವನೆಗಳನ್ನು ಹೊಂದಿದ್ದು ಮಕ್ಕಳ ಆರೈಕೆಯ ವಿಷಯದಲ್ಲಿ ಈ ಅಂಶವು ಕಂಡು ಬಂದರೂ, ಅನೇಕ ಗೊಂದಲಿಗರು ತಮ್ಮ ವೃತ್ತಿಯ ಸಂದರ್ಭದಲ್ಲಿ ಅವರನ್ನು ಕರೆದುಕೊಂಡು ಹೋಗುತ್ತಾರೆ.

**ವಿವಾಹ :** ಆಧುನಿಕತೆಯ ಪರಿಣಾಮದಿಂದ ಹಾಗೂ ಅನ್ಯ ಸಮುದಾಯಗಳ ಆಚರಣೆಗಳ ಪ್ರಭಾವದ ಹಿನ್ನೆಲೆಯಲ್ಲಿ ಗೊಂದಲಿಗರ ವೈವಾಹಿಕ ಆಚರಣೆಗಳಿಗೆ ಸಂಬಂಧಪಟ್ಟಂತೆ ಸಾಕಷ್ಟು ಬದಲಾವಣೆಗಳು ಕಂಡುಬರುತ್ತಿವೆ. ಬಾಲ್ಯವಿವಾಹ ಪದ್ಧತಿಯು ಸಾಮಾನ್ಯವಾಗಿದ್ದ ಗೊಂದಲಿಗರಲ್ಲಿ ತೊಟ್ಟಿಲ ವಿವಾಹಗಳು ನಡೆಯುತ್ತಿದ್ದವು, ಇಂದು ಅದು ಸಂಪೂರ್ಣವಾಗಿ ಕಣ್ಮರೆಯಾಗಿದೆ. ತೆರ (ಕನ್ಯಾಶುಲ್ಕ) ಕೊಡುವ ಪದ್ಧತಿಯು ಸಹ ಕಡಿಮೆಯಾಗಿದೆ. ಗೊಂದಲಿಗರು ತಮ್ಮ ಸಮುದಾಯದ ಸಮಾವೇಶದಲ್ಲಿ ಸಾಮುದಾಯಿಕವಾಗಿ ಬಾಲ್ಯವಿವಾಹವನ್ನು ನಿಷೇದಿಸಿದ್ದಾರೆ. ಹಾಗೆಯೇ ಅದರ ಬಗ್ಗೆ ತಿಳುವಳಿಕೆ ಹೇಳುವ ಪ್ರಯತ್ನವನ್ನು ಮಾಡಿದ್ದಾರೆ. ತೆರ ಕೊಡುವುದಕ್ಕೆ ಸಂಬಂಧಪಟ್ಟಂತೆ ೧೬.೦೫.೧೯೪೫ರಲ್ಲಿ ನವಲಗುಂದದಲ್ಲಿ ನಡೆದ ೩ನೇ ಸಭೆಯಲ್ಲಿ ಹೆಣ್ಣಿಗೆ ೫೦ ರೂ.ಗಳ ತೆರ ಮತ್ತು ೧೦ ರೂ.ಗಳನ್ನು ದೈವಕ್ಕೆ ಕೊಡಬೇಕೆಂದು ಠರಾವು ಮಾಡಿದ್ದರಿಂದ ತೆರ ಪದ್ಧತಿಯು

ಮುಂದುವರೆದಿದೆ ಎಂದು ಹೇಳಿದರೂ, ಇತ್ತಿತ್ತಲಾಗಿ ಅದರ ಆಚರಣೆ ಕಡಿಮೆಯಾಗಿದೆ. ಸಮುದಾಯದಲ್ಲಿ ವರದಕ್ಷಿಣೆ ಪದ್ಧತಿಯು ಸಂಪೂರ್ಣ ನಿಷೇದವಿದ್ದರೂ, ವೈವಾಹಿಕ ಸಂಬಂಧಗಳು ಏರ್ಪಡುವ ಸಂದರ್ಭದಲ್ಲಿ ಅಲ್ಲಲ್ಲಿ ವರದಕ್ಷಿಣೆಯ ವ್ಯವಹಾರಗಳು ಶ್ರೀಮಂತ ಕುಟುಂಬಗಳಲ್ಲಿ ನಡೆಯುತ್ತಿರುವುದು ಕಂಡುಬರುತ್ತಿದೆ. ವರದಕ್ಷಿಣೆ ಸಮಸ್ಯೆ ಇತರೆ ಸಮುದಾಯಗಳಂತೆ ಅಷ್ಟು ತೀವ್ರವಾದ ಸಮಸ್ಯಾತ್ಮಕ ರೀತಿಯಲ್ಲಿ ಬಳಕೆಯಲ್ಲಿ ಇಲ್ಲ. ವರದಕ್ಷಿಣೆಯ ಬದಲಾಗಿ ವರೋಪಚಾರದ ಬಗ್ಗೆ ಮಾತುಕತೆಗಳು ನಡೆಯುತ್ತವೆ. ವಧು-ವರರ ಮನೆಯವರು ಪರಸ್ಪರ ಏನೇನು ಕೊಡಬೇಕು ಎಂಬುದನ್ನು ಪಂಚರ ಸಮ್ಮುಖದಲ್ಲಿಯೇ ನಿರ್ಧರಿಸಿ ಅದನ್ನು ಲಿಖಿತ ದಾಖಲೆಗಳಲ್ಲಿ ನಮೂದಿಸುತ್ತಾರೆ. ಮದುವೆ ನಿಶ್ಚಯ ಹಾಗೂ ವಧು-ವರರಿಗೆ ಪರಸ್ಪರ ಕೊಡಬೇಕಾಗಿರುವ ವಿವರಗಳ ಬಗ್ಗೆ ಕೆಲ ಊರಿನ ಗೊಂದಲಿಗರು ಒಂದು ದಾಖಲಾತಿ ಪುಸ್ತಕ ನಿರ್ವಹಿಸುತ್ತಾರೆ. ಯಾರು ಏನನ್ನು ಕೊಡಬೇಕು ಎಂಬುದನ್ನು ವಿವಾಹದ ನಿಶ್ಚಯದ ಸಂದರ್ಭದಲ್ಲಿ ಮೂರು ಪ್ರತಿಗಳಲ್ಲಿ ದಾಖಲಿಸಿ ವಧು-ವರರಿಗೆ ಒಂದೊಂದು ಪ್ರತಿಯನ್ನು ಕೊಟ್ಟು, ಒಂದು ಪ್ರತಿಯನ್ನು ದಾಖಲಾತಿ ಪುಸ್ತಕದಲ್ಲಿ ಇಟ್ಟುಕೊಳ್ಳುತ್ತಾರೆ.

ಐದು ದಿನಗಳವರೆಗೆ ನಡೆಯುತ್ತಿದ್ದ ವಿವಾಹಕ್ಕೆ ಸಂಬಂಧಿಸಿದ ಆಚರಣೆಗಳು ಖರ್ಚು-ವೆಚ್ಚದ ದೃಷ್ಟಿಯಿಂದ ಹಾಗೂ ಇತರೆ ಸಮುದಾಯಗಳ ಪ್ರಭಾವದಿಂದ ಒಂದೇ ದಿನದಲ್ಲಿ ಮದುವೆ ಮಾಡಿ ಮುಗಿಸುತ್ತಿದ್ದಾರೆ. 'ವೀಳ್ಯಶಾಸ್ತ್ರ'ವನ್ನು ಅತ್ಯಂತ ಶಾಸ್ತ್ರೋಕ್ತವಾಗಿ ನಿರ್ವಹಿಸುತ್ತಿದ್ದರು. ಅದಕ್ಕೂ ಆಧುನಿಕತೆಯ ಸ್ಪರ್ಶವಾಗಿದೆ. ಸ್ಥಿತಿವಂತರು ಈ 'ವೀಳ್ಯಶಾಸ್ತ್ರ'ವನ್ನು ಆಡಂಬರದಿಂದ ಪಂಚರ ಸಮ್ಮುಖದಲ್ಲಿ ಕಲ್ಯಾಣ ಮಂಟಪ ಅಥವಾ ಮನೆಯಲ್ಲಿ ಮಾಡುವುದರ ಜೊತೆಗೆ ವಿಡಿಯೋ ಚಿತ್ರೀಕರಣ ಹಾಗೂ ಛಾಯಾಚಿತ್ರಗಳನ್ನು ತೆಗೆಸುವ ಪದ್ಧತಿಯನ್ನು ಕಾಣುತ್ತಿದ್ದೇವೆ. ಆರ್ಥಿಕವಾಗಿ ಪ್ರಬಲರಾದ ಕುಟುಂಬಗಳು ವಿವಾಹಗಳನ್ನು ಹೆಚ್ಚಾಗಿ ಕಲ್ಯಾಣ ಮಂಟಪಗಳಲ್ಲಿಯೇ ನಡೆಸುತ್ತಿದ್ದು, ಅರಿಷಿಣ ಹಚ್ಚುವುದು, ಸುರಗಿ ನೀರು, ಕುಂಬಾರರ ಮನೆಯಿಂದ ಐರಾಣಿ ತರುವ ಶಾಸ್ತ್ರವನ್ನು ಮುಂಜಾನೆಯ ಸಂದರ್ಭದಲ್ಲಿ ನೇರವೇರಿಸಿ, ನಿಗದಿತ ವೇಳೆಗೆ ತಾಳಿಕಟ್ಟುವ ಶಾಸ್ತ್ರವನ್ನು ಬ್ರಾಹ್ಮಣ ಪುರೋಹಿತರ ಮಂತ್ರೋಚ್ಚಾರಣೆಯ ಮೂಲಕ ನೇರವೇರಿಸಲಾಗುತ್ತದೆ. ಮದುವೆ ಸಂದರ್ಭದಲ್ಲಿ ವರ ಸೂಟು-ಬೂಟುಗಳನ್ನು ಹಾಕಿಕೊಂಡರೆ, ವಧು ರೇಷ್ಮೆ ಸೀರೆಯನ್ನು ಧರಿಸುತ್ತಾರೆ. ಈ ಸಂದರ್ಭದಲ್ಲಿ ವಿಡಿಯೋ ಚಿತ್ರೀಕರಣ ಹಾಗೂ ಛಾಯಾಚಿತ್ರಗಳನ್ನು ತೆಗೆಸುತ್ತಿದ್ದಾರೆ. ಇತರೆ ಸಮುದಾಯದವರ ಜೊತೆಗಿನ ಒಡನಾಟ ಹಾಗೂ ಸಾಮುದಾಯಿಕ ಅಸ್ತಿತ್ವವನ್ನು ಎತ್ತಿತೋರಿಸುವ ದೃಷ್ಟಿಯಿಂದ ಆಡಂಬರದ ವಿವಾಹಗಳು ನಡೆಯುತ್ತಿರುವದು ಕಂಡುಬರುತ್ತದೆ. ಮಂಗಲ ಕಾರ್ಯಗಳಲ್ಲಿ ಇತರೆ ಸಮುದಾಯದವರನ್ನು ಅಹ್ವಾನಿಸುತ್ತಿದ್ದಾರೆ. ಹೀಗಾಗಿ ಮದುವೆ ಊಟವು ಸಸ್ಯಾಹಾರದ್ದಾಗಿರುತ್ತದೆ. ಮದುವೆಗೆ ಸಂಬಂದಿಸಿದ ಅನೇಕ ಮಹತ್ವದ ಬದಲಾವಣೆಗಳು ಗೊಂದಲಿಗರಲ್ಲಿ ಕಂಡುಬರುತ್ತಿವೆ.

**ವಧು-ವರರ ಸಮಾವೇಶ** : ತಮ್ಮದೇ ಆದ ರಾಜ್ಯಮಟ್ಟದ, ಜಿಲ್ಲಾಮಟ್ಟದ ಸಂಘಟನೆಯ ಮೂಲಕ ಸಮುದಾಯದ ಆರ್ಥಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ನಗರ ಪ್ರದೇಶಗಳಲ್ಲಿ ವಧು-ವರರ ಸಮಾವೇಶಗಳನ್ನು ಏರ್ಪಡಿಸಿ, ಈ ಸಂದರ್ಭದಲ್ಲಿ ವಧು-ವರರು ಪರಸ್ಪರ ಆಯ್ಕೆ ಮಾಡಿಕೊಂಡರೆ,

ಕುಟುಂಬಗಳ ಪೋಷಕರ ನಡುವೆ ಮಾತುಕತೆ ಏರ್ಪಡಿಸಿ ಸಂಬಂಧಗಳನ್ನು ಬೆಳೆಸಲು ಅವಕಾಶ ಮಾಡಿಕೊಡುವುದರ ಜೊತೆಗೆ ವಧು-ವರರು ಹಾಗೂ ಅಯಾ ಕುಟುಂಬದವರು ಪರಸ್ಪರ ಇಚ್ಛೆ ಪಟ್ಟರೆ, ಅಲ್ಲಿಯೇ ಎಲ್ಲರ ಸಮ್ಮುಖದಲ್ಲಿ ಶಾಸ್ತ್ರೋಕ್ತ, ವಿಧಿ-ವಿಧಾನಗಳ ಮೂಲಕ ವಿವಾಹಗಳನ್ನು ಏರ್ಪಡಿಸುತ್ತಾರೆ. ವಿವಾಹದ ಖರ್ಚು-ವೆಚ್ಚಗಳು ಹೆಚ್ಚುತ್ತಿರುವುದರಿಂದ, ಸರಳ ವಿವಾಹದ ಬಗ್ಗೆ ಜನರಲ್ಲಿ ಅರಿವು ಮೂಡಿಸುವ ಸಲುವಾಗಿ ಸಾಮೂಹಿಕ ವಿವಾಹಗಳನ್ನು ಏರ್ಪಡಿಸುತ್ತಿದ್ದಾರೆ. ಇತರೆ ಸಮುದಾಯದ ಸೇವಾ ಮನೋಭಾವನೆ ಹೊಂದಿದವರು ಏರ್ಪಡಿಸುವ ಸಾಮೂಹಿಕ ವಿವಾಹ ಸಮಾರಂಭಗಳಲ್ಲಿ ಅನೇಕ ಗೊಂದಲಿಗರು ವಿವಾಹ ಮಾಡಿಕೊಳ್ಳುತ್ತಿರುವುದನ್ನು ಕಾಣುತ್ತೇವೆ.

**ಜನನ-ಋತುಮತಿಶಾಸ್ತ್ರ** : ಗೊಂದಲಿಗರಲ್ಲಿ ಹೆರಿಗೆಯನ್ನು ಸೂಲಗಿತ್ತಿಯರೇ ಮಾಡಿಸುತ್ತಿದ್ದರು. ಇಂದು ಹೆರಿಗೆಗಾಗಿ ಆಸ್ಪತ್ರೆಗಳಿಗೆ ಹೋಗುತ್ತಿರುವುದು ಕಂಡುಬರುತ್ತದೆ. ಅಲೆಮಾರಿಗಳು ಆರ್ಥಿಕವಾಗಿ ದುರ್ಬಲರಾದರು ಮಾತ್ರ ಮನೆಗಳಲ್ಲಿಯೇ ಹೆರಿಗೆ ಮಾಡಿಸುತ್ತಾರೆ. ಹೆಣ್ಣು ಗರ್ಭಿಣಿಯಾದ ತಿಂಗಳಿನಿಂದಲೇ ವೈದ್ಯರನ್ನು ಸಂಪರ್ಕಿಸಿ ಅವರಿಂದ ಸಲಹೆಗಳನ್ನು ಪಡೆದುಕೊಳ್ಳುತ್ತಿದ್ದಾರೆ. ನಿರಂತರ ವಾಗಿ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳುತ್ತಿದ್ದಾರೆ. ಮಗುವಿನ ಜನನವನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸುವ ಗೊಂದಲಿಗರು ನಾಮಕರಣದ ಸಂದರ್ಭದಲ್ಲಿ ತಮ್ಮ ಸುತ್ತಲಿನ ನೆರೆಹೊರೆಯ ಕುಟುಂಬದವರನ್ನು ಕರೆಯಿಸಿ ಪಾರಂಪರಿಕ ವಿಧಿ-ವಿಧಾನಗಳನ್ನು ಅನುಸರಿಸಿ ಹೆಸರಿಡುತ್ತಿದ್ದಾರೆ. ಶ್ರೀಮಂತರು ನಾಮಕರಣವನ್ನು ಅತ್ಯಂತ ವೈಭವೀಕರಿಸಿ ನಡೆಸುತ್ತಾರೆ. ಪ್ರತಿವರ್ಷ ಮಗುವಿನ ಹುಟ್ಟಿದ ಹಬ್ಬ ಆಚರಿಸುವರು.

ಋತುಮತಿಯಾದವರಿಗೆ ಪ್ರತ್ಯೇಕವಾಗಿ 'ಗೂಡ್ಲು ಕೂಡುವ ಶಾಸ್ತ್ರ'ಗಳ ಆಚರಣೆಯು ಕಡಿಮೆ ಯಾಗಿದೆ. ಹೆಣ್ಣು ಋತುಮತಿಯಾದರೆ ಹತ್ತಿರದ ಸಂಬಂಧಿಕರನ್ನು ಕರೆಯಿಸಿ ಕುಟುಂಬದಲ್ಲಿಯೇ ವಿಧಿಬದ್ಧವಾದ ಕಾರ್ಯಕ್ರಮಗಳನ್ನು ಸರಳವಾಗಿ ಆಚರಿಸುತ್ತಿದ್ದಾರೆ.

**ಜೀವನಶೈಲಿ** : ಗೊಂದಲಿಗರು ತಮ್ಮ ಜೀವನ ವಿಧಾನದಲ್ಲಿ ಸಾಕಷ್ಟು ಮಾರ್ಪಡುಗಳಿಗೆ ಒಳಗಾಗಿದ್ದಾರೆ. ಮೇಲ್ನೋಟದಲ್ಲಿಯೇ ಸ್ತ್ರೀ-ಪುರುಷರ ವೇಷ-ಭೂಷಣಗಳು ಆಗಿರುವ ಬದಲಾವಣೆಗಳನ್ನು ಸೂಚಿಸುತ್ತವೆ. ಪ್ಯಾಷನ್ ಲೋಕ ಸೃಷ್ಟಿಸಿರುವ ವಿಭಿನ್ನ ರೀತಿಯ ವೇಷ-ಭೂಷಣಗಳ ಮೋಹಕ್ಕೆ ಒಳಗಾಗಿರುವ ಯುವ ಜನಾಂಗದ ಸ್ತ್ರೀ-ಪುರುಷರು ಆಧುನಿಕ ವೇಷ-ಭೂಷಣಗಳನ್ನು ಹಾಕಿಕೊಳ್ಳು ತ್ತಿದ್ದಾರೆ. ಗೊಂದಲಿಗರು ತಮ್ಮ ಮಾತೃ ಭಾಷೆ ಮರಾಠಿಯನ್ನು ಮನೆಯೊಳಗಡೆ ಅಷ್ಟೇ ಬಳಸಿ ಇತರೆ ಸಮುದಾಯದವರ ಜೊತೆಗೆ ಸ್ಥಳೀಯವಾದ ಭಾಷೆಗಳಲ್ಲಿ ವ್ಯವಹರಿಸುತ್ತಾರೆ. ವೃತ್ತಿ ನಿರ್ವಹಣೆಯ ಅನೂಕೂಲತೆಗಾಗಿ ೩-೪ ಇತರೆ ಭಾಷೆಗಳನ್ನು ಮಾತನಾಡಲು ಕಲಿತುಕೊಂಡಿದ್ದಾರೆ.

ಅನೇಕ ಗೊಂದಲಿಗರು ಇತರೆ ಸಮುದಾಯದವರ ಮಧ್ಯದಲ್ಲಿಯೇ ಮನೆಗಳನ್ನು ಕಟ್ಟಿ ಕೊಂಡಿರುವುದ ರಿಂದ ತಮ್ಮ ನೆರೆಹೊರೆಯವರ ಜೊತೆಗೆ ಅತ್ಯಂತ ನಯ ವಿನಯ-ಸೌಜನ್ಯದಿಂದ ವರ್ತಿಸುತ್ತಾರೆ. ಶ್ರೀಮಂತರು, ಉದ್ಯೋಗದಲ್ಲಿರುವವರು ಸುಸಜ್ಜಿತವಾದ ಮನೆಗಳನ್ನು ಕಟ್ಟಿಕೊಂಡು

ಮನೆಯ ಪ್ರವೇಶದ ಸಂದರ್ಭದಲ್ಲಿ ಆಮಂತ್ರಣ ಪತ್ರಿಕೆಗಳ ಮೂಲಕ ತಮ್ಮ ಸಂಬಂಧಿಕರು, ಬಂಧು-ಬಳಗ, ಸ್ನೇಹಿತರನ್ನು ಕರೆಯಿಸುವುದರ ಜೊತೆಗೆ ತಮ್ಮ 'ಗುಪ್ತಚಾರ' ಪತ್ರಿಕೆಯಲ್ಲೂ ಜಾಹೀರಾತು ಕೊಡುತ್ತಾರೆ. ಗೃಹಪ್ರವೇಶವನ್ನು ಅದ್ದೂರಿಯಾಗಿ ಶಾಸ್ತ್ರೋಕ್ತವಾಗಿ ನೇರಿಸುತ್ತಾರೆ. ಮನೆಗೆ ಆಧುನಿಕ ಗೃಹೋಪಯೋಗಿ ವಸ್ತುಗಳನ್ನು ಖರೀದಿಸಿರುತ್ತಾರೆ. ತಮ್ಮ ಭಾಂಡೆ ವ್ಯಾಪಾರದ ಅನೂಕೂಲತೆಗಾಗಿ ಕೆಲವರು ಮಿನಿಲಾರಿಗಳನ್ನು ಬಳಸುತ್ತಿದ್ದಾರೆ. ಕುಟುಂಬಗಳನ್ನು ಹೊರತು ಪಡಿಸಿದರೆ ಹೆಚ್ಚು ಕಡಿಮೆ ಗೊಂದಲಿಗರು ಚಿಕ್ಕದಿರಲಿ-ದೊಡ್ಡದಿರಲಿ ಟಿ.ವಿ.ಯನ್ನು ಹೊಂದಿದ್ದಾರೆ. ವ್ಯಾಪಾರದ ಅನೂಕೂಲಕ್ಕಾಗಿ, ದೂರದಲ್ಲಿರುವ ತಮ್ಮ ಸಂಬಂಧಿಕರ ಜೊತೆ ಸಂಪರ್ಕ ಬೆಳೆಸಲು ಮೊಬೈಲ್ ಪೋನ್‌ಗಳನ್ನು ಹೊಂದಿರುವುದು ಕಂಡುಬರುತ್ತದೆ.

ಗೊಂದಲಿಗರು ಆಧುನಿಕ ತಂತ್ರಜ್ಞಾನದ ಪ್ರಭಾವಕ್ಕೆ ಒಳಗಾಗಿದ್ದು, ಇನ್ನೊಂದೆಡೆಗೆ ಪರಂಪರೆಯನ್ನು ಮಾತ್ರ ಸಂಪೂರ್ಣವಾಗಿ ಬಿಟ್ಟಿರದೇ ಆಧುನಿಕತೆಗನುಗುಣವಾಗಿ ಅಲ್ಲಲ್ಲಿ ಅಲ್ಪ-ಸ್ವಲ್ಪ ಮಾರ್ಪಾಡುಗಳನ್ನು ಮಾಡಿಕೊಂಡು ಆ ಹಿನ್ನೆಲೆಯಲ್ಲಿ ತಮ್ಮ ಬದುಕನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಈ ರೀತಿಯ ಬದಲಾವಣೆಗಳು ಸಮುದಾಯದಲ್ಲಿಯ ಮೇಲುಸ್ತರದ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡುಬಂದರೆ, ಕೆಳಸ್ತರದಲ್ಲಿರುವ ಕುಟುಂಬಗಳಲ್ಲಿ ಇನ್ನು ಅಷ್ಟು ತೀವ್ರವಾದ ಬದಲಾವಣೆಗಳು ಕಂಡುಬರುತ್ತಿಲ್ಲ.

### ೬.೨. ಆಧುನಿಕತೆ ಮತ್ತು ಶಿಕ್ಷಣ ಮತ್ತು ಉದ್ಯೋಗ

ಆಧುನಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಪಾರಂಪರಿಕ ಜ್ಞಾನ-ತಿಳುವಳಿಕೆಗಳ ಜೊತೆಗೆ ಸಂಕೀರ್ಣ-ಆಧುನಿಕ ಸ್ಪರ್ಧಾತ್ಮಕ ಜಗತ್ತಿನಲ್ಲಿಯ ವ್ಯವಹಾರಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕಾದರೆ ಶಿಕ್ಷಣ ಅವಶ್ಯಕವಾದುದು. "ಶಿಕ್ಷಣವು ಒಂದು ಸಾಮಾಜಿಕ ಬದಲಾವಣೆಯ ನಿಯೋಗಿಯಾಗಿದೆ. ಇದು ಸಾಮಾಜಿಕ ಚಲನೆಯ ವಾಹಕವಾಗಿದ್ದು, ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುತ್ತದೆ. ಶಿಕ್ಷಣವು ವ್ಯಕ್ತಿಯ ಅಂತಸ್ತಿನ ನಿರ್ಧಾರಕ ಅಂಶವಾಗಿದೆ. ಒಂದು ದೇಶದ ಜನಾಂಗದ ಸರ್ವತೋಮುಖ ಅಭಿವೃದ್ಧಿಯು ಶಿಕ್ಷಣವನ್ನು ಅವಲಂಬಿಸಿದೆ. ಶಿಕ್ಷಣವಿಲ್ಲದ ವ್ಯಕ್ತಿ ವ್ಯಯಕ್ತಿಕವಾಗಿಯೇ ಆಗಲಿ, ಸಾಮಾಜಿಕವಾಗಿಯೇ ಆಗಲಿ ಉನ್ನತಿಯಾಗಲು ಸಾಧ್ಯವಿಲ್ಲ. ವ್ಯಕ್ತಿಯ ಮತ್ತು ಸಮಾಜದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣವಾಗುತ್ತದೆ. ಎಲ್ಲಕಿಂತ ಮುಖ್ಯವಾಗಿ ವ್ಯಕ್ತಿ ಸಮಾಜದಲ್ಲಿ ಮತ್ತು ಸಮಾಜದ ಮುಖ್ಯವಾಹಿನಿಯಲ್ಲಿ ಮಿಳಿತವಾಗ ಬೇಕಾದರೆ ಶಿಕ್ಷಣ ಅತ್ಯಂತ ಅಗತ್ಯವಾಗಿದೆ."[೧೦] ಅಂದರೆ ಶೈಕ್ಷಣಿಕತೆಯು ಪಗ್ರತಿಯ ದ್ಯೋತಕವೆಂದು ಪರಿಗಣಿಸಲಾಗಿದ್ದು, ಆಧುನೀಕರಣ, ಜಾಗತೀಕರಣ, ತಾಂತ್ರಿಕತೆ, ಪಾಶ್ಚಾತ್ಯರ ಭೌತಿಕ ಸೌಲಭ್ಯಗಳ ಪ್ರಭಾವದ ಅಡಿಯಲ್ಲಿ ಯಾವದೇ ಸಮುದಾಯ ಹೊಸ ಬದುಕಿನಡೆಗಿನ ಚಲನೆಗೆ ಶಿಕ್ಷಣವು ಅವಶ್ಯಕ ವಾದುದಾಗಿದೆ. ಪರಿಣಾಮ ಆಧುನಿಕ ಔಪಚಾರಿಕ ಶಿಕ್ಷಣ ವ್ಯವಸ್ಥೆಯು ಜಾರಿಗೆ ಬಂದ ಮೇಲೆ ಪ್ರತಿಯೊಂದು ಸಮುದಾಯಗಳು ಅವರವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳಿಗನುಗುಣವಾಗಿ ಶಿಕ್ಷಣವನ್ನು ಪಡೆಯುವತ್ತ ದಾಪುಗಾಲು ಹಾಕುತ್ತಿವೆ.

ಗೊಂದಲಿಗರು ಜೀವನೋಪಾಯಕ್ಕಾಗಿ ಹೆಂಡತಿ-ಮಕ್ಕಳನ್ನು ಕರೆದುಕೊಂಡು ಊರೂರು ಅಲೆಯುತ್ತಾ ಅಲ್ಪ-ಸ್ವಲ್ಪ ಆದಾಯದಲ್ಲಿ ಜೀವನ ನಿರ್ವಹಣೆ ಮಾಡುತ್ತಾ ಬಂದವರು. ಜೀವನ ನಿರ್ವಹಣೆಯೇ ಅಸಾಧ್ಯವಾದಗ ಮಕ್ಕಳ ಶಿಕ್ಷಣದ ಬಗ್ಗೆ ಇವರು ಎಂದೂ ತಲೆಕೆಡಿಸಿಕೊಂಡವರಲ್ಲ. ಅಲೆಮಾರಿಗಳಾಗಿದ್ದ ಇವರಿಗೆ ಶಿಕ್ಷಣ ಎಂಬುದು ಮರೀಚಿಕೆಯಾಗಿತ್ತು. ಇತ್ತೀಚೆಗೆ ಅಲ್ಲಲ್ಲಿ ನೆಲೆಯೂರಿ ವ್ಯಾಪಾರ-ವ್ಯವಹಾರದಲ್ಲಿ ತೊಡಗಿರುವುದರಿಂದ ಮತ್ತು ಆರ್ಥಿಕವಾಗಿ ಸ್ಥಿರತೆಯನ್ನು ಕಾಯ್ದುಕೊಳ್ಳುತ್ತಿದ್ದುದರಿಂದ ತಮ್ಮ ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುತ್ತಿದ್ದಾರೆ. ಕೆಲವರು ದಶಕಗಳ ಹಿಂದೆ ಶಿಕ್ಷಣವನ್ನು ಪಡೆದುಕೊಳ್ಳುವ ಪ್ರಯತ್ನ ಮಾಡಿದ್ದರಿಂದ ಅನೇಕರು ಸರ್ಕಾರಿ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದಾರೆ. ಅದು ಬೆರಳೆಣಿಕೆಯಷ್ಟು ಮಾತ್ರ. ಅನೇಕ ಪುರುಷರು ತಮ್ಮ ಉದ್ಯೋಗಕ್ಕೆ ಬೇಕಾಗುವಷ್ಟು ೩-೪ನೇ ತರಗತಿಯವರೆಗೆ ವ್ಯಾಸಂಗ ಮಾಡಿ, ಕುಟುಂಬದ ವೃತ್ತಿಯಲ್ಲಿ ತೊಡಗಿಕೊಂಡಿದ್ದಾರೆ. ಮಹಿಳೆಯರು ಶಿಕ್ಷಣದಿಂದ ತೀರಾ ದೂರವಿರುವುದು ಕಂಡುಬರುತ್ತದೆ. ಪಾರಂಪರಿಕ ವೃತ್ತಿಗಳಿಂದ ಜೀವನ ನಿರ್ವಹಣೆ ಕಷ್ಟಕರ ಎಂಬದನ್ನು ಅರಿತ ಮೇಲೆ ಇವರು ಶಿಕ್ಷಣಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಮಹಾಶ್ವೇತಾದೇವಿಯವರ ಮೂಲ ಆಶಯ- ಸಮಾಜದ ಮುಖ್ಯವಾಹಿನಿಗೆ ಅಲೆಮಾರಿಗಳು ಮುಕ್ತ ಮನಸ್ಸಿನಿಂದ ಸ್ವಾಗತಿಸಬೇಕಾದರೆ ಮೂಲಭೂತವಾಗಿ ಆಧುನಿಕ ಶಿಕ್ಷಣ ಪಡೆಯಬೇಕು. ಆಡಳಿತದ ವಿವಿಧ ಹಂತಗಳಲ್ಲಿ ಪಾಲ್ಗೊಳ್ಳುವಂತಾಗಬೇಕು. ಸಾಮಾಜಿಕ ಜೀವನದ ಭಾಗವಾಗಿ ಕೆಲಸ ನಿರ್ವಹಿಸುವಂತಾಗಬೇಕು ಅಂದರೆ ಮಾತ್ರ ಅಲೆಮಾರಿಗಳು ಮುಖ್ಯವಾಹಿನಿಯತ್ತ ಬರಲು ಸಾಧ್ಯವಾಗುತ್ತದೆ.

ಶಿಕ್ಷಣವೆಂದರೆ ಕೇವಲ ಜ್ಞಾನ ಸಂಪತ್ತಿನ ವರ್ಗಾವಣೆ ಮಾತ್ರವಾಗಿರದೇ ಭವಿಷ್ಯವನ್ನು ಎದುರಿಸಲು ಅಗತ್ಯವಾದ ಕಲೆ-ಕುಶಲತೆಗಳನ್ನು, ಮನೋಭಾವಗಳನ್ನು ಬೆಳೆಸುವುದಾಗಿದೆ. ಆಧುನೀಕರಣ ಪರಿಣಾಮದಿಂದ ಶಿಕ್ಷಣ ಪಡೆಯಲು ಗೊಂದಲಿಗರು ಇಂದು ಉತ್ಸುಕರಾಗಿದ್ದಾರೆ. ತಾವು ನೆಲೆ ನಿಂತ ಊರಿನಲ್ಲಿಯೇ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದಾರೆ. ಸ್ಥಿತಿವಂತರಾದವರು ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ತಮ್ಮ ಮಕ್ಕಳನ್ನು ಓದಿಸುತ್ತಿದ್ದಾರೆ. ಪ್ರಾಥಮಿಕ, ಮಾಧ್ಯಮಿಕ ಅಥವಾ ಹೈಸ್ಕೂಲ ಹಂತದವರೆಗೆ ಶಿಕ್ಷಣವನ್ನು ಪಡೆದುಕೊಳ್ಳುವವರ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಪದವಿಪೂರ್ವ, ಪದವಿ ಮತ್ತು ವೃತ್ತಿಪರ ತಾಂತ್ರಿಕ ಶಿಕ್ಷಣ ಪಡೆಯುವವರ ಸಂಖ್ಯೆ ತೀರಾ ಕಡಿಮೆ ಇರುವುದು ಕಂಡುಬರುತ್ತದೆ. ಆರ್ಥಿಕವಾಗಿ ಪ್ರಬಲರಾದವರು ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸಿ ಅವರನ್ನು ಸುಶೀಕ್ಷಿತರನ್ನಾಗಿ ಮಾಡುತ್ತಾರೆ. ಬಡವರು ಇದರಿಂದ ವಂಚಿತರಾಗುತ್ತಿದ್ದಾರೆ. ಶ್ರೀಮಂತರು ಉತ್ತಮ-ಉನ್ನತಶಿಕ್ಷಣ, ತಾಂತ್ರಿಕ ಶಿಕ್ಷಣ, ವೈದ್ಯಕೀಯ ಶಿಕ್ಷಣದ ಸೌಲಭ್ಯಗಳನ್ನು ಕಲ್ಪಿಸಿಕೊಡುತ್ತಿರುವುದರ ಮೂಲಕ ಉನ್ನತ ಉದ್ಯೋಗದ ಅವಕಾಶಗಳನ್ನು ಪಡೆದುಕೊಂಡಿದ್ದಾರೆ.

ಗೊಂದಲಿಗರ ಸಮುದಾಯದಲ್ಲಿ ಬಹುಕಾಲದಿಂದ ಒಂದೇ ಸ್ಥಳದಲ್ಲಿ ನೆಲೆ ನಿಂತು ಹಾಗೂ ಉತ್ತಮ ಸ್ಥಿತಿಯಲ್ಲಿರುವ ಕುಟುಂಬದ ಮಕ್ಕಳು ಸಾಮಾನ್ಯವಾಗಿ ಒಂದು ಹಂತದವರೆಗಿನ ಶಿಕ್ಷಣವನ್ನು ಪಡೆದುಕೊಂಡು ವಿವಿಧ ಕ್ಷೇತ್ರಗಳಲ್ಲಿ ಉದ್ಯೋಗದ ಅವಕಾಶಗಳನ್ನು ಪಡೆದುಕೊಂಡಿದ್ದಾರೆ.

ಭಾರತದ ಸಾಕ್ಷರತಾ ಪ್ರಮಾಣವನ್ನು ನೋಡಲಾಗಿ ೨೦೦೧ರಲ್ಲಿ ಶೇ. ೬೪.೮೩ ರಷ್ಟಿದ್ದು, ಪುರುಷರ ಸಾಕ್ಷರತಾ ಪ್ರಮಾಣವು ಶೇ. ೭೫.೨೬, ಸ್ತ್ರೀಯರ ಸಾಕ್ಷರತಾ ಪ್ರಮಾಣವು ಶೇ. ೫೩.೬೭ ರಷ್ಟಿದೆ. ೨೦೧೧ರಲ್ಲಿಯ ಜನಗಣತಿಯ ಪ್ರಕಾರ ದೇಶದ ಸಾಕ್ಷರತಾ ಪ್ರಮಾಣವು ಶೇ. ೭೪.೦೪ರಷ್ಟಿದ್ದು ಇದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣವು ಶೇ. ೮೨.೧೪ ಸ್ತ್ರೀಯರ ಸಾಕ್ಷರತಾ ಪ್ರಮಾಣವು ಶೇ. ೬೫.೪೬ರಷ್ಟಿದೆ. ಹಾಗೆಯೇ ಕರ್ನಾಟಕದ ಸಾಕ್ಷರತಾ ಪ್ರಮಾಣವನ್ನು ನೋಡಲಾಗಿ ೨೦೦೧ರಲ್ಲಿ ಶೇ. ೬೭.೦೪ರಷ್ಟಿದ್ದು, ಹಾಗೆಯೇ ೨೦೧೧ರಲ್ಲಿಯ ಜನಗಣತಿಯ ಪ್ರಕಾರ ರಾಜ್ಯದ ಸಾಕ್ಷರತಾ ಪ್ರಮಾಣವು ಶೇ. ೭೫.೬೦ರಷ್ಟಿದ್ದು, ಇದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣವು ಶೇ. ೮೨.೮೫ ಸ್ತ್ರೀಯರ ಸಾಕ್ಷರತಾ ಪ್ರಮಾಣವು ಶೇ. ೬೮.೧೩ರಷ್ಟಿದೆ.

ಒಂದೇ ಸ್ಥಳದಲ್ಲಿ ನೆಲೆ ಕಂಡುಕೊಂಡು ಉತ್ತಮವಾದ ಶಿಕ್ಷಣ ಪಡೆದುಕೊಂಡು ಪ್ರಮುಖವಾದ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರ ವಿವರಗಳನ್ನು ಕೆಳಗೆ ನೀಡಲಾಗಿದೆ.

೧. ಡಾ. ಮನೋರಮಾ ದಶರತ್‌ರಾವ್ ಠಾಕೂರ, ೧೯೬೦ರಲ್ಲಿ ಎಮ್.ಬಿ.ಬಿ.ಎಸ್. ಪದವಿ ಪಡೆದು ಹುಬ್ಬಳ್ಳಿಯ ಕೆಎಮ್‌ಸಿಯಲ್ಲಿ ಪ್ರಾಧ್ಯಾಪಕರಾಗಿ, ವೈದಾಧಿಕಾರಿಯಾಗಿ ಸೇವೆ ಸಲ್ಲಿಸಿರುವರು.

೨. ಡಾ. ತುಕಾರಾಮ ಗಂಗಾಧರ ಭಾಟ, ೧೯೭೮ರಲ್ಲಿ ಎಮ್.ಬಿ.ಬಿ.ಎಸ್. ಪದವಿ ಪಡೆದು ಸದ್ಯ ಧಾರವಾಡ ಜಿಲ್ಲಾ ಮಲೇರಿಯಾ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

೩. ಶ್ರೀ ಎಂ.ಡಿ. ಪಾಯಕ, ಎಂ.ಎಸ್‌ಸಿ. ಆದಾಯ ತೆರಿಗೆ ಇಲಾಖೆಯಲ್ಲಿ ಸಹಾಯಕ ಆಯುಕ್ತ ರಾಗಿದ್ದಾರೆ.

೪. ಶ್ರೀ ಪ್ರಲ್ಹಾದರಾವ್ ಡಿ. ಸುಗತೆ. ಎಮ್.ಎ. ಎಚ್.ಡಿ.ಸಿ. ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು (ನಿ)

೫. ಶ್ರೀ ನಾಮದೇವ ಗಂಗಾಧರ ಭಾಟ, ಬಿ.ಇ. ೧೯೬೯. ಜಯಸಿಂಗಪೂರಲ್ಲಿ ವಾಸಿಸುತ್ತಿದ್ದಾರೆ.

೬ ಶ್ರೀ ಲೊಕೇಶ ಎಂ., ಪಾಯಕ. ಬಿ.ಇ, ಎಂ.ಬಿ.ಎ

೭ ಶ್ರೀಮತಿ ನಂದಾ ಲೊಕೇಶ ಪಾಯಕ, ಬಿ.ಇ., ಎಂ.ಟೆಕ್.

೮. ಶ್ರೀ ಭೀಮರಾವ್ ದತ್ತಾತ್ರೇಯ ಶಿಂಧೆ, ಬಿ.ಇ. ಆಯ್.ಸಿ.ಎಸ್. ಕಂಪನಿಯಲ್ಲಿ ಸಾಪ್ಟವೇರ್ ಇಂಜನೀಯರ್.

೯. ಶ್ರೀ ಸಚಿನ್. ಜ್ಞಾನೇಶ್ವರ ಜೋಶಿ. ಬಿ.ಇ.ವಿಮಾನ ಸ್ಪೇರ್ ಪಾರ್ಟ ಕಂಪನಿಯಲ್ಲಿ ಸುಪರ್‌ವೈಸರ್.

೧೦. ಶ್ರೀ ಗೋಪಾಲರಾವ್. ಫಕೀರಪ್ಪ ಬಾಗಲೆ, ಬಿ.ಇ.,

೧೧. ಶ್ರೀ. ಎಸ್.ಎಲ್. ಶಿಂಗದ, ಡಿ.ವಾಯ್.ಎಸ್ಪಿ.

೧೨. ಶ್ರೀ ಜ್ಞಾನೇಶ್ವರ ಬಿ. ಜೋಶಿ, ಡಿ.ಎಸ್.ಪಿ

೧೩. ಶ್ರೀ ದಿವಾಕರ ಎಮ್. ಪಾಯಕ, ಪಿ.ಎಸ್.ಆಯ್., ಭಟ್ಕಳ್

೧೪. ಶ್ರೀ ಸುಭಾಸರಾವ್ ಶಂ. ಗಾಯಕವಾಡ, ಪಿ.ಎಸ್.ಆಯ್., ಧಾರವಾಡ

೧೫. ಶ್ರೀ. ಬಿವ್ಹಿ. ಬೋಸಲೆ, ಉಪಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ, ಯಾದಗಿರಿ.

೧೬. ಶ್ರೀ ಸುಭಾಸರಾವ್ ವಾಪ್ಟರ್, ಅಧೀಕ್ಷರು, ಅಬಕಾರಿ ಇಲಾಖೆ.

೧೭. ಶ್ರೀ ಎಸ್.ಡಿ ಸಿಂಗದ, ಎಂ.ಬಿ.ಎ., ಇನ್ಪೋಷಿಷನಲ್ಲಿ ಕಾರ್ಯನಿರ್ವಹಣೆ

೧೮. ಶ್ರೀ ಪಿ.ಡಿ ಗೋಂದಳಿ, ಉಪತಹಶೀಲದಾರರು.

೧೯. ಶ್ರೀ ರಾಮಚಂದ್ರ ಶೆಟವಾಜಿ ಇಂಗಳೆ ಎಸ್.ಬಿ.ಆಯ್., ಜಮಖಂಡಿ.

೨೦. ಶ್ರೀ ಫಕೀರಪ್ಪ. ಕಲ್ಲೋಳ್ಳೆಪ್ಪಾ ಬಾಗಲೆ. ಬಿ.ಡಿ.ಓ., ಬದಾಮಿ.

೨೧. ಶ್ರೀ ವಿಠೋಭಾ ರಾಮಚಂದ್ರ ಪಾಚಂಗೆ. ಸಹಾಯಕ ಪ್ರಾದೇಶಿಕ ಅಧಿಕಾರಿಗಳು, ಸಾಗರ.

೨೨. ಶ್ರೀ ಅಶೋಕ ವಾಟ್ಕರ, ಎಮ್.ಎ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಡಗೇರಿ.

೨೩. ಶ್ರೀ ನಿವಾಸ ಶಾಸ್ತ್ರಿ, ಮನೊವಿಜ್ಞಾನ ಉಪನ್ಯಾಸಕರು, ಹುಬ್ಬಳಿ

೨೪. ಶ್ರೀ ಚಂದ್ರಕಾಂತ ಮನೋಹರ ಜೋಶಿ. ಎಮ್.ಎ. ಪಿ.ಯು.ಕಾಲೇಜು, ಗೊಳಸಂಗಿ.

೨೫. ಶ್ರೀ ಕಿರಣಕುಮಾರ ಬಿ. ಚವ್ಹಾಣ. ಎಮ್.ಎ.

೨೬. ಕು. ಪುಷ್ಪಲತಾ ರಾಮಕೃಷ್ಣ ವಾಡೇಕರ. ಎಮ್.ಎ.

(ಈ ಮಾಹಿತಿಯನ್ನು 'ಗುಪ್ತಚಾರ' ವಾರಪತ್ರಿಕೆಯಲ್ಲಿ ಬಂದಿರುವ ವರದಿಗಳನ್ನು ಆಧರಿಸಿದೆ. ೨೦೦೭ರಿಂದ ೨೦೧೨ರವರೆಗೆ ಹೆಚ್ಚಿನ ಸಂಖ್ಯೆಯಲ್ಲಿ ಸರ್ಕಾರಿ ಹಾಗೂ ವಿವಿಧ ಕ್ಷೇತ್ರಗಳ ಉನ್ನತ ಹುದ್ದೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರು ಕಂಡುಬರುತ್ತಾರೆ.

ಅನೇಕರು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಾಗಿ, ಕಾಲೇಜು ಅಧ್ಯಾಪಕರಾಗಿ, ಸಾಪ್ಟವೇರ್ ಇಂಜನೀಯರ್‌ಗಳಾಗಿ, ವಿವಿಧ ಕಛೇರಿಗಳಲ್ಲಿ ಪ್ರಥಮ ಹಾಗೂ ದ್ವಿತೀಯ ದರ್ಜೆ ನೌಕರರಾಗಿ, ಬೆರಳಚ್ಚುಗಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಬೆಳವಣಿಗೆಯಿಂದ ಗೊಂದಲಿಗರ ಸಮುದಾಯ ದಲ್ಲಿಯ ಹೊಸ ಸಂಚಲನೆ ಪ್ರಾರಂಭವಾಗಿದೆ.

**ಮಹಿಳೆಯರ ಶಿಕ್ಷಣ :** ಗೊಂದಲಿಗರಲ್ಲಿ ಪುರುಷರ ಸಾಕ್ಷರತೆ ಮತ್ತು ಮಹಿಳೆಯರ ಸಾಕ್ಷರತೆ ಪ್ರಮಾಣಗಳ ನಡುವೆ ಸಾಕಷ್ಟು ಅಂತರ ಇರುವುದು ಕಂಡುಬರುತ್ತದೆ. ಗಂಡು ಮಕ್ಕಳ ಶಿಕ್ಷಣಕ್ಕೆ

ನೀಡಿರುವಷ್ಟು ಪ್ರೋತ್ಸಾಹವನ್ನು ಹೆಣ್ಣು ಮಕ್ಕಳಿಗೆ ನೀಡಿಲ್ಲ. ಹೀಗಾಗಿ ಹಿರಿಯ ಮಹಿಳೆಯರ ಶಿಕ್ಷಣದ ಮರಿಚೀಕೆಯಾಗಿಯೇ ಉಳಿದಿದೆ. ಇತ್ತೀಚಿಗೆ ಮಹಿಳೆಯರು ಆಧುನಿಕತೆ ಮತ್ತು ಸರ್ಕಾರದ ಸೌಲಭ್ಯಗಳಿಂದ ಹೆಣ್ಣುಮಕ್ಕಳ ಶಿಕ್ಷಣದ ಕಡೆಗೆ ಒಲವು ತೋರಿಸುತ್ತಿದ್ದಾರೆ. ಮಹಿಳೆಯರು ಮಾಧ್ಯಮಿಕ, ಹೈಸ್ಕೂಲ್ ಹಂತದವರೆಗೆ ಸ್ಥಿತಿವಂತ ಕುಟುಂಬದ ಹೆಣ್ಣುಮಕ್ಕಳು ಉನ್ನತ ಶಿಕ್ಷಣ ಪಡೆದುಕೊಳ್ಳುತ್ತಿದ್ದಾರೆ. ಕೆಲ ಪ್ರದೇಶಗಳಲ್ಲಿ ಮಹಿಳೆಯರು ಪ್ರೌಢಶಾಲಾ ಶಿಕ್ಷಕರಾಗಿ, ಕಾಲೇಜು ಅಧ್ಯಾಪಕರಾಗಿ, ಬೆರಳಣಿಕೆಯಷ್ಟು ಸಾಫ್ಟವೇರ್ ಇಂಜನೀಯರ್‌ಗಳಾಗಿ, ವಿವಿಧ ಕಛೇರಿಗಳಲ್ಲಿ ದ್ವಿತೀಯ ದರ್ಜೆ ನೌಕರರಾಗಿ, ಬೆರಳಚ್ಚು ಗಾರರಾಗಿ ಕೆಲಸ ಮಾಡುತ್ತಿರುವುದು ಕಂಡುಬರುತ್ತಿದೆ. ಗೊಂದಲಿಗರ ಮಹಿಳೆಯರೂ ಸಹ ಇಂದು ಶಿಕ್ಷಣ ಪಡೆಯಲು ಮುಕ್ತವಾದ ಅವಕಾಶ ಹೊಂದಿ ಶೈಕ್ಷಣಿಕವಾಗಿ ಸಾಧನೆ ಮಾಡುತ್ತಿರುವುದು ಸಂತಸದ ಸಂಗತಿಯಾಗಿದೆ. ಆದರೆ ಬಡ ಕುಟುಂಬಗಳು ಪ್ರಾಥಮಿಕ ಮಾಧ್ಯಮಿಕ ಶಿಕ್ಷಣ ನಂತರ ಉನ್ನತ ಶಿಕ್ಷಣ ಪಡೆಯಲು ಸಾಧ್ಯವಾಗುತ್ತಿಲ್ಲ ಎಂಬ ಬೇಸರ ಕಂಡುಬರುತ್ತದೆ..

**ಶಿಕ್ಷಣ ಹಾಗೂ ಸಮುದಾಯದ ಪ್ರಯತ್ನಗಳು**

ಸಮುದಾಯದಲ್ಲಿ ಅನಕ್ಷರತೆ, ಶಿಕ್ಷಣದ ಬಲಹೀನತೆ ಮತ್ತು ಹಿಂದುಳಿದಿರುವಿಕೆಯನ್ನು ಮನಗಂಡ ಹಾಗೂ ಶಿಕ್ಷಣದ ಅವಶ್ಯಕತೆಯನ್ನು ಅರಿತ ಸಮುದಾಯದ ಹಿರಿಯ ಮುಖಂಡರು ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿಯೇ ಅಲ್ಪ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ದಿ. ಎಲ್.ವಾಯ್.ಪಾಚಂಗಿಯವರು ೧೯೪೪ರ ತಮ್ಮ ಸಮಾಜದ ಸಭೆಯಲ್ಲಿ ಮಾಡಿರುವ ಠರಾವು ಪ್ರಕಾರ ಕಲಿಯುವ ಬಡ ವಿದ್ಯಾರ್ಥಿ ಗಳಿಗಾಗಿ ನವಲಗುಂದದಲ್ಲಿ ಫ್ರೀ ಬೋರ್ಡಿಂಗ ವ್ಯವಸ್ಥೆ ಮಾಡಲಾಗಿದೆ ಎಂಬುದನ್ನು ಪ್ರಸ್ತಾಪಿಸಿದ್ದಾರೆ. ಆಮೂಲಕ ಸಮುದಾಯದ ಮಕ್ಕಳು ಶಿಕ್ಷಣವನ್ನು ಕಲಿಯಲು ಪ್ರೋತ್ಸಾಹ ನೀಡಿದ್ದಾರೆ. ಹಾಗೆಯೇ ೧೯೭೭ರ ಗೊಂದಳಿ ಸಮಾಜ ಸಂಘ, ಹುಬ್ಬಳ್ಳಿ ಸ್ಥಾಪನೆಯಾದ ನಂತರ ಪ್ರತಿಯೊಂದು ತಾಲೂಕು, ಜಿಲ್ಲಾ ಘಟಕ ಸ್ಥಾಪನೆಯ ಮೂಲಕ ಶಿಕ್ಷಣ ಜಾಗೃತಿ ಮೂಡಿಸುವ ಪ್ರಯತ್ನ ಮಾಡುತ್ತಿದ್ದಾರೆ. ಧಾರವಾಡ ಜಿಲ್ಲಾ ಅಲೆಮಾರಿ ಜನಾಂಗಗಳ ಅಭಿವೃದ್ದಿ ಸಂಸ್ಥೆಯ ವತಿಯಿಂದ ಶ್ರೀಯುತ ಪಿ.ಡಿ.ಸುಗತೆಯವರು ಹುಬ್ಬಳ್ಳಿಯ ನವನಗರದಲ್ಲಿರುವ ಶಿವಾನಂದ ನಗರದ ನಂ.೧೯ರ ಕಟ್ಟಡದಲ್ಲಿ ಹಾಗೂ ಹುಬ್ಬಳ್ಳಿ ತಾಲೂಕಿನ ಶೆರೆವಾಡ ಗ್ರಾಮದಲ್ಲಿ ಶ್ರೀಮತಿ ರುಕ್ಮಿಣಿಭಾಯಿ ಸುಗತೆ ಸ್ಮಾರಕ ಗ್ರಾಮೀಣ ಅಲೆಮಾರಿ ಜನಾಂಗಗಳ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪನೆಮಾಡಿದ್ದು ಅಲ್ಲಿ ೫ರಿಂದ ೧೦ನೇ ತರಗತಿಯವರೆಗೆ ಶಿಕ್ಷಣ ಪಡೆಯಲು ಉಚಿತ ಪ್ರವೇಶವಕಾಶವನ್ನು ಕಲ್ಪಿಸಿದ್ದಾರೆ.

ಮಹಿಳೆಯರ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ರಾಜ್ಯ-ಜಿಲ್ಲಾ ಮಟ್ಟದ ಮಹಿಳಾ ಸಂಘಟನೆಯ ಮೂಲಕ ಸಮುದಾಯದ ಮಹಿಳೆಯರಲ್ಲಿ ಜಾಗೃತಿಯನ್ನುಂಟು ಮಾಡುವ, ಶಿಕ್ಷಣದ ಅವಶ್ಯಕತೆಯ ಕುರಿತು ತಿಳುವಳಿಕೆ ಹೇಳುವ ಪ್ರಯತ್ನಗಳು ಅಲ್ಲಲ್ಲಿ ಕಂಡುಬರುತ್ತಿವೆ. ಆದ್ಯಾಗ್ಯೂ ಹೆಣ್ಣು ಮಕ್ಕಳು ಋತುಮತಿಯಾದ ನಂತರ ಶಾಲೆಗೆ ಕಳಿಸದೇ ಇರುವುದನ್ನು ಇಂದು ಕಾಣಬಹುದಾಗಿದೆ.

"ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ಸಂವರ್ಧನೆಗೆ ಎಷ್ಟು ಅವಶ್ಯಕವೋ ಸಮಾಜದ ಸ್ಥಿರತೆಗೆ, ಭದ್ರತೆಗೆ, ಐಕ್ಯಮತದ ಸ್ಥಾಪನೆಗೆ ಅಷ್ಟೆ ಅಗತ್ಯ ಸಾಮಾಜಿಕ ನಿಯಂತ್ರಣ ಹಾಗೂ ಪರಿವರ್ತನೆಯ ಸಾಧನವಾಗಿ, ಸಾಂಸ್ಕೃತಿಕ ಸಂಚರಣೆಯ ಪ್ರಭಾವೀ ಮಾಧ್ಯಮವಾಗಿ ಮತ್ತು ಇಂದಿನ ಆಧುನಿಕ ಸಮಾಜದ ಉದ್ಯೋಗ ಕ್ಷೇತ್ರದ ತರಬೇತಿಯ ಕೇಂದ್ರವಾಗಿ ಶಿಕ್ಷಣ ಮತ್ತು ಶೈಕ್ಷಣಿಕ ಸಂಸ್ಥೆಗಳ ಪ್ರಾಮುಖ್ಯ ದಿನೇ-ದಿನೇ ಹೆಚ್ಚುತ್ತಲಿದೆ"[೧೨] ಇಂಥಹ ಸನ್ನಿವೇಶದಲ್ಲಿ ಅನೇಕ ಸಮುದಾಯದವರು ತಮ್ಮ ಸಮುದಾಯದ ಜನರಿಗೆ ಹಲವಾರು ಶಿಕ್ಷಣ ಸಂಸ್ಥೆಗಳನ್ನು, ವಿದ್ಯಾರ್ಥಿ ನಿಲಯಗಳನ್ನು ಸ್ಥಾಪನೆ ಮಾಡಿ ಮಕ್ಕಳ ಶಿಕ್ಷಣಕ್ಕಾಗಿ ಉತ್ತೇಜನ ನೀಡುತ್ತಿದ್ದಾರೆ. ಆದರೆ ಈ ಸಮುದಾಯದಲ್ಲಿ ಅಷ್ಟು ವ್ಯವಸ್ಥಿತವಾದ, ಪ್ರಾಮಾಣಿಕವಾದ ಪ್ರಯತ್ನಗಳು ನಡೆಯುತ್ತಿಲ್ಲವೆಂದೆ ಹೇಳಬೇಕಾಗಿದೆ.

## ೬.೩. ಆಧುನಿಕತೆ ಮತ್ತು ಆರ್ಥಿಕ ಜೀವನ

ಮಾನವ ತನ್ನ ದೈನಂದಿನ ಜೀವನೋಪಾಯಕ್ಕಾಗಿ ಯಾವದಾರೊಂದು ವೃತ್ತಿಯನ್ನು ಅವಲಂಬಿಸಲೇಬೇಕು. ಪಾರಂಪರಿಕ ವೃತಿಗಳನ್ನು ಅನುಸರಿಸುತ್ತಿರುವ ವರ್ಗಗಳನ್ನು ಜಾತಿಯ ಹಿನ್ನೆಲೆಯಲ್ಲಿಯೇ ಗುರುತಿಸುತ್ತಾ ಬಂದಿರುವದು ಕಂಡುಬರುತ್ತದೆ. ಆ ವೃತ್ತಿಗಳು ಸಮುದಾಯದ ಪಾರಂಪರಿಕ ಕುಲಕಸಬಾಗಿಯೇ ಬೆಳೆದುಬಂದಿರುವದನ್ನು ಕಾಣುತ್ತೇವೆ.

"ಆರ್ಥಿಕ ಜೀವನವೆಂಬುದು ಒಬ್ಬ ವ್ಯಕ್ತಿಗೆ ಅನ್ವಯಿಸಿಕೊಂಡಾಗ ಆ ವ್ಯಕ್ತಿಯ ಶ್ರಮ, ಉತ್ಪಾದನೆ, ಹಂಚಿಕೆ, ಅನುಭೋಗ ಅಂಶಗಳು ಒಳಗೊಂಡಿರುತ್ತವೆ. ಇದನ್ನೇ ಒಂದು ಸಮುದಾಯಕ್ಕೆ ಅನ್ವಯಿಸಿ ಕೊಂಡಾಗ ಆ ಸಮುದಾಯದ ಜೀವನ ವಿಧಾನ, ವೃತ್ತಿ, ಉತ್ಪಾದನೆಯ ವಿವಿಧ ಆಕಾರಗಳು, ಜೀವನಮಟ್ಟ, ಸ್ಥಿತಿಗತಿ ಅವರು ಹೊಂದಿರುವ ಸಾಮಾಜಿಕ ಸ್ಥಾನಮಾನಗಳಂತಹ ಅಂಶಗಳು ಒಳಗೊಂಡಿರುತ್ತವೆ".[೧೩] ಗೊಂದಲಿಗರ ಪುರುಷರು ಪ್ರದರ್ಶಕ ಕಲೆಗಳ ಮೂಲಕ ಭಿಕ್ಷಾಟನೆ ಮಾಡುವದು, ಸ್ತ್ರೀಯರು ಅಕ್ಕ-ಪಕ್ಕದವರ ಹಳೆಯ ಸೀರೆ-ಬಟ್ಟೆಗಳನ್ನೇ ಅಚ್ಚುಕಟ್ಟಾಗಿ ಹೊಂದಿಸಿ ಕೌದಿ ಹೊಲಿಯುವುದರ ಮೂಲಕ ಜೀವನ ಸಾಗಿಸುತ್ತಾ ಬಂದಿರುವುದನ್ನು ಗಮನಿಸಿ ಅವರ ಸ್ಥಿತಿಗತಿಗಳನ್ನು ಅರ್ಥೈಸಿ ಕೊಂಡಿರುತ್ತಾರೆ.

"ಕೃಷಿ ಪ್ರದಾನವಾದ ದೇಶ ನಮ್ಮದು. ಈ ಒಕ್ಕಲು ಹಿನ್ನೆಲೆಯಲ್ಲಿ ಹುಟ್ಟಿದ ಕಲೆಗಳು ಅಪಾರ. ಅವು ವಿಭಿನ್ನ, ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದವುಗಳು. ಇಂದು ರೈತನ ಮಡಿಲಲ್ಲಿ ಕಲೆ ಉಳಿಯುವದು ಕಷ್ಟಸಾಧ್ಯವಾಗಿದೆ. ಅಲೆಮಾರಿವರ್ಗದವರು ಕಲೆಯನ್ನು ವೃತ್ತಿಯಾಗಿ ಸ್ವೀಕರಿಸಿದ್ದರೂ ರೈತಾಪಿ ವರ್ಗದ ದುಡಿಮೆಯನ್ನೇ ಆಧರಿಸದಂತವರು ಹೆಳವರು, ಕೊರವರು, ಗೊಂದಲಿಗರು, ದುರುಗ-ಮುರುಗಿಯವರು ಮುಂತಾದವರ ವೃತ್ತಿ ಸಂಬಂಧಿ ಸಾಂಸ್ಕೃತಿಕ ಲೋಕವು ಸಹ ಆಧುನಿಕ ದರ್ಭಾರಿಗೆ ತಲೆಬಾಗಿದೆ"[೧೪] ಎನ್ನುವಂತೆ ಬದಲಾದ ಸನ್ನಿವೇಶದಲ್ಲಿ ಪಾರಂಪರಿಕ ವೃತ್ತಿಗಳಿಗೆ ಯಾವ ಬೆಲೆಯೂ ಇಲ್ಲದಂತಾಗಿದೆ.

"ಆಧುನಿಕ ಜಗತ್ತಿನಲ್ಲಿ ತನ್ನ ಪಾರಂಪರಿಕ ಕಸಬನ್ನು ಎತ್ತಿ ನಿಲ್ಲಿಸಲಾರದ ಜಾತಿ ಸಮುದಾಯಗಳು ನೆಲೆ ತಪ್ಪಿಹೋದವು. ತಮ್ಮ ಪಾರಂಪರಿಕ ಆರ್ಥಿಕ ಮೂಲಗಳನ್ನು ಆಧುನಿಕ ಜಗತ್ತಿನಲ್ಲಿ ಬಂಡವಾಳವನ್ನಾಗಿ ಪರಿವರ್ತಿಸದ ಜಾತಿಗಳು ದಿಕ್ಕೆಟ್ಟು ಹೋದವು. ಅಂತಹ ಸಮುದಾಯಗಳಲ್ಲಿ ಕರಕುಶಲಕಲೆ ಮತ್ತು ಪ್ರದರ್ಶಕ ಕಲೆಗಳನ್ನು ರೂಢಿಸಿಕೊಂಡಿದ್ದ ಸಮುದಾಯಗಳು ಪ್ರಮುಖವಾದವು".[೫] ಪ್ರದರ್ಶಕ ಕಲೆಗಳನ್ನು ಅನುಸರಿಸುವ ಧಾರ್ಮಿಕ ವೃತ್ತಿ ಗಾಯಕರಾಗಿರುವ ಗೊಂದಲಿಗರು ಆಧುನಿಕ ಜಗತ್ತಿನಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿ ಕಂಡುಬರುತ್ತಿರುವ ಸ್ಥಿತ್ಯಂತರಗಳ ಸನ್ನಿವೇಶದಲ್ಲಿ ಅನುಸರಿಸುತ್ತಾ ಬಂದ ವೃತ್ತಿಗಳು ಜೀವನೋಪಾಯಕ್ಕೆ ಯಾವದೇ ಆಧಾರವಾಗಿರದೇ ಆರ್ಥಿಕ ಸಂಕಷ್ಟವನ್ನು ಅನುಭವಿಸುತ್ತಿರುವ ಸಂದರ್ಭದಲ್ಲಿ ಬೇರೆ-ಬೇರೆ ವೃತ್ತಿಗಳನ್ನು ಅನುಸರಿಸುವ ಅನಿವಾರ್ಯತೆಯಲ್ಲಿ- "ವೇಗವಾಗಿ ಚಲಿಸುತ್ತಿರುವ ಜಗತ್ತಿನಲ್ಲಿ ಯಾರು ಯಾವ ವೃತ್ತಿಯನ್ನಾದರೂ ಹಿಡಿಯಬಹುದು, ಹೇಗೆ ಬೇಕಾದರೂ ತಮ್ಮ ಬದುಕಿನ ವಿಧಾನಗಳನ್ನು ಬದಲಿಸಿಕೊಳ್ಳಬಹುದು. ಆರ್ಥಿಕವಾಗಿ ಸಬಲಗೊಳ್ಳಲು ಆಧುನಿಕ ಜಗತ್ತಿನ ಯಾವ ವೃತ್ತಿಯನ್ನಾದರೂ ಅವಲಂಬಿಸಬಹುದು".[೬] ಎನ್ನುವ ಸ್ಥಿತಿಗತಿಯು ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಕಾರಣ ಗೊಂದಲಿಗರು ಇಂದಿನ ಆಧುನಿಕತೆಯ ತಂತ್ರಜ್ಞಾನದಿಂದ ಬಂಡವಾಳಶಾಹಿ ಆಧಾರಿತ ಆರ್ಥಿಕ ಕ್ಷೇತ್ರದಲ್ಲಿ ಕಂಡುಬರುವ ವಿಭಿನ್ನವಾದ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಅಂದರೆ ಆಧುನಿಕತೆಯ ಪ್ರಭಾವದಿಂದ ಗೊಂದಲಿಗರಲ್ಲಿ ವೃತ್ತಿ ಪಲ್ಲಟವಾಗುತ್ತಿರುವುದನ್ನು ಕಾಣಬಹುದು.

**ಪಾತ್ರೆ ವ್ಯಾಪಾರ**

ಗೊಂದಲಿಗರು ಸಮಾಜದ ಮುಖ್ಯವಾಹಿನಿಗೆ ಸೇರಲು ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಬದಲಾವಣೆಗೆ ದಶಕಗಳಿಂದ ಅನುಸರಿಸುತ್ತಾ ಬಂದಿರುವ ಭಾಂಡೆ ವ್ಯಾಪಾರ ಕಾರಣ. ಈ ವ್ಯಾಪಾರವು ಗೊಂದಲಿಗರಿಗೆ ವರವಾಗಿ ಬಂದಿದೆ. ಪ್ರತಿಯೊಂದು ಊರಿನಲ್ಲಿ ಪಾತ್ರೆ ವ್ಯಾಪಾರದ ಅಂಗಡಿಗಳಿವೆ. ಅವು ಹೆಚ್ಚಾಗಿ ಗೊಂದಲಿಗರ ಅಂಗಡಿಗಳೇ ಆಗಿವೆ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಕೆಲವರು ಪಾತ್ರೆಗಳನ್ನು ಬಿದರಿನ ಪುಟ್ಟಿಯಲ್ಲಿ ಹಾಕಿಕೊಂಡು ಕೈಯಲ್ಲಿ ಕೆಲವು ಪಾತ್ರೆಗಳನ್ನು ಹಿಡಿದುಕೊಂಡು ಹೆಂಡತಿ, ಮಕ್ಕಳ ಜೊತೆಗೂಡಿ ಊರಿಂದೂರಿಗೆ ಅಲೆಯುತ್ತಾ ಹಳೆಯ ಪಾತ್ರೆಗಳನ್ನು ತೆಗೆದುಕೊಂಡು ಹೊಸ ಪಾತ್ರೆಗಳನ್ನು ಮಾರುತ್ತಾ ಬರುತ್ತಿದ್ದಾರೆ. ಆರ್ಥಿಕವಾಗಿ ಸ್ಥಿತಿವಂತರಾದವರಲ್ಲಿ ಕೆಲವರು ಚಿಕ್ಕ ರೀತಿಯ ಅಂಗಡಿಗಳಲ್ಲಿ ಭಾಂಡೆ ವ್ಯಾಪಾರ ಮಾಡುತ್ತಿದ್ದರೆ. ಮತ್ತೆ ಕೆಲವರು ನಗರಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಅಂಗಡಿಗಳನ್ನು ಹೊಂದಿದ್ದಾರೆ. ಮದುವೆ ಸಂದರ್ಭದಲ್ಲಿ ವಧುವಿನ ಮನೆಯವರು ಒಂದು ಸಂಸಾರಕ್ಕೆ ಬೇಕಾಗುವ ಎಲ್ಲಾ ಪಾತ್ರೆಗಳನ್ನು ಕೊಡಿಸುವುದು ಒಂದು ಪರಂಪರೆ. ಈ ಗೊಂದಲಿಗರ ಪಾತ್ರೆ ಅಂಗಡಿಗಳಲ್ಲಿ ಪ್ಲಾಸ್ಟಿಕ್ ಕುರ್ಚಿ, ಪ್ಲಾಸ್ಟಿಕ್ ಡೈನಿಂಗ ಟೇಬಲ್, ಮಿಕ್ಸರ್, ಕುಕ್ಕರ್, ಪ್ಯಾನ್, ಅಲ್ಮೇರಾ, ಕಾಟ್, ಗಾದಿ, ಚಾದರ, ಜಮಖಾನೆ ಮುಂತಾದ ಎಲ್ಲ ವಸ್ತುಗಳನ್ನು ಇವರು ಮಾರಾಟ ಮಾಡುತ್ತಾರೆ. ಮದುವೆಗಳು ನಡೆಯುತ್ತಿದ್ದ ಕಾಲದಲ್ಲಿ

ಇವರ ಅಂಗಡಿಗಳು ತುಂಬಾ ಗದ್ದಲದಿಂದ ತುಂಬಿರುತ್ತವೆ. ಈ ಸಂದರ್ಭದಲ್ಲಿ ಮದುವೆಗೆ ಸಂಬಂಧಪಟ್ಟ ಪಾತ್ರೆ ವ್ಯಾಪಾರ ಉತ್ತಮವಾಗಿರುತ್ತದೆ. ಗೊಂದಲಿಗರು ಈ ವೃತ್ತಿಯನ್ನು ಅನುಸರಿಸುತ್ತಾ ಬಂದಿರುವುದರಿಂದಲೇ ಅವರ ಆರ್ಥಿಕ ಸ್ಥಿತಿಗತಿಗಳಲ್ಲಿ ಸುಧಾರಣೆ ಕಂಡುಬರುತ್ತಿದೆ.

**ಕಲೆ-ಸಾಹಿತ್ಯ-ಚಿತ್ರರಂಗ**

ಪರಂಪರಾನುಗತವಾಗಿ ತಮ್ಮಲ್ಲಿರುವ ಕಲೆಯನ್ನು ಪ್ರದರ್ಶಿಸುತ್ತ ಬಂದ ಕೆಲ ಗೊಂದಲಿಗರು ಆಧುನಿಕತೆಯ ಪ್ರಭಾವದಿಂದ ಕಲೆ-ಸಾಹಿತ್ಯ-ಚಿತ್ರರಂಗ ಕ್ಷೇತ್ರದಲ್ಲಿಯೂ ಸಾಧನೆಯನ್ನು ಮಾಡಿದ್ದು, ತಮ್ಮ ವೃತ್ತಿಯ ಜೊತೆಗೆ ಪ್ರವೃತ್ತಿಯಾಗಿ ಈ ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿದ್ದಾರೆ. ಚಿತ್ರಕಲೆಯಲ್ಲಿ ಸಾಧನೆಮಾಡಿರುವ ಶಿಕ್ಷಕ ಶ್ರೀಬಸವರಾಜ ಗೊಂದಳಿಯವರು ರಾಷ್ಟ್ರ-ಅಂತರರಾಷ್ಟ್ರೀಯ ಮಟ್ಟದಲ್ಲಿ ತಮ್ಮ ವೈವಿಧ್ಯಮಯ ಚಿತ್ರಕಲೆಗಳ ಪ್ರದರ್ಶನ ಮಾಡಿ ರಾಜ್ಯ-ರಾಷ್ಟ್ರಮಟ್ಟದಲ್ಲಿ ಹಲವಾರು ಪ್ರಶಸ್ತಿ-ಸನ್ಮಾನಗಳನ್ನು ಸ್ವೀಕರಿಸಿದ್ದಾರೆ. ರಾಜ್ಯಮಟ್ಟದ ಚಿತ್ರಕಲಾ ಪ್ರದರ್ಶನದ ಸಂದರ್ಭದಲ್ಲಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಜೆ.ಎಚ್.ಪಟೇಲರವರು- 'ಈ ಕಲಾವಿದನದು ಅದ್ಭುತ ಜಗತ್ತು' ಎಂದು ಬೆನ್ನು ತಟ್ಟಿ ಪ್ರೋತ್ಸಾಹಿಸಿದ್ದಾರೆ.

ಅನೇಕ ಗೊಂದಲಿಗರು ಸಾಹಿತ್ಯ ಕ್ಷೇತ್ರದಲ್ಲಿಯೂ ಗುರುತಿಸಿಕೊಂಡಿದ್ದು, ಪ್ರಮುಖವಾಗಿ ಹೇಳುವದಾದರೆ ಶ್ರೀ ಎಚ್. ಭೀಮರಾವ್ ವಾಷ್ಟರ್(ಶಾಸ್ತ್ರಿ), ಶ್ರೀ ಶಂಕರರಾವ್ ಶಾಸ್ತ್ರಿ(ನಾಯ್ಕಲ್), ಶ್ರೀ ನಿವಾಸ ಶಾಸ್ತ್ರಿ, ಶ್ರೀ ಡಿ.ವಾಯ್‌ಬಾಗಲೆ, ಶ್ರೀ. ಸಿ.ಎಮ್.ಜೋಶಿ ಮುಂತಾದವರು ಹಲವಾರು ಕವನಗಳನ್ನು ರಚಿಸಿ ಪುಸ್ತಕಗಳನ್ನು ಹೊರತಂದಿದ್ದಾರೆ. ಅಷ್ಟೇಅಲ್ಲ ಸಮುದಾಯದ ಮುಖವಾಣಿಯಾಗಿರುವ 'ಗುಪ್ತಚಾರ' ವಾರಪತ್ರಿಕೆಯಲ್ಲಿಯೂ ಅವರ ಹಲವಾರು ಕವನಗಳು ಪ್ರಕಟಗೊಂಡಿವೆ. ಚಿತ್ರರಂಗದ ಕ್ಷೇತ್ರದಲ್ಲಿ ಸಮುದಾಯದ ಅನೇಕರು ತೊಡಗಿಕೊಂಡಿದ್ದು ಪ್ರಮುಖವಾಗಿ ಹುಬ್ಬಳಿಯ ಶ್ರೀ ಸುಗತೆ ಮನೆಯವರು 'ಸುಗತೆ ಹೊರಾಂಗಣ ಚಿತ್ರೀಕರಣ ಘಟಕ'ವನ್ನು ಪ್ರಾರಂಭಿಸಿ ಆ ಮೂಲಕ ಹಲವಾರು ಚಲನಚಿತ್ರಗಳನ್ನು ತೆರೆಗೆ ತರುವ ಪ್ರಯತ್ನ ಮಾಡುತ್ತಿದ್ದಾರೆ. ಶಿಕ್ಷಕ ವೃತ್ತಿಯಲ್ಲಿರುವ ಶ್ರೀ ಶಂಕರ ಸುಗತೆಯವರು ಚಲನಚಿತ್ರ ನಿರ್ದೇಶಕರಾಗಿ 'ಕಾಡಿನ ಪಕ್ಕಿ', 'ಶ್ರೀ ಅಜಾತ ನಾಗಲಿಂಗ ಲೀಲೆ' ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅವರ ಪತ್ನಿಯವರಾದ ಶ್ರೀಮತಿ ಸುಶೀಲಾಬಾಯಿ ಸುಗತೆ ನಿರ್ಮಾಪಕರಾಗಿದ್ದಾರೆ. ಶ್ರೀ ದಾಮೋದರ ಅಡೇಕರ, ಶ್ರೀ ಸಂಜಯ ಸುಗತೆ, ಶ್ರೀವಿಶಾಲ ಸುಗತೆ ಇನ್ನೂ ಅನೇಕರು ಚಲನಚಿತ್ರ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದಾರೆ. ಶ್ರೀ ಎಚ್. ಭೀಮರಾವ್ ವಾಷ್ಟರ್(ಶಾಸ್ತ್ರಿ) ಅವರು 'ಶ್ರೀ ಅಮರೇಶ್ವರ ಮಹಾತ್ಮೆ' ಚಲನಚಿತ್ರದಲ್ಲಿ ಪೋಷಕ ನಟರಾಗಿದ್ದಾರೆ.

ಇಂದು ಗೊಂದಲಿಗರು ವಿಭಿನ್ನವಾದ ಹಲವಾರು ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ. ಇಂದು ಗೊಂದಲಿಗರು ನಿರ್ವಹಿಸದೇ ಇರುವ ವೃತ್ತಿಗಳು ಇಲ್ಲವೇ ಇಲ್ಲವೆಂದು ಹೇಳಬೇಕಾಗುತ್ತದೆ. "ಬದಲಾಗುತ್ತಿರುವ ಸಂಕೀರ್ಣ ಸಂದರ್ಭಗಳಲ್ಲಿ ಜೀವನಾವಶ್ಯಕ ವಸ್ತುಗಳನ್ನು ದೊರಕಿಸಿಕೊಳ್ಳಲು, ಗೇಣುದ್ದ ಹೊಟ್ಟೆ ಹೊರೆಯಲು ನೆಲದುದ್ದ ಸುತ್ತುವ ಪರಸ್ಥಿತಿ ಅಲೆಮಾರಿಗಳದ್ದು, ಸದಾ ತಿರುಗಾಟ

ದಲ್ಲಿರುವದರಿಂದ ಇವರ ಬದುಕಿನ ಬೇರುಗಳು ಆಳಕ್ಕಿಳಿಯುವದು ಸಾಧ್ಯವಾಗುವದೇ ಇಲ್ಲ. ಸ್ಥಿರವಲ್ಲದ ಬದುಕನ್ನು ನಂಬಿ, ಅಂಗೈಯಲ್ಲಿ ಹೊಟ್ಟೆ ಹಿಡಿದು ಅಲೆದಾಡುವ ಈ ಸಮುದಾಯಗಳ ಸಾಂಸ್ಕೃತಿಕ ಚಟುವಟಿಕೆಗಳೂ ಸ್ಥಗಿತವಾಗುತ್ತಿವೆ. ಜಾಗತೀಕರಣ ಆಧುನಿಕ ಜಗತ್ತಿನ ವಾಣೀಜ್ಜೀಕೃತ, ತ್ರಾಂತ್ರಿಕತೆಯ ಕಾರಣವಾಗಿ ಟಿ.ವಿ., ಸಿನೇಮಾ, ಕಂಪ್ಯೂಟರ್, ಇಂಟರ್‌ನೆಟ್ ಜಾಲಗಳಡಿಯಲ್ಲಿ ಇವರ ಕಲೆಗಳು, ವೃತ್ತಿ ಕೌಶಲ್ಯಗಳು, ಸಂಪೂರ್ಣ ನೆಲೆ ಕಚ್ಚಿವೆ".[೧೮] ನಾಗರಿಕ ಶಿಕ್ಷಣ, ಹೊಸ ಲೋಕದ ಇನ್ನಿತರ ಕಲಾ-ಕಾರ್ಯ, ವ್ಯಾಪಾರಿ ಕೌಶಲ್ಯಗಳ ಪ್ರಭಾವದಿಂದ ಪಾರಂಪರಿಕ ವೃತ್ತಿಗಳು ಮಾಯಾ ವಾಗುತ್ತಿರುವ ಸನ್ನಿವೇಶದಡಿಯಲ್ಲಿ ಗೊಂದಲಿಗರ ಮೂಲ ವೃತ್ತಿಗಳು ಕಣ್ಮರೆಯಾಗುತ್ತಿವೆ. ಔದ್ಯೋಗಿಕರಣ, ನಗರೀಕರಣದ ಭರಾಟೆಯಿಂದಾಗಿ ಬುಡಬುಡಿಕೆಯವರು, ಜೋಷಿಗಳು, ವಾಸುದೇವ, ಇನ್ನೀತರ ಪಂಗಡಗಳ ಗೊಂದಲಿಗರು ತಮ್ಮ ಪ್ರದರ್ಶಕ ಕಲೆಗೆ ಯಾವದೇ ರೀತಿ ನೆಲೆ-ಬೆಲೆಯೂ ಇಲ್ಲದಂತಹ ಸನ್ನಿವೇಶದಿಂದಾಗಿ ಅನಿವಾರ್ಯವಾಗಿ ತಮ್ಮ ಜೀವನಾಧಾರಕ್ಕೆ ಇತರ ವೃತ್ತಿಗಳನ್ನು ಅನುಸರಿಸುತ್ತಿದ್ದಾರೆ.

ಸರ್ಕಾರದ ಮೀಸಲಾತಿ ನೀತಿಯಿಂದಾಗಿ ಗೊಂದಲಿಗರ ಸಮುದಾಯದ ಯುವಕರು ಆಧುನಿಕ ಉದ್ಯೋಗಗಳತ್ತ ವಾಲುತ್ತಿರುವುದು ಇತ್ತೀಚಿನ ಬೆಳವಣಿಗೆಯೂ ಆಗಿದೆ. ಸಮುದಾಯದ ಅನೇಕ ವಿದ್ಯಾರ್ಥಿಗಳು ನಗರಗಳ ಕಡೆಗೆ ವಲಸೆ ಬಂದು ನಗರದಲ್ಲಿಯೇ ನೆಲೆ ನಿಂತು, ಕಾಲೇಜುಗಳಲ್ಲಿ ಶಿಕ್ಷಣ ಪಡೆದು ಸರ್ಕಾರಿ ಉದ್ಯೋಗಕ್ಕಾಗಿ ಪ್ರಯತ್ನಿಸುತ್ತಿದ್ದಾರೆ. ಇನ್ನೊಂದೆಡೆಗೆ ಸುಶಿಕ್ಷಿತ ಅನೇಕ ಯುವಕರಿಗೆ ಉದ್ಯೋಗವಕಾಶಗಳಿಲ್ಲದೇ, ಇನ್ನುಳಿದವರ ಜೊತೆಗೆ ಸ್ಪರ್ಧಿಸಲು ಸಾಧ್ಯವಾಗದೆ ಅವಕಾಶದಿಂದ ವಂಚಿತರಾಗಿ ನಿರುದ್ಯೋಗಿಗಳಾಗಿರುವವರೂ ಕಂಡುಬರುತ್ತಾರೆ.

### ೬.೪. ಆಧುನಿಕತೆ ರಾಜಕೀಯ ಜೀವನ

ಆಧುನಿಕ ಪ್ರಜಾಪ್ರಭುತ್ವ ಸಮಾಜದಲ್ಲಿ ಯಾವುದೇ ಸಮುದಾಯವು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಪ್ರಗತಿ ಸಾಧನೆಗೆ ರಾಜಕೀಯ ಪ್ರಜ್ಞೆ ಮತ್ತು ರಾಜಕೀಯ ಉನ್ನತಿ ಸಾಧಿಸುವದು ಅವಶ್ಯಕ. ಅದರಲ್ಲೂ ಹಿಂದುಳಿದ ಬುಡಕಟ್ಟು-ಅಲೆಮಾರಿ ಸಮುದಾಯಗಳು ರಾಜಕೀಯವಾಗಿ ಮುಂದುವರೆದಾಗ ಮಾತ್ರ ಆಡಳಿತ ಯಂತ್ರದ ಪ್ರತಿಯೊಂದು ವಿಭಾಗಗಳಲ್ಲಿಯ ಕಾರ್ಯ ಚಟುವಟಿಕೆಗಳ ತಿಳುವಳಿಕೆ/ಅರಿವು ಹಾಗೂ ಸಾಮುದಾಯಿಕವಾಗಿ ಪಡೆದುಕೊಳ್ಳಬಹುದಾದ ಅನೂಕೂಲತೆಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುವದು.

ರಾಜಕೀಯವಾಗಿ ಗೊಂದಲಿಗರ ಸಮುದಾಯವು ಅತ್ಯಂತ ಹಿಂದುಳಿದಿದೆ. ರಾಜಕೀಯ ಹಿಂದುಳಿದಿರುವಿಕೆಯಿಂದ ಈ ಸಮುದಾಯದ ಆರ್ಥಿಕ ಮತು ಶೈಕ್ಷಣಿಕ ಪ್ರಗತಿಯು ಸಾಧ್ಯವಾಗಿಲ್ಲ ಎಂದೇ ಹೇಳಬೇಕು. ಇಲ್ಲಿಯವರೆಗೂ ಈ ಜನಾಂಗದ ಯಾವದೇ ರಾಜಕೀಯ ಪ್ರತಿನಿಧಿಗಳನ್ನು ರಾಷ್ಟ್ರ ಮಟ್ಟದಲ್ಲಾಗಲಿ, ರಾಜ್ಯಮಟ್ಟದಲ್ಲಾಗಲಿ, ಗುರುತಿಸಿಕೊಂಡಿರುವುದಿಲ್ಲ. ಸ್ವಾತಂತ್ರ ಪೂರ್ವದಲ್ಲಿಯೇ ಸಮುದಾಯದ ಸಂಘಟನೆಗಾಗಿ ೧೯೩೭ರಲ್ಲಿಯೇ ಅಖಿಲ ಕರ್ನಾಟಕ ಗೊಂದಳಿ ಸಮಾಜ ಸಂಘವನ್ನು ನವಲಗುಂದದ ದಿ. ಎಲ್.ವಾಯ್. ಪಾಚಂಗಿಯವರು ಸ್ಥಾಪನೆ ಮಾಡಿ ಸಂಘಟನೆ-

ಅಭಿವೃದ್ಧಿಗಾಗಿ ಪ್ರಯತ್ನಗಳನ್ನು ಮಾಡಿದ್ದಾರೆ. ಆಗಿನ ಮುಂಬಯಿ ಸರ್ಕಾರದ ಜೊತೆಗೆ ಸಮಾಜದ ಅಭಿವೃದ್ಧಿಗಾಗಿ ಸಂಘಟನೆ ಮುಖಾಂತರ ಹೋರಾಟ ಮಾಡಿದರು. ಈ ಸಂಘಟನಾತ್ಮಕ ಪ್ರಯತ್ನಗಳನ್ನು ರಾಜಕೀಯ ಪ್ರಗತಿಗೆ ಯಾವುದೇ ರೀತಿ ತಿರುವು ಕೊಡಲಿಲ್ಲ. ಸ್ವಾತಂತ್ರದ ನಂತರದ ದಿನಗಳಲ್ಲಿ ೧೯೭೭ರಲ್ಲಿ ಹುಬ್ಬಳಿಯಲ್ಲಿ 'ಅಖಿಲ ಕರ್ನಾಟಕ ಗೊಂದಳಿ ಸಮಾಜ ಸಂಘ'ದ ಸ್ಥಾಪನೆಯ ಮೂಲಕ ಜನಾಂಗದ ಮುಖಂಡರು ಆರ್ಥಿಕ-ಶೈಕ್ಷಣಿಕ ಅಭಿವೃದ್ಧಿಗೆ ಸಂಘಟನಾತ್ಮಕವಾಗಿ ಪ್ರಯತ್ನಿಸುತ್ತಿದ್ದರೂ, ಪ್ರತಿಯೊಂದು ಜಿಲ್ಲಾ, ತಾಲೂಕ ಕೇಂದ್ರಗಳಲ್ಲಿಯೂ ತಮ್ಮ ಸಂಘಟನೆಯನ್ನು ಮಾಡಿದ್ದರೂ, ಜನಾಂಗದ ಜನರಲ್ಲಿ ರಾಜಕೀಯ ಜಾಗೃತಿಯನ್ನು ಮೂಡಿಸಲು ಸಾಧ್ಯವಾಗಿಲ್ಲ. ಇದಕ್ಕೆ ಮುಖ್ಯ ಕಾರಣ ಅಲೆಮಾರಿಗಳಾಗಿರುವ ಗೊಂದಲಿಗರು ಯಾವುದೇ ಜಿಲ್ಲಾ/ತಾಲೂಕ/ಮತಕ್ಷೇತ್ರದಲ್ಲಿ ಬಹು ಸಂಖ್ಯಾತ್ಮಕವಾಗಿ ನೆಲೆಯನ್ನು ಹೊಂದಿರದೆ ರಾಜ್ಯಾದಂತ ಚದುರಿದ್ದಾರೆ. ಹೀಗಾಗಿ ಆಯಾ ಮತ ಕ್ಷೇತ್ರದಲ್ಲಿ ಯಾವುದೇ ರೀತಿ ಗೊಂದಲಿಗರು ನಿರ್ಣಾಯಕ ಮತದಾರರಾಗಿಲ್ಲ. ಅಷ್ಟೇ ಅಲ್ಲ ಇವರು ಆರ್ಥಿಕವಾಗಿ ಹಿಂದುಳಿದವರಾಗಿರುವುದರಿಂದ ಒಂದು ಕಾಲದಲ್ಲಿ ರಾಜಕೀಯದ ಬಗ್ಗೆ ನಿರ್ಲಕ್ಷ ಮನೋಭಾವನೆ ತಾಳಿದ್ದಾರೆ. ಪರಿಣಾಮ ರಾಜ್ಯಾದಂತ ಸುಮಾರು ೬ ಲಕ್ಷದಷ್ಟು ಜನಸಂಖ್ಯೆಯನ್ನು ಹೊಂದಿದ್ದರೂ ಇವರು ವಿಧಾನ ಸಭೆ-ವಿಧಾನ ಪರಿಷತಿಗೆ ಆಯ್ಕೆಯಾಗದೇ ಇರುವದು ವಿಷಾದದ ಸಂಗತಿಯೇ ಆಗಿದೆ.

ರಾಜ್ಯದಲ್ಲಿ ೧೯೯೩ಕ್ಕಿಂತ ಪೂರ್ವದಲ್ಲಿ ಗೊಂದಲಿಗರು ಸೇರಿದಂತೆ ಇತರೆ ಹಿಂದುಳಿದ ವರ್ಗಗಳಿಗೆ ಯಾವದೇ ರೀತಿ ಸ್ಥಳಿಯ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿ ಸೌಲಭ್ಯಗಳಿರಲಿಲ್ಲ. ಆದರೆ "೧೯೯೩ರಲ್ಲಿ ಸಂವಿಧಾನಕ್ಕೆ ೭೩ನೇ ತಿದ್ದುಪಡಿ ಮಾಡಿ ಆಮೂಲಕ ರಾಷ್ಟ್ರಾದ್ಯಂತ ಸ್ಥಳೀಯ ಆಡಳಿತ ವ್ಯವಸ್ಥೆಯು ಏಕರೂಪವಾಗಿ ಮೂರು ಹಂತಗಳ ವ್ಯವಸ್ಥೆ ರೀತಿಯಲ್ಲಿ ಕಡ್ಡಾಯವಾಗಿ ಜಾರಿಗೆ ತರಬೇಕೆಂದು ನಿರ್ದೇಶಿಸಲಾಗಿದೆ.(ದಿ. ೨೦-೦೪-೧೯೯೩ರಂದು ರಾಷ್ಟ್ರಪತಿಗಳು ಈ ಮಸೂದೆಗೆ ಸಹಿ ಹಾಕಿದರು) ಪರಿಣಾಮ ಪ್ರತಿಯೊಂದು ರಾಜ್ಯದಲ್ಲಿ ೧೯೯೩ರಿಂದ ಹೊಸ ಪಂಚಾಯತ ರಾಜ್ಯ ವ್ಯವಸ್ಥೆಯನ್ನು ಜಾರಿಗೆ ತಂದು, ಅದರಲ್ಲಿ ಹಿಂದುಳಿದ ವರ್ಗದವರಿಗೆ, ಮಹಿಳೆಯರಿಗೆ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಯಿತು. ಮಹಿಳೆಯರಿಗೆ, ಪರಿಶಿಷ್ಟ ಜಾತಿ-ಜನಾಂಗ ಹಾಗೂ ಹಿಂದುಳಿದ ವರ್ಗಗಳಿಗ ಅಧ್ಯಕ್ಷ ಸ್ಥಾನವೂ ಸೇರಿ ತಲಾ ಮೂರನೇ ಒಂದರಷ್ಟು ಮೀಸಲಾತಿಯನ್ನು ಕಲ್ಪಿಸಲಾಯಿತು."[೧೯] ೧೯೯೪ರಲ್ಲಿ ನಮ್ಮ ರಾಜ್ಯ ಸರ್ಕಾರವು ಎಲ್ಲಾ ಹಿಂದುಳಿದ ಸಮುದಾಯಗಳನ್ನು ಎರಡು ಗುಂಪುಗಳಾಗಿ ಅಂದರೆ ಅತ್ಯಂತ ಹಿಂದುಳಿದ ಜಾತಿಗಳನ್ನು 'ಎ' ಗುಂಪಿಗೆ ಮತ್ತು ಇತರ ಹಿಂದುಳಿದ ಜಾತಿಗಳನ್ನು 'ಬಿ' ಗುಂಪಿಗೆ ಸೇರಿಸಿ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿಯನ್ನು ಒದಗಿಸಿತು. ಅತ್ಯಂತ ಹಿಂದುಳಿದ ಗೊಂದಲಿಗರ ಸಮುದಾಯವು 'ಎ' ಗುಂಪಿನಡಿಯಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ರಾಜಕೀಯ ಮೀಸಲಾತಿಯನ್ನು ಪಡೆದುಕೊಂಡು ಆ ಮೂಲಕ ಸ್ಥಳೀಯ ಚುನಾವಣೆಗಳಲ್ಲಿ ಅಂದರೆ ಜಿಲ್ಲಾಪಂಚಾಯತ, ತಾಲೂಕ ಪಂಚಾಯತ, ಗ್ರಾಮ ಪಂಚಾಯತ ಹಾಗೂ ನಗರ ಸಭೆ, ಪುರಸಭೆ, ಪಟ್ಟಣ ಪಂಚಾಯತ ಚುನಾವಣೆಗಳಲ್ಲಿ

ಸ್ಪರ್ಧಿಸುವ ಅವಕಾಶವನ್ನು ಪಡೆದುಕೊಂಡಿತು. ಪರಿಣಾಮ ಅನೇಕ ಹಿಂದುಳಿದ ಬುಡಕಟ್ಟು-ಅಲೆಮಾರಿ ಸಮುದಾಯಗಳು ಮೀಸಲಾತಿಯ ಸದಾವಕಾಶವನ್ನು ಪಡೆದುಕೊಂಡು ಸ್ಥಳೀಯ ಸಂಸ್ಥೆಗಳಲ್ಲಿ ಸದಸ್ಯರು, ಅಧ್ಯಕ್ಷರು ಆಗಿರುವುದರ ಜೊತೆಗೆ ಸಾಮುದಾಯಿಕವಾಗಿ ಹಲವಾರು ಲಾಭಗಳನ್ನು - ಅನೂಕೂಲತೆಗಳನ್ನು ಪಡೆದುಕೊಂಡಿವೆ. ಅಂತಹ ಸಮುದಾಯಗಳ ರಾಜಕೀಯ ಮುಖಂಡರು ವಿಧಾನಸಭೆ ಸದಸ್ಯರು ಪರಿಷತ್ತಿನ ಸದಸ್ಯರು, ಮಂತ್ರಿಗಳು ಆಗಿ ಸಾಮುದಾಯಿಕ ಲಾಭವನ್ನು ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ.

ಪ್ರಸ್ತುತ ಇಂತಹ ಸಂದರ್ಭದಲ್ಲಿ ಗೊಂದಲಿಗರ ಸಮುದಾಯದಲ್ಲಿ ಯಾವದೇ ಪ್ರಮುಖ ರಾಜಕೀಯ ಮುಖಂಡರನ್ನು ಕಾಣಲು ಸಾಧ್ಯವಿಲ್ಲ. ಇವರಲ್ಲಿ ಯಾರೂ ವಿಧಾನಸಭೆ - ವಿಧಾನಪರಿಷತ್ತಿನ ಸದಸ್ಯರಾಗಿ ಆಯ್ಕೆಯಾಗಿಲ್ಲ. ಸ್ಥಳೀಯ ಸಂಸ್ಥೆಗಳಲ್ಲಾದರೂ ಹೆಚ್ಚಿನ ಅವಕಾಶಗಳನ್ನು ಪಡೆದು ಕೊಂಡಿದ್ದಾರೆಂದರೆ ಅದು ಇಲ್ಲ. ಬೆರಳೆಣಿಕೆಯಲ್ಲಿ ಮಾತ್ರ ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ, ಜಿಲ್ಲಾ ಪಂಚಾಯತ್ ಪಟ್ಟಣ ಪಂಚಾಯತಿ, ನಗರ ಸಭೆಗಳ ಸದಸ್ಯರಾಗಿರುವುದು ಕಂಡುಬರುತ್ತದೆ.

| ಕ್ಷೇತ್ರ | ಪುರುಷರು | ಸ್ತ್ರೀಯರು | ಒಟ್ಟು ಸದಸ್ಯರ ಸಂಖ್ಯೆ |
|---|---|---|---|
| ೧. ಜಿಲ್ಲಾ ಪಂಚಾಯತ | ೦೫ | -- | ೦೫ |
| ೨. ತಾಲೂಕ ಪಂಚಾಯತ | -- | ೦೧ | ೦೧ |
| ೩. ಗ್ರಾಮ ಪಂಚಾಯತ | ೦೯ | ೦೪ | ೧೩ |
| ೪. ಪುರಸಭೆ/ ನಗರ ಸಭೆ | ೦೧ | ೦೮ | ೦೯ |

**ಗ್ರಾಮ ಪಂಚಾಯತ ಸದಸ್ಯರು**

೧. ಶ್ರೀ ನಿವೃತ್ತಿ ಪುಂಡಲೀಕ ಜೋಶಿ, ಮಲ್ಲಾಪೂರ ತಾಲೂಕು ಗೋಕಾಕ

೨. ಶ್ರೀ ಯಶವಂತ ಲಕ್ಷ್ಮಣ ಗೋಂದಳಿ, ನಾಗನೂರ, ತಾಲೂಕು ಗೋಕಾಕ

೩. ಶ್ರೀ ಯಶವಂತ ಮಂಗಳಾ ಸುಗತೆ, ಕಡಕಲಾಟ

**ತಾಲೂಕಾ ಪಂಚಾಯತ ಸದಸ್ಯರು**

೧. ಶ್ರೀಮತಿ ವಿಮಲಾಯಿ ಪೂರ್ಣಾಜಿ ವಾಕೋಡೆ, ಸೋಂತ, ತಾಲೂಕು ಗುಲಬರ್ಗಾ ೨೦೧೦ರಲ್ಲಿ ತಾಲೂಕ ಪಂಚಾಯತ ಅಧ್ಯಕ್ಷರಾಗಿದ್ದರು.

೨. ಶ್ರೀ ಲಿಂಗಪ್ಪ ಎಂ. ಪಾಯಕ ಕುರುಗೋಡು, ಕಳೆದ ಪಂಚಾಯತ ಚುನಾವಣೆಯಲ್ಲಿ ಸದಸ್ಯರಾಗಿದ್ದರು.

**ಪುರಸಭೆ/ ನಗರ ಸಭೆ ಸದಸ್ಯರು**

೧. ಶ್ರೀಮತಿ ಮೀನಾಕ್ಷಿ ವಸಂತ ಕಾಳೆ, ಜಮಖಂಡಿ

೨. ಶ್ರೀಮತಿ ಲಕ್ಷ್ಮಿಬಾಯಿ ಗಣಪತಿರಾವ ಕಾಳೆ, ಸಂಕೇಶ್ವರ

೩. ಶ್ರೀಮತಿ ವಾಸಂತಿ ವಸಂತರಾವ ಮಾಳವದೆ, ಖಾರೆ ಪಟ್ಟಣ

೪. ಶ್ರೀಮತಿ ಕಸ್ತೂರಿಬಾಯಿ ಶಂಕರ ಗಣಾಚಾರಿ, ಬಳ್ಳಾರಿ

೫. ಶ್ರೀಮತಿ ಸುಮಿತ್ರಾಬಾಯಿ ಚಿಂತಾಮಣಿರಾವ ಬಂಗಾಳೆ, ಹೊಸಪೇಟೆ

೬. ಶ್ರೀಮತಿ ಮನಿಶಾ. ಶಿವಾಜಿರಾವ್ ಗುರುವ, ನಿಪ್ಪಾಣಿ

೭. ಶ್ರೀಮತಿ ಭಾರತಿ ಅರುಣ ಗೊಂದಳಿ, ಹಳಿಯಾಳ, ೨೦೧೦ರಲ್ಲಿ ಪುರಸಭಾ ಅಧ್ಯಕ್ಷರಾಗಿದ್ದರು

೮. ಶ್ರೀ ವಿಠ್ಠಲ.ಕೆ. ಬಾಗಲೆ, ಬದಾಮಿ

೯. ಶ್ರೀಮತಿ ಸರೋಜಾ. ಅಂಭಾಜಿ ಜೋಶಿ, ಬಾಗಲಕೋಟ

ದಿನಾಂಕ ೦೭-೦೧-೨೦೦೭ರವರೆಗೆ ಗೊಂದಲಿಗರ ರಾಜಕೀಯ ಸ್ಥಿತಿಯನ್ನು 'ಗೊಂದಳಿ ಸಮುದಾಯದಗಳ ಬೃಹತ್ ಅಧಿವೇಶನ'ದ ಸಂದರ್ಭದಲ್ಲಿ ಹೊರತಂದ ಸ್ಮರಣ ಸಂಚಿಕೆ ಹಾಗೂ ಗುಪ್ತಚಾರ ಪತ್ರಿಕೆಗಳಲ್ಲಿಯ ವರದಿಗಳ ಆಧಾರದ ಮೇಲೆ ಈ ಮಾಹಿತಿಯನ್ನು ನೀಡಲಾಗಿದೆ.

ಇತ್ತೀಚಿಗೆ ನಡೆಯುತ್ತಿರುವ ಸ್ಥಳೀಯ ರಾಜಕೀಯ ಸಂಸ್ಥೆಗಳಾದ ಗ್ರಾಮ ಪಂಚಾಯತಿ, ತಾಲೂಕ ಪಂಚಾಯತಿ, ಜಿಲ್ಲಾ ಪಂಚಾಯತ್ ಪಟ್ಟಣ ಪಂಚಾಯತಿ, ಪುರಸಭೆ, ನಗರ ಸಭೆಗಳ ಚುನಾವಣೆಗಳು ಹೆಚ್ಚಚ್ಚು ಆಕರ್ಷಣೆಗೊಳಗಾಗುತ್ತಿರುವುದು ಹಾಗೂ ಸ್ಥಳೀಯ ಸಂಸ್ಥೆಗಳ ಬಗ್ಗೆ ರಾಜಕೀಯದ ಅರಿವು ಹಾಗೂ ಪಾಲ್ಗೊಳ್ಳುವಿಕೆ ಹೆಚ್ಚಾಗುತ್ತಿದೆ. ಆದರೆ ಗೊಂದಲಿಗರು ಇಂಥಹ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಾದರೂ ಸಕ್ರಿಯವಾಗಿ ಪಾಲ್ಗೊಳ್ಳದೇ ಇರುವದು, ಒಂದು ರೀತಿಯ ವಿಪರ್ಯಾಸವೇ ಸರಿ. ಕೆಲ ಗೊಂದಲಿಗರ ಮುಖಂಡರು ಮೀಸಲಾತಿಯ ಅನುಕೂಲತೆ ಯಿಂದ ಕೆಲ ಸಂಸ್ಥೆಗಳ ಸದಸ್ಯರುಗಳಾಗಿ ಆಯ್ಕೆಗೊಳ್ಳುತ್ತಿರುವುದು, ರಾಜಕೀಯ ಕ್ಷೇತ್ರದಲ್ಲಿ ಅವರಿಡುತ್ತಿರುವ ಅಂಬೆಗಾಲು ಎಂದೇ ಹೇಳಬೇಕಾಗುತ್ತದೆ.

### ೬.೪.೧. ಹಿಂದುಳಿದ ವರ್ಗಗಳ ಆಯೋಗಗಳು ಮತ್ತು ಗೊಂದಲಿಗರು

ಭಾರತೀಯ ಸಮಾಜದಲ್ಲಿ ಶತ-ಶತಮಾನಗಳಿಂದಲೂ ಜಾತಿ ಆಧಾರಿತ ವ್ಯವಸ್ಥೆಯು ಬೆಳೆದು ಬಂದಿದ್ದು ಪರಿಣಾಮ ಮೇಲು-ಕೀಳು, ಸ್ಪರ್ಶ-ಅಸ್ಪೃಶ್ಯ, ಶ್ರೇಷ್ಠ-ಕನಿಷ್ಠ, ಮಡಿ-ಮೈಲಿಗೆಯ ಭಾವನೆಗಳು ಬೆಳೆದು ಬಂದಿದೆ. ಜಾತಿ ವ್ಯವಸ್ಥೆಯಲ್ಲಿ ಮೇಲುಸ್ತರದಲ್ಲಿರುವವರು ಎಲ್ಲಾ ರೀತಿಯ ಸೌಲಭ್ಯಗಳು, ಅನುಕೂಲತೆಗಳನ್ನು ಹೊಂದಿದ್ದರೆ ಅಥವಾ ಪಡೆದುಕೊಂಡಿದ್ದರೆ, ಕೆಳಸ್ಥರದಲ್ಲಿರುವ ಜಾತಿಗಳ ಜನರು ಎಲ್ಲಾ ರೀತಿಯ ಸೌಲಭ್ಯಗಳಿಂದ, ವಂಚಿತರಾಗಿ ಅತ್ಯಂತ ಕೆಳಮಟ್ಟದ ರೀತಿಯಲ್ಲಿ ನಿಕೃಷ್ಟ ಬದುಕನ್ನು ಕಳೆಯುತ್ತಾ ಬಂದಿದ್ದಾರೆ.

ಸ್ವಾತಂತ್ರ್ಯಕ್ಕಿಂತ ಪೂರ್ವದಿಂದಲೂ ಸಮಾಜದಲ್ಲಿ ಕಂಡುಬರುವ ಈ ಅಸಮಾನತೆಯ ವ್ಯವಸ್ಥೆಯನ್ನು ಹೋಗಲಾಡಿಸಲು ಆಮೂಲಕ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯಲು ಅವಕಾಶ-ಸೌಲಭ್ಯಗಳಿಂದ ವಂಚಿತರಾದವರಿಗೆ ಸಮಾನ ಅವಕಾಶಗಳನ್ನು ಕಲ್ಪಿಸಿಕೊಡುವುದರ

ಮೂಲಕ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತಾಗಲು ಅನೇಕ ಪ್ರಯತ್ನಗಳನ್ನು ಮಾಡುತ್ತಾ ಬಂದಿದ್ದಾರೆ. ಆದರೆ ಭಾರತವು ಸ್ವಾತಂತ್ರ್ಯ ಪಡೆದುಕೊಂಡ ನಂತರವೇ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದು, ಸ್ವಾತಂತ್ರ್ಯ, ಸಮಾನತೆ, ಸಮಾನ ಅವಕಾಶಗಳನ್ನು ಕಲ್ಪಿಸಿಕೊಡುವ ದೃಷ್ಟಿಯಿಂದ ಯಾರು ಇವುಗಳಿಂದ ವಂಚಿತರಾಗಿದ್ದಾರೊ ಅವರುಗಳಿಗೆ ಅನೇಕ ರೀತಿಯ ಸೌಲಭ್ಯಗಳನ್ನು, ಅನುಕೂಲತೆಗಳನ್ನು ಕಲ್ಪಿಸಿಕೊಡಬೇಕು, ಎನ್ನುವ ದಿಶೆಯಲ್ಲಿ ಮೀಸಲಾತಿ ಸೌಲಭ್ಯಗಳನ್ನು ಜಾರಿಗೆ ತಂದಿದ್ದಾರೆ. ಮೀಸಲಾತಿ ಸೌಲಭ್ಯಗಳ ಅಡಿಯಲ್ಲಿ ಸರ್ಕಾರಿ ಸೌಲಭ್ಯ, ಅನುಕೂಲತೆಗಳನ್ನು ಪಡೆಯಲು ಅರ್ಹವೆನಿಸಿದ ಜಾತಿ-ಸಮೂಹಗಳನ್ನು ಗುರುತಿಸಲು ಅಥವಾ ಪಟ್ಟಿಮಾಡಲು ಆಯೋಗಗಳನ್ನು ನೇಮಕ ಮಾಡಲಾಗಿದೆ.

ಭಾರತದ ಸಂವಿಧಾನ ೧೫(೪) ಮತ್ತು ೧೬(೪)ನೇ ಕಲಂಗಳಲ್ಲಿ 'ಹಿಂದುಳಿದ ವರ್ಗಗಳು' ಎಂಬ ಪದವನ್ನು ಬಳಸಲಾಗಿದೆ. ಹಿಂದುಳಿದ ವರ್ಗಗಳು ಎಂಬುದು ಯಾವದೇ ನಿಶ್ಚಿತ ಸೀಮಾರೇಖೆ ಮತ್ತು ನಿರ್ದಿಷ್ಟ ಆಧಾರಾಂಶಗಳನ್ನು ಒಳಗೊಂಡಿರದೇ ಇದ್ದರೂ, ಬಹುದೊಡ್ಡ ಸಂಖ್ಯೆಯಲ್ಲಿ ಜನರನ್ನು ಹೊಂದಿರುವ ಒಂದು ಸಂಮಿಶ್ರಿತ ಸಮೂಹವಾಗಿದೆ. ಒಂದು ದೃಷ್ಟಿಯಲ್ಲಿ ೩/೧ (ಮೂರನೆಯ ಒಂದು ಭಾಗ) ದಷ್ಟು ಜನಸಂಖ್ಯೆಯನ್ನು ಒಳಗೊಂಡಿದೆ. ಬಹುಸಂಖ್ಯಾತ ವರ್ಗವಾಗಿರುವ ಒಟ್ಟು ಹಿಂದುಳಿದ ವರ್ಗಗಳನ್ನು ಸ್ಥಾನಮಾನ, ಹಿಂದುಳಿದಿರುವಿಕೆ, ವಾಸಸ್ಥಾನಗಳ ನೆಲೆಗಳ ಹಿನ್ನೆಲೆಯಲ್ಲಿ ಮೂರು ಸಮೂಹಗಳಲ್ಲಿ ವಿಂಗಡಿಸಿದ್ದು,

೧. ಪರಿಶಿಷ್ಟ ಜಾತಿಗಳು

೨. ಪರಿಶಿಷ್ಟ ಬುಡಕಟ್ಟುಗಳು

೩. ಇತರ ಹಿಂದುಳಿದ ವರ್ಗಗಳು

ಹಿಂದುಳಿದ ವರ್ಗಗಳಿಗೆ ಸಂಬಂಧಪಟ್ಟಂತೆ ಸುಪ್ರಿಂ ಕೋರ್ಟಿನ ನ್ಯಾಯಾಧೀಶರಾಗಿದ್ದ ಕೆ. ಸುಬ್ಬರಾವ್ ಅವರು– "ಮಾನವನ ಜೀವನಕ್ಕೆ ಸಂಬಂಧಿಸಿದಂತೆ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಮತ್ತಿತರ ಕ್ಷೇತ್ರಗಳಲ್ಲಿ ಹಿಂದುಳಿದಿರುವಿಕೆಯ ನಿರ್ದಿಷ್ಟ ಗುಣ ಲಕ್ಷಣಗಳನ್ನು ಹೊಂದಿದ್ದು, ಜಾತಿ, ಮತ, ಬುಡಕಟ್ಟು, ಭಾಷೆ, ವೃತ್ತಿ, ಮತ್ತಿತರ ಆಧಾರದ ಮೇಲೆ ನಿರ್ದಿಷ್ಟಗೊಳಿಸಬಹುದಾದ ಮತ್ತು ಗುರುತಿಸಲು ಶಕ್ಯವಾದ ಜನಸಮೂಹವನ್ನು ಹಿಂದುಳಿದ ವರ್ಗಗಳು" ಎಂದು ಕರೆಯಬಹುದಾಗಿದೆ. ಅಸ್ಪೃಶ್ಯತೆಯ ಕಳಂಕ ಹೊತ್ತವರನ್ನು 'ಪರಿಶಿಷ್ಟ ಜಾತಿ'ಗಳಲ್ಲಿಯೂ, ನಾಗರಿಕ ಸಮಾಜದಿಂದ ದೂರವಿರುವ ಸಾಮಾಜಿಕ ಪ್ರವಾಹದಲ್ಲಿ ಇನ್ನೂ ಸೇರ್ಪಡೆಯಾಗಿಲ್ಲದ ಆದಿವಾಸಿ ಸಮುದಾಯಗಳನ್ನು 'ಪರಿಶಿಷ್ಟ ಪಂಗಡ'ಗಳಲ್ಲಿಯೂ ಪಟ್ಟಿಮಾಡಿದರೆ, ಇಂತಹ ವರ್ಗಗಳಲ್ಲಿಯೇ ಬರಬಹುದಾಗಿದ್ದರೂ ದೂರ ಉಳಿದ ಇನ್ನಿತರ ಜಾತಿ-ಸಮೂಹಗಳನ್ನು 'ಇತರ ಹಿಂದುಳಿದ ವರ್ಗ'ಗಳಲ್ಲಿ ಪಟ್ಟಿ ಮಾಡಿದ್ದಾರೆ. ಸಾಮಾನ್ಯವಾಗಿ ಇಂತಹ ವರ್ಗೀಕರಣದಲ್ಲಿ ಸಾಮಾಜಿಕ ಏಣಿ-ಶ್ರೇಣಿಯಲ್ಲಿ ಕೆಳದರ್ಜೆಯ ಸ್ಥಾನಮಾನವನ್ನು ಹೊಂದಿರುವ ಒಂದೇ ಸ್ಥಳದಲ್ಲಿ ವಾಸಿಸದೇ

ಹೊಟ್ಟೆಪಾಡಿಗಾಗಿ ಅಲೆಮಾರಿತನದ ಬದುಕನ್ನು ಕಳೆಯುತ್ತಿರುವ, ಉದ್ಯೋಗದ ಭದ್ರತೆ ಯಿಲ್ಲದ, ಆರ್ಥಿಕ ಸ್ಥಿರತೆಯನ್ನು ಹೊಂದಿರದ ಶೈಕ್ಷಣಿಕ ಅರ್ಹತೆಯು ಇಲ್ಲದ ಜನ-ಜಾತಿ ಸಮೂಹಗಳು ಒಳಗೊಳ್ಳುತ್ತವೆ.

ಗೊಂದಲಿಗ ಸಮುದಾಯವು ಎಲ್ಲಾ ರೀತಿಯ ಬುಡಕಟ್ಟು ಲಕ್ಷಣಗಳನ್ನು ಹೊಂದಿದ್ದರೂ, ಆ ಪಟ್ಟಿಯಲ್ಲಿ ಸೇರ್ಪಡೆ ಯಾಗದೇ ಇರುವುದು ಹಾಗೂ ಹಿಂದುಳಿದ ವರ್ಗಗಳ ಆಯೋಗಗಳು ಇವರನ್ನು 'ಇತರ ಹಿಂದುಳಿದ ವರ್ಗ'ಗಳಲ್ಲಿಯೇ ಗುರುತಿಸಿರುವುದನ್ನು ಕಾಣುತ್ತೇವೆ. "ಕಾನೂನು ಮತ್ತು ಆಡಳಿತ ಭಾಷೆಯಲ್ಲಿ ಹಿಂದುಳಿದ ವರ್ಗಗಳು ಎಂಬ ಸರ್ವಗ್ರಾಹಿಯಾದ ಪದ ವಿನ್ಯಾಸದಲ್ಲಿ- ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟುಗಳು, ವಿಮುಕ್ತ ಬುಡಕಟ್ಟುಗಳು, ಅಲೆಮಾರಿ ಮತ್ತು ಅರೆಅಲೆಮಾರಿ ಸಮುದಾಯಗಳು ಮತ್ತು ಇನ್ನುಳಿದವರು ಎಂಬರ್ಥದಲ್ಲಿ 'ಇತರ ಹಿಂದುಳಿದ ವರ್ಗಗಳು' ಸೇರುತ್ತವೆ" ಎನ್ನುವ ಅಭಿಪ್ರಾಯದಲ್ಲಿ ಅಲೆಮಾರಿ-ಅರೆಅಲೆಮಾರಿಗಳಾಗಿರುವ ಗೊಂದಲಿಗರು ವಾಸ್ತವವಾಗಿ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಬರಬೇಕಾದುದು. ಆದರೆ ಇಲ್ಲಿಯವರೆಗಿನ ಯಾವುದೇ ಸರ್ಕಾರಗಳು ಆ ರೀತಿಯ ಅವಕಾಶಗಳನ್ನು ಕಲ್ಪಿಸಿಕೊಟ್ಟಿರುವದಿಲ್ಲ. ಕ್ರೇಂದ್ರ ಸರ್ಕಾರವು ೧೯೫೩ರಲ್ಲಿ ಶ್ರೀ ಕಾಕಾ ಸಾಹೇಬ್ ಕಾಲೇಲ್ಕರ್ ರವರ ಅಧ್ಯಕ್ಷತೆಯಲ್ಲಿ, ೧೯೭೮ರಲ್ಲಿ ಶ್ರೀ ಬಿ.ಪಿ. ಮಂಡಲರವರ ಅಧ್ಯಕ್ಷತೆಯಲ್ಲಿ, ಹಿಂದುಳಿದ ವರ್ಗಗಳ ಆಯೋಗಗಳನ್ನು ರಚಿಸಿರುವದು ಕಂಡುಬಂದಂತೆ, ಕರ್ನಾಟಕದಲ್ಲಿಯೂ ಸಹ ಇತರ ಹಿಂದುಳಿದ ವರ್ಗಗಳಿಗೆ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯಲು ಆಮೂಲಕ ಮೀಸಲಾತಿ ಸೌಲಭ್ಯಗಳನ್ನು ಒದಗಿಸಲು ಆಯೋಗಗಳನ್ನು ನೇಮಿಸಿರುವುದು, ಅದು ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿಯೇ ಮೈಸೂರ ಮಹಾರಾಜರ ಆಳ್ವಿಕೆಯ ಅವದಿಯಲ್ಲಿ ಮಾಡಿರುವದು ಕಂಡುಬರುತ್ತದೆ.

**ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಆಯೋಗಗಳು**

**ಸರ್ ಲೆಸ್ಲೀ ಮಿಲ್ಲರ್ ಸಮಿತಿ :** ಬ್ರಾಹ್ಮಣೇತರ ಜಾತಿಯವರಿಗೆ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂಬ ಉದ್ದೇಶದಿಂದ ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿ ಮೈಸೂರ ಮಹಾರಾಜರು ಶ್ರೀ ಸರ್ ಲೆಸ್ಲೀ ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ೧೯೧೭ರಲ್ಲಿ ಸಮಿತಿಯೊಂದನ್ನು ನೇಮಕ ಮಾಡಲಾಗಿದ್ದು, ಅದು ೧೯೧೮ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಈ ಸಮಿತಿಯ ವರದಿಯಂತೆ, ಮೇಲ್ಮಟ್ಟದ ಹುದ್ದೆಗಳಲ್ಲಿ ಶೇ. ೫೦ರಷ್ಟು ಹಾಗೂ ಕೆಳಮಟ್ಟದ ಹುದ್ದೆಗಳಲ್ಲಿ ೨/೩ರಷ್ಟು ಭಾಗವನ್ನು, ಬ್ರಾಹ್ಮಣೇತರರಿಗೆ ಮೀಸಲಿಡಬೇಕೆಂಬ ಶಿಫಾರಸ್ಸು ಮಾಡಿದ್ದು, ವರದಿಯನ್ನು ೧೯೨೧ರಲ್ಲಿ ಜಾರಿಗೆ ತರಲಾಯಿತು. ಪರಿಣಾಮ ಬ್ರಾಹ್ಮಣೇತರ ಹಿಂದುಳಿದವರು ಉದೋಗವಕಾಶಗಳನ್ನು ಪಡೆದುಕೊಳ್ಳಲು ಸಾಧ್ಯ ವಾಯಿತಾದರೂ, ಇನ್ನೂ ಅಲೆಮಾರಿಗಳಾಗಿಯೇ ಬದುಕನ್ನು ಕಳೆಯುತ್ತಿದ ಗೊಂದಲಿಗರು ಆ ಸಂದರ್ಭದಲ್ಲಿ ಹೆಚ್ಚಿನ ಲಾಭವನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ.

ಸ್ವಾತಂತ್ರ್ಯ ನಂತರ ೧೯೫೧ರಲ್ಲಿ ಮೈಸೂರ ಸರ್ಕಾರವು ರಾಜ್ಯದಲ್ಲಿನ ಬ್ರಾಹ್ಮಣರು ಪ್ರಬಲ ಜಾತಿಗಳೂ ಸೇರಿದಂತೆ ಎಲ್ಲಾ ಸಮುದಾಯಗಳನ್ನು ೧೮ ಗುಂಪುಗಳಾಗಿ ವಿಂಗಡಿಸಿ ಪ್ರತಿಯೊಂದು ಗುಂಪಿಗೂ ಪ್ರತ್ಯೇಕ ಮೀಸಲಾತಿಯನ್ನು ನಿಗದಿಗೊಳಿಸಿ, ಆದೇಶವನ್ನು ಜಾರಿಗೆ ತಂದಿತು. ಆದರೆ

೧೯೫೬ರಲ್ಲಿ ಭಾಷಾವಾರು ರಾಜ್ಯಗಳ ಪುನರ್ವಿಂಗಡಣೆಯ ನಂತರ ಹಿಂದುಳಿದ ವರ್ಗಗಳ ಲೆಕ್ಕಾಚಾರದಲ್ಲಿ ವ್ಯತ್ಯಾಸಗಳು ಕಂಡುಬಂದವು. ಆ ಸಂದರ್ಭದಲ್ಲಿ ಸರ್ಕಾರವು ೧೯೫೯ರಲ್ಲಿ ೧೬೫ ಸಮುದಾಯಗಳನ್ನು ಹಿಂದುಳಿದ ಜಾತಿಗಳನ್ನಾಗಿ ವರ್ಗೀಕರಿಸಿ, ಮೀಸಲಾತಿಯನ್ನು ಶೇ. ೫೭ರಷ್ಟು ಮಿತಿಗೊಳಿಸಿ ಸರ್ಕಾರವು ಆದೇಶವನ್ನು ಹೊರಡಿಸಿದರೂ, ೧೯೫೯ರಲ್ಲಿ ಉಚ್ಚನ್ಯಾಯಾಲಯವು ಈ ಆದೇಶವನ್ನು ರದ್ದುಗೊಳಿಸಿತು.

**ನಾಗನಗೌಡ ಸಮಿತಿ ೧೯೬೦-೬೧**

"ಶ್ರೀ ಎಸ್. ನಿಜಲಿಂಗಪ್ಪನವರ ನೇತೃತ್ವದ ಸರ್ಕಾರವು ಹಿಂದುಳಿದ ವರ್ಗಗಳ ಸಮಗ್ರ ಸಮೀಕ್ಷೆ ನಡೆಸಲು ಡಾ. ಆರ್.ನಾಗನಗೌಡರ ಅಧ್ಯಕ್ಷತೆಯಲ್ಲಿ ಕರ್ನಾಟಕ ರಾಜ್ಯದಲ್ಲಿಯ ಪ್ರಪ್ರಥಮವೆನಿಸಿ ಕೊಂಡಂತಹ ಹಿಂದುಳಿದ ವರ್ಗಗಳ ಆಯೋಗವನ್ನು ೮-೧-೧೯೬೦ರಲ್ಲಿ ನೇಮಿಸಲಾಗಯಿತು ೧೯೬೧ರಲ್ಲಿ ತನ್ನ ವರದಿಯನ್ನು ಸಲ್ಲಿಸಿದ್ದು, ಪರಿಶಿಷ್ಟ ಜಾತಿಗೆ ಶೇ. ೧೫, ಪರಿಶಿಷ್ಟ ಪಂಗಡಕ್ಕೆ ಶೇ. ೩ ಇತರ ಹಿಂದುಳಿದವರಿಗೆ ಶೇ. ೫೦, ಒಟ್ಟು ಶೇ. ೬೮ರಷ್ಟು, ಮೀಸಲಾತಿ ನೀಡಬೇಕೆಂದು ಶಿಫಾರಸ್ಸು ಮಾಡಿದ್ದು, ಅದನ್ನು ಅಂಗೀಕರಿಸಿ ೧೯೬೨ರ ಜುಲೈಯಲ್ಲಿ ಸರ್ಕಾರಿ ಆದೇಶ ಹೊರಡಿಸಿದರು. ಈ ಮೀಸಲಾತಿ ಪ್ರಮಾಣದ ಹಿನ್ನೆಲೆಯಲ್ಲಿ ಉಚ್ಚ ನ್ಯಾಯಲಯದಲ್ಲಿ ಪ್ರಶ್ನಿಸಿದ್ದರಿಂದ ಸರ್ಕಾರದ ಮೀಸಲಾತಿ ನೀತಿಯನ್ನು ಅನೂರ್ಜಿತ ಗೊಳಿಸಲಾಯಿತು". ಕಾರಣ ನಿಜಲಿಂಗಪ್ಪ ಸರ್ಕಾರವು ೨೬-೦೭-೧೯೬೩ರಂದು ತಾತ್ಕಾಲಿಕ ಮೀಸಲಾತಿ ನೀತಿಯನ್ನು ಆರ್ಥಿಕ ಸ್ಥಿತಿ, ಉದ್ಯೋಗ ಮತ್ತು ಸಾಮಾಜಿಕ ಹಿಂದುಳಿದಿರುವಿಕೆಯ ಆಧಾರದ ಮೇಲೆ ಜಾರಿಗೆ ತರಲಾಯಿತು. ಅದರ ಪ್ರಕಾರ ಗೊಂದಲಿಗ ಸಮುದಾಯವನ್ನು ಅಲೆಮಾರಿ-ಅರೆಅಲೆಮಾರಿ ರಾಜ್ಯ ಪಟ್ಟಿಯಲ್ಲಿ ಸೇರ್ಪಡೆಗೊಂಡಿದ್ದು, ಪರಿಶಿಷ್ಟ ಜಾತಿ-ಪಂಗಡದವರ ಸಮಾನವಾಗಿ ಸೌಲಭ್ಯಗಳನ್ನು ಪಡೆಯುವಂತಾಗಿ, ಆದಾಯ ಮಿತಿಯಿಂದ ಹೊರಗುಳಿಯಲ್ಪಟಿತು. ಪರಿಣಾಮ ಸುಶಿಕ್ಷಿತರಾದ ಕೆಲವೇ ಕೆಲವು ಗೊಂದಲಿಗರು, ಆ ಸಂದರ್ಭದಲ್ಲಿ ಸರ್ಕಾರಿ ಉದ್ಯೋಗವಕಾಶಗಳನ್ನು ಪಡೆಯಲು ಸಾಧ್ಯವಾಗಿರುವದಷ್ಟೆ ಸಾಮುದಾಯಿಕ ದೌರ್ಬಲ್ಯಗಳ ಹಿನ್ನೆಲೆಯಲ್ಲಿ ಹೆಚ್ಚಿನ ಅನುಕೂಲತೆಗಳನ್ನು ಪಡೆದಿರುವದು ಕಂಡುಬರುವದಿಲ್ಲ.

**ಹಾವನೂರು ಆಯೋಗ ೧೯೭೨-೭೫**

ನಿಜವಾದ ಹಿಂದುಳಿದ ಜಾತಿಗಳು ಮತ್ತು ಅರೆ ಅಲೆಮಾರಿ ಸಮುದಾಯಗಳ ಹತಾಶೆಯ ಸ್ಥಿತಿಯನ್ನು ಮತ್ತು ಹಿಂದುಳಿದಿರುವಕೆಯನ್ನು ಗಮನಿಸಿದ ಆಗಿನ ಸರ್ಕಾರದ ನೇತೃತ್ವ ವಹಿಸಿದ್ದ ದಿ. ದೇವರಾಜ ಅರಸು ಅವರು ಈ ದುರ್ಬಲ ವರ್ಗಗಳನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನದ ಹಿನ್ನೆಲೆಯಲ್ಲಿ ಶ್ರೀ ಎಲ್.ಜಿ ಹಾವನೂರರವರ ಅಧ್ಯಕ್ಷತೆಯಲ್ಲಿ ಎರಡನೆಯ ಹಿಂದುಳಿದ ವರ್ಗಗಳ ಆಯೋಗವನ್ನು ೧೯೭೨ರಲ್ಲಿ ರಚಿಸಲಾಯಿತು. ಹಾವನೂರ ಆಯೋಗವು ೧೯೭೨ರಿಂದ ೧೯೭೫ರವರೆಗೆ ಮೂರು ವರ್ಷಗಳ ಕಾಲ ಮಾಹಿತಿಗಳನ್ನು ಸಂಗ್ರಹಿಸಿ, ಸಮೀಕ್ಷೆ ನಡೆಸಿ ಅಧ್ಯಯನ ಮಾಡಿ ನಾಲ್ಕು ಸಂಪುಟಗಳ ಬೃಹತ್ ಗಾತ್ರದ ೧೧೫೫ ಪುಟಗಳಷ್ಟು ದೀರ್ಘವಾದ ವರದಿಯನ್ನು ೧೯೭೫ರಲ್ಲಿ ಸರ್ಕಾರಕ್ಕೆ ಸಲ್ಲಿಸಿತು. ಹಾವನೂರ ಆಯೋಗವು ರಾಜ್ಯದಲ್ಲಿ ಶೇ. ೭೫ರಷ್ಟು ಪ್ರಜೆಗಳು

ಹಿಂದುಳಿದವರಿದ್ದು, ಅವರಿಗೆ ಶೈಕ್ಷಣಿಕ ಸಂಸ್ಥೆಗಳಲ್ಲಿ ಹಾಗೂ ಸರ್ಕಾರಿ ಉದ್ಯೋಗಗಳಲ್ಲಿ ಶೇ. ೭೫ರಷ್ಟು ಸ್ಥಾನಗಳನ್ನು ಮೀಸಲಿಡುವದು ನ್ಯಾಯ ಸಮ್ಮತವಾದರೂ, ಶೇ. ೫೦ರ ಮೀಸಲಾತಿ ದಾಟಬಾರದೆಂಬ ನ್ಯಾಯಾಲಯದ ತೀರ್ಪಿನಿಂದಾಗಿ, ಆ ಮಿತಿಯೊಳಗೆ ಸಮಿತಿಯ ಮೀಸಲಾತಿಯನ್ನು ನಿಗದಿಪಡಿಸಿ ಶಿಫಾರಸ್ಸು ಮಾಡಿದೆ.

| | |
|---|---|
| ೧. ಪರಿಶಿಷ್ಟ ಜಾತಿ | ಶೇ. ೧೫ |
| ೨. ಪರಿಶಿಷ್ಟ ಜನಾಂಗ | ಶೇ. ೦೩ |
| ೩. ಹಿಂದುಳಿದ ಬುಡಕಟ್ಟುಗಳು | ಶೇ. ೦೬ |
| ೪. ಹಿಂದುಳಿದ ಜಾತಿಗಳು | ಶೇ. ೧೦ |
| ೫. ಹಿಂದುಳಿದ ಸಮುದಾಯಗಳು | ಶೇ. ೧೬ |
| **ಒಟ್ಟು ಮೀಸಲಾತಿ** | **ಶೇ. ೫೦** |

ದಿ. ಶ್ರೀ ದೇವರಾಜ ಅರಸರವರು ಈ ರೀತಿ ಶಿಫಾರಸ್ಸು ಮಾಡಿದ ಹಾವನೂರ ಸಮಿತಿಯ ವರದಿಯನ್ನು ಅನುಷ್ಠಾನ ಗೊಳಿಸುವದರ ಮೂಲಕ ಸಾಮಾಜಿಕ ನ್ಯಾಯ ಒದಗಿಸಲು ಮುಂದಾಯಿತು. ಪರಿಣಾಮ ಗೊಂದಲಿಗ ಸಮುದಾಯವನ್ನು ಪರಿಶಿಷ್ಟ ಜಾತಿ–ಜನಾಂಗದ ಸಮಾನಾಗಿ ಪರಿಗಣಿಸಿದ್ದರಿಂದ ಇವರನ್ನು ಹಿಂದುಳಿದ ಬುಡಕಟ್ಟುಗಳ ಪಟ್ಟಿಯಡಿಯಲ್ಲಿ ಮೀಸಲಾತಿಯ ಅವಕಾಶವನ್ನು ಮತ್ತು ಅವರಿಗೆ ಸಲ್ಲುತ್ತಿದ್ದ ಎಲ್ಲಾ ರೀತಿಯ ಸೌಲಭ್ಯಗಳನ್ನು ಆದಾಯದ ಮಿತಿಯಿಲ್ಲದೆ ಈ ಸಮುದಾಯದವರಿಗೂ ವಿಸ್ತರಿಸಿದ್ದು, ಇದರ ಪರಿಣಾಮದಿಂದಾಗಿ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲಿ, ಉದ್ಯೋಗದಲ್ಲಿ, ವಿದ್ಯಾರ್ಥಿ ವೇತನ, ಇತರೆ ಆರ್ಥಿಕ ಸೌಲಭ್ಯಗಳನ್ನು ಮೀಸಲಾತಿಯ ಅಡಿಯಲ್ಲಿ ಪಡೆದುಕೊಳ್ಳಲು ಸಾಧ್ಯವಾಗಿದ್ದು ಆಮೂಲಕ ಗೊಂದಲಿಗ ಸಮುದಾಯವು ಶೈಕ್ಷಣಿಕವಾಗಿ, ಆರ್ಥಿಕವಾಗಿ ಮುಂದುವರೆಯಲು ಅವಕಾಶ ಕಲ್ಪಿಸಿ ಕೊಡಲಾಯಿತು. ಆದರೂ ಸಮುದಾಯದ ಜನರು ಅಷ್ಟು ಅನುಕೂಲತೆಗಳನ್ನು ಪಡೆದುಕೊಂಡಿಲ್ಲ. ಹೀಗಾಗಿ ನಿರೀಕ್ಷಿತ ಮಟ್ಟದಲ್ಲಿ ಸಮಾಜದ ಮುಖ್ಯವಾಹಿನಿಯಲ್ಲಿ ಪಾಲ್ಗೊಳ್ಳುವಂತಾಗಲು ಸಾಧ್ಯವಾಗಲಿಲ್ಲವೆಂದು ಹೇಳಬೇಕು. ಜೊತೆಗೆ ಈ ವರದಿಯ ಆಧಾರದ ಮೇಲೆ ಸರ್ಕಾರವು ಹೊರಡಿಸಿದ ಆದೇಶವು ಸರ್ವೋನ್ನತ ನ್ಯಾಯಾಲಯದ ಮೆಟ್ಟಲೇರಿದ್ದರಿಂದ ಹಾಗೂ ನಂತರದಲ್ಲಿ ಬಂದ ಹೊಸ ಸರ್ಕಾರವು 'ಇನ್ನೊಂದು ಆಯೋಗವನ್ನು ನೇಮಿಸಲು ಸಿದ್ದವಿದೆ' ಎಂದು ನ್ಯಾಯಾಲಯಕ್ಕೆ ಲಿಖಿತ ಹೇಳಿಕೆಯನ್ನು ನೀಡಿದ್ದರಿಂದ ನಂತರದಲ್ಲಿ ಈ ವರದಿಯ ಮೀಸಲಾತಿಯು ಅಷ್ಟು ಪರಿಣಾಮಕಾರಿಯಾಗಿ ಜಾರಿಗೆ ಬಂದಿರುವದಿಲ್ಲ. ಹಾವನೂರ ಆಯೋಗವು ಹಿಂದುಳಿದ ಜಾತಿಗಳ ಬಗ್ಗೆ ವಿಸ್ತೃತವಾದ ಮಾಹಿತಿಯನ್ನು ಕಲೆ ಹಾಕಿದ ಹಾಗೂ ಹಿಂದುಳಿದ ವರ್ಗಗಳ ಅಭಿವೃದ್ಧಿಗೆ ನಾಂದಿಯಾದ ಆಯೋಗವೆಂದು ಹೆಸರು ಪಡೆದುಕೊಂಡಿದೆ. ಹಿಂದುಳಿದ ವರ್ಗಗಳ ಅಭಿವೃದ್ಧಿಯ ಹರಿಕಾರ ಎನ್ನುವ ರೀತಿಯಲ್ಲಿ ದಿ. ಡಿ.ದೇವರಾಜ ಅರಸುರವರನ್ನು ಕರೆಯುವಂತೆ, ಶ್ರೀ ಎಲ್.ಜಿ. ಹಾವನೂರರವರನ್ನು ಆ ಹಿನ್ನೆಲೆಯಲ್ಲಿಯೇ ಗುರುತಿಸಲಾಗುತ್ತದೆ.

**ವೆಂಕಟಸ್ವಾಮಿ ಆಯೋಗ - ೧೯೮೩**

ಕರ್ನಾಟಕದಲ್ಲಿ ನಂತರದ ಅವಧಿಯಲ್ಲಿ ಅಸ್ತಿತ್ವಕ್ಕೆ ಬಂದ ಶ್ರೀ ರಾಮಕೃಷ್ಣ ಹೆಗಡೆಯವರ ಸರ್ಕಾರವು ೧೯೮೩ರಲ್ಲಿ ವೆಂಕಟಸ್ವಾಮಿ ಆಯೋಗವನ್ನು ರಚಿಸಲಾಯಿತು. ಮೂರು ವರ್ಷಗಳವರೆಗೆ ಸಮೀಕ್ಷೆ-ಅಧ್ಯಯನ ಕಾರ್ಯವನ್ನು ನಿರ್ವಹಿಸಿ, ಮೂರು ಸಂಪುಟಗಳ ೧೦೨೨ ಪುಟಗಳ ವರದಿ ಯನ್ನು ೧೯೮೬ರಂದು ಸರ್ಕಾರಕ್ಕೆ ಸಲ್ಲಿಸಿತು. ರಾಜ್ಯದ ಪ್ರಬಲ ಸಮುದಾಯಗಳಾದ ಲಿಂಗಾಯತ, ಒಕ್ಕಲಿಗರು ಸೇರಿದಂತೆ ವೈಶ್ಯರು, ಬಲಿಜ, ದೇವಾಂಗ, ಗಾಣಿಗ ಮುಂತಾದ ೧೩ ಸಮುದಾಯಗಳನ್ನು, ಶಿಕ್ಷಣ ಮತ್ತು ಉದ್ಯೋಗದ ಮೀಸಲಾತಿಯಿಂದ ಹೊರಗಿಟ್ಟು, ತನ್ನ ವರದಿಯನ್ನು ಸಲ್ಲಿಸಿದ್ದರಿಂದ ಲಿಂಗಾಯತ-ಒಕ್ಕಲಿಗ ಸಮುದಾಯಗಳು ವೆಂಕಟಸ್ವಾಮಿ ಆಯೋಗದ ವರದಿಯ ವಿರುದ್ಧ ರಾಜ್ಯಾದ್ಯಂತ ಪ್ರತಿಭಟಿಸಿದರು. ಪ್ರಬಲ ಕೋಮುಗಳ ಪ್ರತಿಭಟನೆಯ ಪರಿಣಾಮ, ಶ್ರೀ ರಾಮಕೃಷ್ಣ ಹೆಗಡೆ ನೇತೃತ್ವದ ಸರ್ಕಾರವು ಈ ವರದಿಯನ್ನು ತಿರಸ್ಕರಿಸಿತು. ಆ ಸಂದರ್ಭದಲ್ಲಿ "ಹಿಂದುಳಿದವರಿಗೆ ಮಾತ್ರ ಮೀಸಲಾತಿ ನೀಡಬೇಕೆಂದು ಪ್ರತಿಪಾದಿಸಿದ್ದ ಈ ವರದಿಯನ್ನು, ಅನುಷ್ಠಾನ ಗೊಳಿಸದೆ, ರಾಜಕೀಯವಾಗಿ ಬಲಿಷ್ಠ ವ್ಯಕ್ತಿಗಳ-ಜಾತಿಗಳ ಒತ್ತಡಕ್ಕೆ ಹೆಗಡೆಯವರು ಮಣಿದರು" ಎಂಬ ಆರೋಪಗಳು ಕೇಳಿ ಬಂದವು. ಪರಿಣಾಮ ಎಲ್ಲಾ ಸಮುದಾಯಗಳಿಗೂ ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿಯನ್ನು ನೀಡುವ ದೃಷ್ಟಿಯಿಂದ ಸರ್ಕಾರವು ತಾತ್ಕಾಲಿಕ ಮೀಸಲಾತಿಯನ್ನು ಜಾರಿಗೆ ತಂದಿತು. ದಿನಾಂಕ ೦೭-೧೦-೧೯೮೬ ರಂದು ಹೊಸ ತಾತ್ಕಾಲಿಕ ಮೀಸಲಾತಿ ನೀತಿಯ ಆದೇಶವನ್ನು ಜಾರಿ ಮಾಡಿದ್ದು, ಹಿಂದುಳಿದ ವರ್ಗಗಳ ಆಯೋಗವು ರಚನೆಯಾಗುವವರೆಗೂ, ಈ ಆಜ್ಞೆಯು ಜಾರಿಯಲ್ಲಿರುತ್ತದೆ, ಎಂಬುದಾಗಿತ್ತು. ಈ ಹೊಸ ತಾತ್ಕಾಲಿಕ ಆದೇಶದಲ್ಲಿ ಮೀಸಲಾತಿ ಗಾಗಿ 'A', 'B', 'C', 'D', ಹಾಗೂ 'E', ಎಂದು ಗುಂಪುಗಳನ್ನಾಗಿ ವಿಂಗಡಿಸಲಾಗಿದ್ದು, (A-5%, B-15%, C- 16%, D- 09%, E-05%) ಗೊಂದಲಿಗರನ್ನು 'A' ಗುಂಪಿಗೆ ಸೇರಿಸಿ, ಶಿಕ್ಷಣ ಹಾಗು ಉದ್ಯೋಗಗಳಲ್ಲಿ ಶೇಕಡಾ ೫ ರ ಮೀಸಲಾತಿಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಗಳಿಗೆ ದೊರಕುವ ಸೌಲಭ್ಯಗಳನ್ನು ವಿಸ್ತರಿಸಲಾಯಿತು. ಇದರಿಂದ ಹಿಂದುಳಿದ ಬುಡಕಟ್ಟುಗಳಿಗೆ ದೊರಕುತ್ತಿದ್ದ ಸೌಲಭ್ಯಗಳು ಸರ್ಕಾರಿ ಆದೇಶದನ್ವಯ (ಮೀಸಲಾತಿ ಆದೇಶ ನಂ ಎಸ್.ಡಬ್ಲೂ.ಎಲ್.೬೬ ಬಿಸಿಎ ೮೬,೧೯೮೬) ಕಲ್ಪಿಸಿಕೊಡಲಾಯಿತು. ಆದರೆ 'A' ಗುಂಪಿನಲ್ಲಿ ೬೮ ಜಾತಿಗಳು ಸೇರ್ಪಡೆ ಯಾಗಿದ್ದರಿಂದ ಗೊಂದಲಿಗ ಸಮುದಾಯದವರಿಗೆ ಹೆಚ್ಚು ಅವಕಾಶಗಳ ಪ್ರಾತಿನಿಧ್ಯವನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ.

**ಚಿನ್ನಪ್ಪ ರೆಡ್ಡಿ ಆಯೋಗ - ೧೯೮೮**

ವೆಂಕಟಸ್ವಾಮಿ ಆಯೋಗದ ವರದಿಯನ್ನು ತಿರಸ್ಕರಿಸಿದ ನಂತರ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ಜಾತಿಗಳನ್ನು ಗುರುತಿಸಲು ಹಾಗೂ ಮೀಸಲಾತಿಯನ್ನು ಕಲ್ಪಿಸುವ ಸಲುವಾಗಿ ಸರ್ಕಾರವು ಮಾರ್ಚ್ ೯, ೧೯೮೮ರಂದು ಓ. ಚಿನ್ನಪ್ಪ ರೆಡ್ಡಿಯವರ ಅಧ್ಯಕ್ಷತೆಯಲ್ಲಿ ರಾಜ್ಯದ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಿದ್ದು, ಹಿಂದುಳಿದ ಜಾತಿಗಳನ್ನು ೩ ಭಾಗಗಳಲ್ಲಿ

ವಿಂಗಡಿಸಿ, ೫೨ ಜಾತಿಗಳನ್ನೊಳಗೊಂಡ ಪ್ರವರ್ಗ- I ಕ್ಕೆ ಶೇ. ೫, ೧೪ ಜಾತಿಗಳನ್ನೊಳಗೊಂಡ ಪ್ರವರ್ಗ-IIಕ್ಕೆ ಶೇ. ೨೮, ಇತರ ಜಾತಿಗಳನ್ನೊಳಗೊಂಡ III ಕ್ಕೆ ಶೇ. ೫ರಷ್ಟು ಮೀಸಲಾತಿಯನ್ನೊಳಗೊಂಡ ವರದಿಯನ್ನು ೧೯೯೦ ಎಪ್ರೀಲ್ ತಿಂಗಳಿನಲ್ಲಿ ಸರ್ಕಾರಕ್ಕೆ ಸಲ್ಲಿಸಿದರು. ಆದರೆ ಆ ಸಂದರ್ಭದಲ್ಲಿ ಆಡಳಿತದಲ್ಲಿದ್ದ ಯಾವದೇ ಸರ್ಕಾರಗಳು ಯಾವದೇ ರೀತಿ ಜಾರಿಗೆ ತರುವ ಪ್ರಯತ್ನವನ್ನು ಮಾಡಲಿಲ್ಲ. ಇದೇ ಸಂದರ್ಭದಲ್ಲಿ ಸುಪ್ರಿಂ ಕೋರ್ಟ ೧೯೯೨ರಲ್ಲಿ ತೀರ್ಪು ನೀಡಿ, ಮಂಡಲ್ ವರದಿ ಜಾರಿಗೆ ಅನುವು ಮಾಡಿಕೊಟ್ಟಿದ್ದರಿಂದ ಶ್ರೀ ವಿ.ಪಿ. ಸಿಂಗ್‌ರವರು ಪ್ರದಾನಮಂತ್ರಿಗಳಾಗಿದ್ದಾಗ ಮಂಡಲ್ ವರದಿಯನ್ನು ಅಲ್ಪ-ಸ್ವಲ್ಪ ಬದಲಾವಣೆಗಳೊಂದಿಗೆ ಕೇಂದ್ರ ಸರ್ಕಾರವು ಜಾರಿಗೆ ತಂದಿದ್ದರಿಂದ ರಾಜ್ಯ ಸರ್ಕಾರವು ಸಹ ಚಿನ್ನಪ್ಪ ರೆಡ್ಡಿ ವರದಿಯನ್ನು ಜಾರಿಗೆ ತರಲು ಚಿಂತನೆ ನಡೆಸಿತು. ಪರಿಣಾಮ ಚಿನ್ನಪ್ಪ ರೆಡ್ಡಿ ವರದಿಯ ಮೂಲ ಸ್ವರೂಪದಲ್ಲಿಯೇ ಅಲ್ಪ-ಸ್ವಲ್ಪ ಮಾರ್ಪಾಡು ಗಳನ್ನು ಮಾಡಿ, ೧೯೯೪ ಏಪ್ರೀಲ್ ೨೦ರಂದು ವರದಿಯನ್ನು ಜಾರಿಗೊಳಿಸಲಾಯಿತು. ಅತೀ ಹಿಂದುಳಿದ ಅಲೆಮಾರಿ-ಅರೆಅಲೆಮಾರಿ ಬುಡಕಟ್ಟು ಎಂದು ಗುರುತಿಸಲ್ಪಟ್ಟಿದ್ದ ಗೊಂದಲಿಗ ಸಮುದಾಯವನ್ನು ಹಿಂದುಳಿದ ವರ್ಗಗಳ ಪ್ರವರ್ಗ-Iರಲ್ಲಿ ಸೇರಿಸಿತು. ಇದರಡಿಯಲ್ಲಿ ಶಿಕ್ಷಣ ಮತು ಉದ್ಯೋಗ ಕ್ಷೇತ್ರದಲ್ಲಿ ೫%ರಷ್ಟು ಮೀಸಲಾತಿಯನ್ನು ರಾಜ್ಯಸರ್ಕಾರವು ಈ ಪ್ರವರ್ಗಕ್ಕೆ ನಿಗದಿಪಡಿಸಿ, ಗೊಂದಲಿಗರು ಸೌಲಭ್ಯಗಳನ್ನು ಪಡೆದುಕೊಳ್ಳಲು ಅನುವು ಮಾಡಿಕೊಟ್ಟಿದೆ. ಅಷ್ಟೇ ಅಲ್ಲ ಸರ್ಕಾರದ ಆದೇಶದ ಸಂಖ್ಯೆ: ಪಿಎಚ್‌ಎಸ್ ೨೬೨ ಎಸ್‌ಇಡಬ್ಲ್ಯೂ. ೬೫, ದಿನಾಂಕ ೦೧.೦೨.೧೯೯೬ರ ಆದೇಶದನ್ವಯ ೪೬ ಸಮುದಾಯಗಳನ್ನು ಅಲೆಮಾರಿ-ಅರೆಅಲೆಮಾರಿ ಜನಾಂಗ ವೆಂದು, ಸರ್ಕಾರ ಗುರುತಿಸಿದ್ದು, ಯಾವದೇ ರೀತಿ ಆದಾಯದ ಮಿತಿ ಇಲ್ಲದೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟು, ಸಮಾಜದ ಮುಖ್ಯವಾಹಿನಿಗೆ ತರಲು ಪ್ರಯತ್ನಿಸುತಿದೆ.

ಹಲವಾರು ದಶಕಗಳಿಂದ ಪ್ರತಿಭಟನೆ-ಹೋರಾಟ ಮಾಡುತ್ತಾ ಬಂದಿರುವ ಗೊಂದಲಿಗರ ಬಹುದಿನ ಕನಸಾಗಿರುವ ಪರಿಶಿಷ್ಟ ಪಂಗಡಕ್ಕೆ ಸೇರಿಸಬೇಕೆಂಬ ಒತ್ತಾಯಗಳಿಗೆ ಸರ್ಕಾರದ ಯಾವದೇ ರೀತಿ ಸ್ಪಂದನೆ-ಸಕಾರಾತ್ಮಕವಾದ ನಿಲವು-ನಿರ್ಧಾರಗಳಿಲ್ಲದೆ, ಇರುವದರಿಂದ, ಒಂದು ರೀತಿ ನಿಷ್ಪಲವಾದ ಹೋರಾಟದ ಪ್ರಯತ್ನವಾಗುತ್ತಿದೆ. ಸ್ವಾತಂತ್ರ್ಯದ ನಂತರದಿಂದಲೂ, ಬರುವ ಪ್ರತಿಯೊಂದು ಸರ್ಕಾರಗಳಿಗೂ ಸುಮಾರು ೫೦-೬೦ ಶಾಸಕರ ಸಹಿ ಮಾಡಿಸಿ ಮನವಿ ಪತ್ರಗಳನ್ನು ಕೊಟ್ಟಿದ್ದಾರೆ, ಕೇಂದ್ರದಲ್ಲಿ ಶ್ರೀಮತಿ ಸೋನಿಯಾ ಗಾಂಧಿಯವರಿಗೂ ಮನವಿ ಪತ್ರಗಳನ್ನು ಕೊಟ್ಟಿದ್ದಾರೆ, ಆದರೂ ಯಾವದೇ ಪ್ರಯೋಜನವಾಗದಿರುವದು, ಸರ್ಕಾರದ ನಿರ್ಲಕ್ಷ ಮನೋಭಾವನೆಯನ್ನು ಎತ್ತಿ ತೋರಿಸುತ್ತದೆ. ಇತ್ತೀಚೆಗೆ ಕೇಂದ್ರ ಸರ್ಕಾರವು ಶ್ರೀ ಬಾಳಕೃಷ್ಣ ರೇಣುಕೆ ಯವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ವಿಮುಕ್ತ, ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಆಯೋಗವನ್ನು ರಚಿಸಲಾಗಿದ್ದು ೨೦೦೮ರಲ್ಲಿ ತನ್ನ ವರದಿಯನ್ನು, ಕೇಂದ್ರ ಸಕಾರಕ್ಕೆ ನೀಡಿದೆ. ಆದರೆ ಕೇಂದ್ರ ಸರ್ಕಾರವು ಸಹ ಈ ವರದಿಯನ್ನು ಜಾರಿಗೆ ತರುವಲ್ಲಿ ಪ್ರಾಮಾಣಿಕವಾದ ಪ್ರಯತ್ನವನ್ನು

ಮಾಡುತ್ತಿಲ್ಲ. ಕೊನೆಗೆ ಆ ವರದಿಯ ಜಾರಿಯಿಂದಲಾದರೂ, ಕೇಂದ್ರ ಮಟ್ಟದಲ್ಲಿಯೂ ಸಹ ಪ್ರತ್ಯೇಕವಾಗಿ ಮೀಸಲಾತಿಯು ದೊರಕಬಹುದಾಗಿದೆ.

**೬.೪.೨. ಮೀಸಲಾತಿ ಸೌಲಭ್ಯಗಳು**

"ಶತಮಾನಗಳಿಂದ ಮೂಕವಾಗಿ ಅಪಮಾನ ಮತ್ತು ವಂಚನೆಗೆ ಒಳಗಾದ ಸಮುದಾಯಗಳಿಗೆ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಅತ್ಯಂತ ಹಿಂದುಳಿದ, ಅಶಕ್ತರು, ಅವಕಾಶವಂಚಿತ ಸಮುದಾಯಗಳನ್ನು ಮೇಲೆತ್ತುವ ಉದ್ದೇಶದಿಂದ, ಸಂವಿಧಾನಬದ್ಧವಾಗಿ ಕೆಲವು ವಿಶೇಷ ಅವಕಾಶಗಳನ್ನು ಕಲ್ಪಿಸಿಕೊಟ್ಟು, ಅವರ ಸ್ಥಿತಿಯನ್ನು ಉತ್ತಮಪಡಿಸಲು ರೂಪಿಸಿದ ಒಂದು ವ್ಯವಸ್ಥೆಯೇ ಮೀಸಲಾತಿ. ಈ ಮೀಸಲಾತಿ ನೀತಿಯನ್ನು ಸಂವಿಧಾನ ಜಾರಿಗೆ ಬಂದ ೧೯೫೦ ಜನೇವರಿ ೨೬ರ ದಿನದಿಂದಲೇ ಅನುಷ್ಠಾನಕ್ಕೆ ತರಲಾಗಿದೆ. ಡಾ. ಅಂಬೇಡ್ಕರ ಅವರ ಚಿಂತನೆಯ ಫಲವಾಗಿ ಸಾಮಾಜಿಕವಾಗಿ ಮತು ಶೈಕ್ಷಣಿಕವಾಗಿ ಹಿಂದುಳಿದಿರುವ ಎಲ್ಲಾ ಜಾತಿ ಮತು ಪಂಗಡಗಳಿಗೆ ವಿಶೇಷ ಕಾರ್ಯಕ್ರಮಗಳು, ಸೌಲಭ್ಯಗಳು ಅದರಲ್ಲೂ ಶೈಕ್ಷಣಿಕ ಸಂಸ್ಥೆಗಳ ಪ್ರವೇಶದ ಸಲುವಾಗಿ, ಸಂವಿಧಾನದ ಪರಿಚ್ಛೇದ ೧೫(೪)ನೇ ವಿಧಿ ಅಳವಡಿಸಿ ಸಂವಿಧಾನ ಬದ್ದವಾಗಿ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಲಾಗಿದೆ."[೨೦]

ಜಾತಿ ವ್ಯವಸ್ಥೆಯು ಹುಟ್ಟು ಹಾಕಿರುವ ಅಸಮಾನತೆ-ತಾರತಮ್ಯವನ್ನು ಹೋಗಲಾಡಿಸಲು ಸಮತಾ ಸಮಾಜವಾದವನ್ನು ನೆಲೆಗೊಳಿಸಲು ಆ ಮೂಲಕ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯಲು ಸಂವಿಧಾನದಡಿಯಲ್ಲಿ ಮೀಸಲಾತಿ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂದೇ ಅಸ್ಪೃಶ್ಯರು, ಬುಡಕಟ್ಟು, ಜನಾಂಗಗಳನ್ನು ಪರಿಶಿಷ್ಟ ಜಾತಿ-ಪಂಗಡಗಳ ಪಟ್ಟಿಯಲ್ಲಿ ಸೇರಿಸುವುದರ ಮೂಲಕ ಆರ್ಥಿಕ, ಶೈಕ್ಷಣಿಕ, ರಾಜಕೀಯ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟು ಸಮಾಜದ ಮೇಲುಸ್ತರದಲ್ಲಿ ತರುವ ಪ್ರಯತ್ನ ನಡೆದಿರುವುದು ಒಂದು ಕಡೆಯಾದರೆ, ಇನ್ನೊಂದೆಡೆಗೆ ಅದೇ ರೀತಿಯ ಪರಿಸ್ಥಿತಿಯಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಸ್ಥಿತಿ-ಗತಿಯನ್ನು ಹೊಂದಿರುವ, ಯಾವುದೇ ರೀತಿಯಲ್ಲಿ ಸಮಾಜದ ಮುಖ್ಯವಾಹಿನಿಯಲ್ಲಿ ಪಾಲ್ಗೊಳ್ಳದೇ, ಇನ್ನೂ ಅನೇಕ ಸಮುದಾಯಗಳು ಅದರಲ್ಲೂ ಅಲೆಮಾರಿ-ಅರೆಅಲೆಮಾರಿ, ಬುಡಕಟ್ಟು ಸಮುದಾಯಗಳು ಸರ್ಕಾರದ ಮೀಸಲಾತಿ ಸೌಲಭ್ಯಗಳನ್ನು ಪಡೆದುಕೊಳ್ಳದೇ ದುಸ್ಥಿತಿಯ ಪರಿಸ್ಥಿತಿಯಲ್ಲಿ ತೊಳಲಾಡುತ್ತಿರುವುದು. ಪರಿಶಿಷ್ಟ ಜಾತಿ-ಪಂಗಡಗಳ ಪಟ್ಟಿಯನ್ನು ಹೊರತುಪಡಿಸಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಿಂದುಳಿದ ವರ್ಗಗಳನ್ನು ಹಾಗೂ ಅಲೆಮಾರಿ-ಅರೆಅಲೆಮಾರಿ ಸಮುದಾಯಗಳನ್ನು ಗುರುತಿಸಲು, ಕೇಂದ್ರ ಹಾಗೂ ರಾಜ್ಯ ಮಟ್ಟದಲ್ಲಿ ಹಲವಾರು ಆಯೋಗಗಳು ನೇಮಕಗೊಂಡಿದ್ದು, ಅಂತಹ ಸಮುದಾಯಗಳಿಗೆ ಸಾಮಾಜಿಕ ನ್ಯಾಯವನ್ನು ಒದಗಿಸುವ ಪ್ರಯತ್ನಗಳು ನಡೆದಿರುವದನ್ನು ಕಾಣುತ್ತೇವೆ.

"ನವದೆಹಲಿಯ ರಾಷ್ಟ್ರೀಯ ವಿಮುಕ್ತ, ಅಲೆಮಾರಿ ಮತ್ತು ಅರೆಅಲೆಮಾರಿ ಬುಡಕಟ್ಟುಗಳ ಆಯೋಗದ ಅಂದಾಜು ಪಟ್ಟಿಯ ಪ್ರಕಾರ ಭಾರತದ ೨೩ ರಾಜ್ಯಗಳಲ್ಲಿ ಮತ್ತು ೫ ಕೇಂದ್ರಾಡಳಿತ

ಪ್ರದೇಶಗಳಲ್ಲಿ ಒಟ್ಟು ೭೪೯ ವಿಮುಕ್ತ ಮತ್ತು ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿವೆ. ಪ್ರಸ್ತುತ ಭಾರತದಲ್ಲಿ ಇವುಗಳ ಒಟ್ಟು ಜನಸಂಖ್ಯೆ ಸುಮಾರು ೧೦ ಕೋಟಿಯನ್ನು ಮೀರಿದೆ. ಅಂದರೆ ಭಾರತದ ಒಟ್ಟು ಜನಸಂಖ್ಯೆಯ ಸುಮಾರು ಶೇ. ೧೦ರಷ್ಟು ಜನ ಈ ಹಿನ್ನೆಲೆಯವರಿರುವರು. ಮಹಾರಾಷ್ಟ್ರದ ರಾಜ್ಯದಲ್ಲಿ ಅತ್ಯಧಿಕ ಅಂದರೆ ೭೩ ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿದ್ದರೆ, ಎರಡನೇಯ ಸ್ಥಾನ ೫೬ ಅಲೆಮಾರಿ ಸಮುದಾಯಗಳನ್ನು ಹೊಂದಿದ ಕರ್ನಾಟಕ ರಾಜ್ಯಕ್ಕೆ ಸಲ್ಲುತ್ತದೆ. ಇಂತಹ ಸಮುದಾಯಗಳು ಭಾರತೀಯ ಸಂವಿಧಾನದ ಮೀಸಲಾತಿಯಲ್ಲಿ ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಹಂಚಿ ಹೋಗಿವೆ."[೨೧]

ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಮೈಸೂರ ಸಂಸ್ಥಾನದ ಆಳ್ವಿಕೆಯ ಅವಧಿಯಲ್ಲಿ ಹಿಂದುಳಿದ ವರ್ಗಗಳ ಹಿತರಕ್ಷಣೆಯ ಹಿನ್ನೆಲೆಯಲ್ಲಿ ೧೯೧೭ರಲ್ಲಿ ಮಿಲ್ಲರ್ ಸಮಿತಿಯನ್ನು ನೇಮಕ ಮಾಡಲಾಗಿತ್ತು. ಹಾಗೆಯೇ ಸ್ವಾತಂತ್ರ್ಯದ ನಂತರ ನಾಲ್ಕು ಹಿಂದುಳಿದ ವರ್ಗಗಳ ಆಯೋಗಗಳಾದ

೧. ೧೯೬೦ ನಾಗನಗೌಡ ಸಮಿತಿ-ಪ್ರಥಮ ಹಿಂದುಳಿದ ಆಯೋಗ

೨. ಎಲ್.ಜಿ. ಹಾವನೂರ ಆಯೋಗ ೧೯೭೨

೩. ೧೯೮೩ರ ವೆಂಕಟಸ್ವಾಮಿ ಆಯೋಗ

೪. ೧೯೮೭ರಲ್ಲಿ ಚಿನ್ನಪ್ಪರೆಡ್ಡಿ, ಆಯೋಗಳನ್ನು ರಚಿಸಲಾಗಿತ್ತು.

ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ಹಿಂದುಳಿದ ವರ್ಗಗಳ ಮೀಸಲಾತಿಯನ್ನು ಚಿನ್ನಪ್ಪರೆಡ್ಡಿ ಆಯೋಗದ ವರದಿಯಲ್ಲಿ ಕೆಲವಾರು ಮಾರ್ಪಾಡುಗಳನ್ನು ಮಾಡಿ ಅದಕ್ಕನುಗುಣವಾಗಿ ಮೀಸಲಾತಿ ಪ್ರಮಾಣವನ್ನು ಮತ್ತು ಪೂರಕವಾಗಿ ಸರ್ಕಾರಿ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಕ್ರಮ ಕೈಗೊಂಡಿದೆ. ಈ ಹಿನ್ನೆಲೆಯಲ್ಲಿ ಗೊಂದಲಿಗ, ಬುಡಬುಡಿಕೆ, ಜೋಶಿ ಎಂಬ ಹೆಸರುಗಳಿಂದ ಗುರುತಿಸಲ್ಪಟ್ಟ ಗೊಂದಲಿಗ ಸಮುದಾಯವು ಪ್ರವರ್ಗ-೧ರ ಪಟ್ಟಿಯಲ್ಲಿ ಸೇರಿದೆ. ಈ ಪಟ್ಟಿಯಿಂದ ಗೊಂದಲಿಗ ಸಮುದಾಯದವರಿಗೆ ಪರಿಶಿಷ್ಟರಿಗೆ ಸಿಗುವ ಸೌಲಭ್ಯಗಳು ದೊರಕುತ್ತಿದ್ದರೂ, ಎಲ್ಲಾ ರೀತಿಯ ಸೌಲಭ್ಯಗಳನ್ನು ಪಡೆದುಕೊಳ್ಳಲು ಸಾಧ್ಯವಿಲ್ಲ. ಈ ದೃಷ್ಟಿಯಲ್ಲಿಯೇ ಕರ್ನಾಟಕ ಸರ್ಕಾರವು ಹಿಂದುಳಿದ ವರ್ಗಗಳ ಶೈಕ್ಷಣಿಕ, ಆರ್ಥಿಕ ಕ್ಷೇತ್ರದ ಸುಧಾರಣೆಗಾಗಿ, ಅಂದರೆ ಹಿಂದುಳಿದ ವರ್ಗಗಳ ಸಮಗ್ರ ಏಳ್ಗೆಗಾಗಿ ೧೯೭೫ರಲ್ಲಿ 'ಅಲ್ಪಸಂಖ್ಯಾತ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ'ವನ್ನು ಸ್ಥಾಪಿಸಿದ್ದು, ೨೦೦೫ರಲ್ಲಿ 'ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ' ಎಂದು ಮರುನಾಮಕರಣ ಮಾಡಿದೆ.

ಗೊಂದಲಿಗ ಸಮುದಾಯವನ್ನು ಸರ್ಕಾರಿ ಆದೇಶದನ್ವಯ ಅಲೆಮಾರಿ/ಅರೆ ಅಲೆಮಾರಿ ಜನಾಂಗವೆಂದು ಗುರುತಿಸಿದ್ದು, ಕೇಂದ್ರ ಸರ್ಕಾರದ ಆರ್ಥಿಕ ನೆರವಿನೊಂದಿಗೆ ವಸತಿ, ಶಿಕ್ಷಣ, ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಲು ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗುತ್ತಿದ್ದು, ಡಿ. ದೇವರಾಜ

ಅರಸು ಅಭಿವೃದ್ಧಿ ನಿಗಮದಿಂದ ಸಬ್ಸಿಡಿ ಮತ್ತು ಕಡಿಮೆ ಬಡ್ಡಿದರದಲ್ಲಿಯ ಸಾಲ ಸೌಲಭ್ಯವನ್ನು ಒದಗಿಸಲಾಗುತ್ತಿದ್ದು, ಅದನ್ನು ಪಡೆದುಕೊಳ್ಳಬೇಕಾದರೆ ಅದಕ್ಕೆ ಸಾಕಷ್ಟು ಕಾಗದ ಪತ್ರಗಳನ್ನು ಜಾಮೀನುದಾರರನ್ನು ತಯಾರು ಮಾಡಬೇಕಾಗುತ್ತದೆ. ಅದು ಕೊಡುವುದು, ೧೫೦೦೦ರಿಂದ ೨೫೦೦೦ ರೂ.ಗಳವರೆಗೆ ಮಾತ್ರ, ಅಲ್ಲದೆ ಇಂತಹ ಸೌಲಭ್ಯಗಳು ಕೇವಲ, ಕೆಲವೇ ಜನರಿಗೆ ಅನುಕೂಲವಾಗುತ್ತವೆ.

ಅಲೆಮಾರಿ-ಅರೆಅಲೆಮಾರಿ ಸಮುದಾಯಗಳ ಏಳ್ಗೆಗಾಗಿ ಪ್ರಮುಖವಾಗಿ ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗಿದ್ದು, ಅವುಗಳನ್ನು ಗೊಂದಲಿಗರು ಪಡೆದುಕೊಳ್ಳುತ್ತಿದ್ದಾರೆ. ಶಾಲೆ-ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಶುಲ್ಕ ರಹಿತ ಪ್ರವೇಶ, ಸರ್ಕಾರಿ-ವಿಶ್ವವಿದ್ಯಾಲಯಗಳ ಹಾಸ್ಟೆಲ್‌ಗಳಲ್ಲಿ ಉಚಿತ ಪ್ರವೇಶಾವಕಾಶವನ್ನು ಕಲ್ಪಿಸಿಕೊಡಲಾಗಿದೆ. ಇದರ ಜೊತೆಗೆ ಮಾಧ್ಯಮಿಕ ಶಿಕ್ಷಣದ ಹಂತದಿಂದಲೇ, ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್‌ನ್ನು ಕೊಡಲಾಗಿದೆ. ತಾಂತ್ರಿಕ, ವೈದ್ಯಕೀಯ ಶಿಕ್ಷಣವನ್ನು ಆದಾಯದ ಮಿತಿಯಿಲ್ಲದೆ ಪ್ರವೇಶಾವಕಾಶವನ್ನು ಪಡೆದುಕೊಳ್ಳ ಬಹುದಾಗಿದೆ.

ರಾಜೀವಗಾಂಧಿ ಗ್ರಾಮೀಣ ವಸತಿ ನಿಗಮವು ವಸತಿರಹಿತ ಜನರಿಗೆ ವಸತಿ ಸೌಲಭ್ಯವನ್ನು ಕಲ್ಪಿಸಿಕೊಡುವುದಾಗಿದೆ. ವಸತಿ ಸೌಲಭ್ಯಕ್ಕೆ ಸಂಬಂಧಿಸಿದಂತೆ ಜಿಲ್ಲಾ-ತಾಲೂಕ ಪಂಚಾಯತಿ ಅಡಿಯಲ್ಲಿ ಕೇವಲ ಬೆರಳೆಣಿಕೆಯಷ್ಟು ವಸತಿ ನಿರ್ಮಾಣಕ್ಕೆ ಅನುದಾನ ಇರುವುದರಿಂದ ಈ ವರ್ಗದಲ್ಲಿ ಬರುವ ಎಲ್ಲಾ ಸಮುದಾಯಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಇದರಿಂದ ಬಹುಪಾಲು ಜನರಿಗೆ ಇದರ ಲಾಭ ತಟ್ಟದು. ಹೀಗಾಗಿ ಗೊಂದಲಿಗರಲ್ಲಿ ಸರ್ಕಾರದ ವಸತಿ ಸೌಲಭ್ಯದ ಅನುಕೂಲತೆಗಳನ್ನು ಪಡೆದುಕೊಳ್ಳಲು ಸಾಧ್ಯವಾಗದ ಕಾರಣ, ಇನ್ನೂ ಅನೇಕರು ಗುಡಿಸಲು-ಗುಡಾರ ನಿವಾಸಿಗಳೇ ಆಗಿರುವುದು ಕಂಡುಬರುತ್ತದೆ.

ಚಿಕ್ಕ ರೈತರಿಗೆ ಕೃಷಿ ಉದ್ಯೋಗಕ್ಕೆ ಸಂಬಂಧಿಸಿದಂತೆ, ನೀರಾವರಿ ಸೌಲಭ್ಯ ವಿಸ್ತರಣೆಗಾಗಿ ಸಬ್ಸಿಡಿಯಲ್ಲಿ ಸಾಲ ಸೌಲಭ್ಯದ ಅನುಕೂಲತೆಗಳು ಇದ್ದರೂ, ಗೊಂದಲಿಗರಲ್ಲಿ ಕೃಷಿ ಭೂಮಿಯನ್ನು ಹೊಂದಿರುವವರು ಅತ್ಯಲ್ಪ ಪ್ರಮಾಣದಲ್ಲಿದ್ದಾರೆ. ಹೀಗಾಗಿ ಇದರ ಅನುಕೂಲತೆಯನ್ನು ಪಡೆದುಕೊಳ್ಳಲು ಆಗುತ್ತಿಲ್ಲ. ಸರ್ಕಾರಿ ಉದ್ಯೋಗಕ್ಕೆ ಸಂಬಂಧಪಟ್ಟಂತೆ, ಈ ಪ್ರವರ್ಗದ ಅಡಿಯಲ್ಲಿ ಹಲವಾರು ಜಾತಿ-ಸಮುದಾಯಗಳು ಒಳಗೊಳ್ಳುವದರಿಂದಲೂ ನಿರೀಕ್ಷಿತ ಪ್ರಮಾಣದಲ್ಲಿ ಅವಕಾಶ ಪಡೆದುಕೊಳ್ಳ ಲಿಕ್ಕಾಗದೇ ಗೊಂದಲಿಗ ಸಮುದಾಯದ ಅನೇಕ ಸುಶಿಕ್ಷಿತರು ಉದ್ಯೋಗವಕಾಶಗಳಿಲ್ಲದ ಕಾರಣ ನಿರುದ್ಯೋಗಿಗಳು ಆಗಿದ್ದಾರೆ.

### ೬.೪.೩. ಹೋರಾಟದ ಪ್ರಯತ್ನಗಳು

ಬಹುಪಾಲು ಅಲೆಮಾರಿ-ಅರೆಅಲೆಮಾರಿ ಸಮುದಾಯಗಳು ಹಿಂದುಳಿದ ಪ್ರವರ್ಗ-೧ರಲ್ಲೇ ಬರುವುದರಿಂದ ಅನೇಕ ರೀತಿಯ ಸೌಲಭ್ಯಗಳನ್ನು ಪಡೆದುಕೊಳ್ಳಲಿಕ್ಕೆ ಸಾಧ್ಯವಾಗದೆ ಕಾರಣ ಗೊಂದಲಿಗರು ತಮ್ಮ ರಾಜ್ಯಮಟ್ಟದ ಸಂಘಟನೆಯ ಮೂಲಕ ತಮ್ಮನ್ನು 'ಪರಿಶಿಷ್ಟ ಪಂಗಡ'ದಲ್ಲಿ

ಸೇರಿಸಬೇಕು, ಇಲ್ಲಾ ಅಲೆಮಾರಿ ಅರೆ ಅಲೆಮಾರಿ ಸಮುದಾಯಗಳಿಗಾಗಿಯೇ ಪ್ರತ್ಯೇಕ ಮೀಸಲಾತಿ ನೀಡಿ, ಪರಿಶಿಷ್ಟರ ರೀತಿಯ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂದು ಒತ್ತಾಯಿಸುತ್ತಲೇ ಬಂದಿದ್ದಾರೆ. ಏಕೆಂದರೆ ಸ್ವಾತಂತ್ರ್ಯ ಸಿಕ್ಕು ೬೫ ವರ್ಷವಾದರೂ ಇಂತಹ ಸಮುದಾಯಗಳಿಗೆ ಸಂವಿಧಾನಬದ್ಧ ನ್ಯಾಯ ಒದಗಿಸುವ ಕಾರ್ಯ ಸಮರ್ಪಕವಾಗಿ ನಡೆಯುತ್ತಿರುವದನ್ನು ಕಾಣುತ್ತಿಲ್ಲ. ಕನ್ನಡ ಪುಸ್ತಕ ಪ್ರಾಧಿಕಾರದ ವತಿಯಿಂದ ಹೊರಬಂದ ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಯಡಿ ಯಲ್ಲಿಯ ಗ್ರಂಥಗಳ ಪ್ರಸ್ತಾವಣೆಯಲ್ಲಿ ಡಾ. ಕೆ.ಎಂ. ಮೈತ್ರಿಯವರು-"ಈ ಕುರಿತು ನ್ಯಾಯ ಒದಗಿಸ ಬೇಕಾದ ಸರಕಾರಗಳು, ಆಯೋಗಗಳು, ಸಮುದಾಯಗಳ ಸಂಘಟನೆಗಳು, ಸಂಶೋಧನಾ ಸಂಸ್ಥೆಗಳು ಮೂಕಾಗದೆ ಕುರುಡಾಗದೆ ಕಿವುಡಾಗದೆ ಜಾತಿಯಾಧಾರಿತ ಮೀಸಲಾತಿ ಅನುಸರಿಸುವ ಭಾರತ ಸರಕಾರ ಮತ್ತು ರಾಜ್ಯಸರಕಾರಗಳು ನಿರ್ಲಕ್ಷಿತ ಅಲೆಮಾರಿ ಸಮುದಾಯಗಳಿಗೆ ಮೊದಲು ಮೀಸಲಾತಿ ಪಟ್ಟಿಯಲ್ಲಿ ಸೂಕ್ತ ಸ್ಥಾನಮಾನ ಕಲ್ಪಿಸಬೇಕು ಇದು ಸಾಧ್ಯವಾಗದೇ ಇದ್ದಲ್ಲಿ, ಇಂದಿನ ಜಾತಿ ಆಧಾರಿತ ಮೀಸಲಾತಿಯನ್ನು ತಕ್ಷಣವೇ ಕೈಬಿಟ್ಟು ಭಾರತದ ಅಲೆಮಾರಿಗಳ ಅಭಿವೃದ್ಧಿಗಾಗಿ ಬೇರೆ ಕಾರ್ಯ ಯೋಜನೆಗಳನ್ನು ಮತ್ತು ಮಾರ್ಗಗಳನ್ನು ಅನುಸರಿಸುವುದು ಸೂಕ್ತ". ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಏಕೆಂದರೆ ಈ ಜಾತಿ ಆಧಾರಿತ ಮೀಸಲಾತಿಯು ಹೆಚ್ಚಾಗಿ ಬಲಿಷ್ಠರ ಪಾಲಾಗಿ ಬಲಹೀನರು ಅಂಚಿಗೆ ತಳ್ಳಲ್ಪಟ್ಟಿದ್ದಾರೆ. ಈ ರೀತಿಯ ಅಂಚಿಗೆ ತಳ್ಳಲ್ಪಟ್ಟವರಲ್ಲಿ, ಪ್ರತಿನಿತ್ಯ ತೀವ್ರವಾದ ಸಮಸ್ಯೆಗಳನ್ನು ಪ್ರಮುಖವಾಗಿ ಈ ಅಲೆಮಾರಿಗಳು ಮತ್ತು ವಿಮುಕ್ತ ಬುಡಕಟ್ಟಿನ ಜನರು ಎದುರಿಸುತ್ತಿದ್ದಾರೆ ಅಂದರೆ ತಪ್ಪಾಗಲಾರದು.

ಈ ಹಿನ್ನೆಲೆಯಲ್ಲಿಯೇ ಗೊಂದಲಿಗರು ರಾಜ್ಯಮಟ್ಟದಲ್ಲಿ, ಕೇಂದ್ರಮಟ್ಟದಲ್ಲಿ ಮುಖ್ಯಮಂತ್ರಿ ಪ್ರಧಾನಮಂತ್ರಿಗಳನ್ನು ಭೇಟಿಯಾಗಿ ತಮ್ಮ ಸಮುದಾಯವನ್ನು 'ಪರಿಶಿಷ್ಟ ಪಂಗಡ'ದಲ್ಲಿ ಸೇರಿಸಲು ಸಾಕಷ್ಟು ಪ್ರಯತ್ನಗಳನ್ನು ಹೋರಾಟಗಳನ್ನು ಮಾಡುತ್ತಾ ಬಂದಿರುವುದನ್ನು, ನೂರಾರು ಮನವಿಗಳನ್ನು ಕೊಟ್ಟಿದ್ದಾರೆ. ಅದರೂ ನಿರೀಕ್ಷಿತ ಫಲ ಸಿಕ್ಕಿಲ್ಲ ಕೇಂದ್ರ ಸರಕಾರವು ೨೦೦೬ರಲ್ಲಿ ಶ್ರೀ ಬಾಲಕೃಷ್ಣ ಎಸ್. ರೇಣುಕೆಯವರ ಅಧ್ಯಕ್ಷತೆಯಲ್ಲಿ ಶ್ರೀ ಲಕ್ಷ್ಮಣಬಾಯಿ ಪತಿನಿಯವರನ್ನೊಳಗೊಂಡ 'ರಾಷ್ಟ್ರೀಯ ವಿಮುಕ್ತ ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಆಯೋಗ'ವನ್ನು ನೇಮಕ ಮಾಡಿತು. ಈ ಸಮಿತಿಯು ತನ್ನ ವರದಿಯನ್ನು ೨೦೦೮ರಲ್ಲಿ ಕೇಂದ್ರ ಸರಕಾರಕ್ಕೆ ನೀಡಿದೆ. ಆದರೆ ರಾಜಕೀಯ ಏರಿಳಿತಗಳಿಂದಾಗಿ, ಮತ್ತು ಯಾವುದೇ ರೀತಿಯ ರಾಜಕೀಯ ಒತ್ತಡ ಇಲ್ಲದೇ ಇರುವುದರಿಂದ ಈ ವರದಿಯು ಯಾವದೇ ರೀತಿ ಶಾಸನ ಸಭೆಗಳಲ್ಲಿ ಸಹಿತ ಚರ್ಚೆಗೆ ಬರದೇ ಹಾಗೆ ಇದೆ. ಈ ಸಮಿತಿಯು ಪ್ರಮುಖವಾಗಿ ಪರಿಶಿಷ್ಟರಿಗೆ ಇರುವ ಹಾಗೆ, ಅಲೆಮಾರಿ ಮತ್ತು ಅರೆಅಲೆಮಾರಿಗಳಿಗೆ ಪ್ರತ್ಯೇಕವಾಗಿ, ಓಬಿಸಿಯವರಿಗೆ ಇರುವ ಶೇ. ೨೭ರ ಮೀಸಲಾತಿಯಲ್ಲಿಯೇ ಶೇ. ೭ರಷ್ಟು ಮೀಸಲಾತಿ ನೀಡಬೇಕು. ಅಲೆಮಾರಿಗಳಿಗಾಗಿ ಮುಂಗಡಪತ್ರದಲ್ಲಿ ಪ್ರತ್ಯೇಕ ಹಣಕಾಸು ಸೌಲಭ್ಯವನ್ನು ನೀಡಿ, ಶಿಕ್ಷಣ-ಉನ್ನತಶಿಕ್ಷಣ, ಉದ್ಯೋಗವಕಾಶಗಳು, ವಸತಿ ನಿರ್ಮಾಣ ಕಾರ್ಯಗಳನ್ನು ಕೈಗೊಳ್ಳುವುದು, ಇವರಿಗಾಗಿ ಸಾಮಾಜಿಕ-ಆರ್ಥಿಕ ವಲಯಗಳನ್ನು ಸ್ಥಾಪನೆ ಮಾಡಬೇಕು. ಹೀಗೆ ಅಲೆಮಾರಿಗಳ

ಶೈಕ್ಷಣಿಕ ಸುಧಾರಣೆಗಳಿಗಾಗಿ, ಆರ್ಥಿಕ ಅಭಿವೃದ್ಧಿಗಾಗಿ, ಉದ್ಯೋಗವಕಾಶಗಳನ್ನು ಹಾಗೂ ವಸತಿ ಸೌಲಭ್ಯಗಳನ್ನು ಕಲ್ಪಿಸಿಕೊಡುವುದರ ಬಗ್ಗೆ ಮಹತ್ವದ ಅಂಶಗಳನ್ನು ಸೂಚಿಸಿದೆ. ಈ ಹಿನ್ನೆಲೆಯಲ್ಲಿ ವರದಿಯ ಜಾರಿಗಾಗಿ ರಾಜ್ಯಮಟ್ಟದಲ್ಲಿನ 'ಅಲೆಮಾರಿ ಮತ್ತು ಅರೆಅಲೆಮಾರಿ ಸಮುದಾಯಗಳ ಸಂಘಟನೆ'ಗಳ ಮೂಲಕ ಜಿಲ್ಲಾ ಕೇಂದ್ರಗಳಲ್ಲಿ ಸಾಮೂಹಿಕವಾಗಿ ಪ್ರತಿಭಟನೆ ಮಾಡಿ, ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿ ವರದಿಯ ಜಾರಿಗಾಗಿ ಒತ್ತಾಯವನ್ನು ಮಾಡುತ್ತಿದ್ದಾರೆ.

**೬.೫. ಆಧುನಿಕತೆ ಮತ್ತು ಧಾರ್ಮಿಕತೆ**

ನೂರಾರು ವರ್ಷಗಳಿಂದೀಚೆಗೆ ಗೊಂದಲಿಗರಲ್ಲಿ ಕಂಡು ಬಂದಿರುವ ಹೊಸದಾದ ಹಾಗೂ ಅವರ ಜೀವನ ಮಾರ್ಗದಲ್ಲಿ ಒಂದುರೀತಿಯ ಬದಲಾವಣೆಯ ಗಾಳಿ ಬೀಸಲು ಚಾಲನೆ ನೀಡಿರುವದು 'ವಾರಕರಿ' ಸಂಪ್ರದಾಯಕ್ಕೆ ಒಳಗಾಗಿರುವದು. ಫಂಡರಪುರದ ಪಾಡುರಂಗ-ರುಕುಮಾಯಿಯರನ್ನು ಆರಾಧನೆ ಮಾಡುತ್ತಾ, ವರ್ಷದಲ್ಲಿ ಒಮ್ಮೆ ಅದು ಆಷಾಡ ಏಕಾದಶಿಯಾಗಲೀ, ಕಾರ್ತಿಕ ಏಕಾದಶಿಯ ಸಂದರ್ಭದಲ್ಲಿ ತಮ್ಮತಮ್ಮ ನೆಲೆಗಳಿಂದ ವಾರಕರಿ ದೀಕ್ಷೆಯನ್ನು ತೆಗೆದುಕೊಂಡ ಭಕ್ತಾದಿಗಳೆಲ್ಲರೂ ಕೂಡಿ ದಿಂಡಿಯಾತ್ರೆಯ ಮೂಲಕ ಫಂಡರಪೂರಕ್ಕೆ ಹೋಗುವರು. ಪ್ರತಿ ತಿಂಗಳು ಪ್ರತಿ ತಿಂಗಳು ಬರುವ ಏಕಾದಶಿಯಂದು ನಿರಾಹಾರಿಗಳಾಗಿಯೊ, ಇಲ್ಲವೇ ಉಪವಾಸ ವ್ರತವನ್ನು ಆಚರಿಸುತ್ತಾ ಮನೆಯಲ್ಲಿ ಸಂತ ಜ್ಞಾನೇಶ್ವರ, ಸಂತ ನಾಮದೇವ, ಸಂತ ತುಕಾರಾಮ್, ಸಂತ ಏಕನಾಥ, ಜನಾಬಾಯಿ ತಾಯಿಯವರು ರಚಿಸಿದ ಅಭಂಗಗಳನ್ನು ಪಠಣ ಮಾಡುವರು. ಅನೇಕರು ಕೆಲಸದ ವಿರಾಮದ ಸಂದರ್ಭದಲ್ಲಿಯೂ ತಮ್ಮ-ತಮ್ಮ ಶರ್ಟುಗಳಲ್ಲಿ ಇಟ್ಟುಕೊಂಡಿರುವ ಚಿಕ್ಕ-ಚಿಕ್ಕ ಪುಸ್ತಕದ ರೂಪದಲ್ಲಿ ಸಂತರ ಅಭಂಗಗಳನ್ನು ಸ್ತುತಿಸುತ್ತಲೆ ಇರುತ್ತಾರೆ. ಸ್ಥಳೀಯವಾಗಿ ಪ್ರಭಾವಿಯಾಗಿರುವ ದೇವರು ದೇವಸ್ಥಾನಗಳಲ್ಲಿ ನಡೆಯುವ ಆರಾಧನೆಯ ಸಂದರ್ಭದಲ್ಲಿ ಧೀಕ್ಷಾರ್ಥಿಗಳಾಗಿರುವ ೭-೮ ಜನರು ಕೂಡಿ ಏಕತಾರಿ ಹಾಗೂ ತಾಳಗಳ ವಾದ್ಯಗಳನ್ನು ತೆಗೆದು ಕೊಂಡು ದೇವಸ್ಥಾನದ ಪ್ರಾಂಗಣದಲ್ಲಿ ಹಾಡುವ ಪದ್ಧತಿಯನ್ನು ಅನುಸರಿಸುತ್ತಾ ಬಂದಿದ್ದಾರೆ. (ಹೊಳೆ-ಆಲೂರಿನ ಶ್ರೀ ಯಚ್ಚರಸ್ವಾಮಿ ಮಠದಲ್ಲಿ ವಾರದ ದಿನವಾಗಿರುವ ಗುರುವಾರ ಸಾಯಂಕಾಲ ಒಂದು ಗಂಟೆ ದೇವರ ನಾಮಸ್ಮರಣೆ ಮಾಡುವ ಪರಿಪಾಠ ಶ್ರೀಯುತ ಮಾರುತಿ ಬಾಗಲೆ ಹಾಗೂ ಸಂಗಡಿಗರು ಹೊಂದಿದ್ದಾರೆ) ಪ್ರತಿಯೊಬ್ಬ ಗೊಂದಲಿಗರ ಮನೆಯಲ್ಲಿಯೂ ಅಂಬಾಭವಾನಿ, ರೇಣುಕಾ, ಯಲ್ಲಮ್ಮದೇವಿಯರ ಪೋಟುಗಳ ಜೊತೆಗೆ ಫಂಡರಪೂರ ಕ್ಷೇತ್ರದ ಆರಾಧ್ಯದೈವ ಪಾಡುರಂಗ-ರುಕುಮಾಯಿಯರ ಪೋಟಗಳು ಇದ್ದು ದಿನಂಪ್ರತಿ ಪೂಜಿಸುತ್ತಾರೆ.

**೬.೫.೧. ವಾರಕರಿ ಸಂಪ್ರದಾಯ**

ಕೇಸರಿ ಧ್ವಜ ಹೊಂದಿದ ಏಕತಾರಿಯೊಂದಿಗೆ ಹಾಗೂ ದಾರದಿಂದ ಕೈಗೆ ತಾಳಗಳನ್ನು ಕಟ್ಟಿಕೊಂಡು ಫಂಡರಪೂರಕ್ಕೆ ಪಯಣಿಸುವವನೇ ವಾರಕರಿ. ವಾರಕರಿಯೊಂದು ವೈಷ್ಣವ ಧಾರ್ಮಿಕ ಸಂಪ್ರದಾಯವಾಗಿದ್ದು ಹಿಂದುತ್ವದ ಆಧ್ಯಾತ್ಮಿಕ ಪರಂಪರೆಯ ಭಕ್ತಿಯ ಒಳಭಾಗವಾಗಿದೆ. ಶ್ರೀಕೃಷ್ಣನ ರೂಪವೆಂದು, ವಿಷ್ಣು ಅವತಾರವೆಂದು ಪ್ರತೀತವಾಗಿರುವ ಫಂಡರಪೂರದ ಆರಾಧ್ಯ ದೈವ ವಿಠೋಬಾ

ಅಥವಾ ವಿಠ್ಠಲನನ್ನು ವಾರಕರಿಗಳು ಪೂಜಿಸುತ್ತಾರೆ. ಸಂತ ಪದವಿಯೊಂದಿಗೆ ಗೌರವಿಸಲ್ಪಡುವ ಜ್ಞಾನೇಶ್ವರ, ನಾಮದೇವ, ತುಕಾರಾಮ, ಚೋಕಮಾಲಾ, ಏಕನಾಥರವರು ಈ ಸಂಪ್ರದಾಯದ ಗುರುಗಳಾಗಿದ್ದಾರೆ.

ಈ ವಾರಕರಿ ಸಂಪ್ರದಾಯದ ಶ್ರೀಕೃಷ್ಣನನ್ನು ವಿಠೋಬನ ರೂಪದಲ್ಲಿ ಪೂಜಿಸುವದು ಮತ್ತು ನೈತಿಕ ನಡತೆಯನ್ನು ರೂಢಿಸಿಕೊಳ್ಳುವದಾಗಿದೆ. ವಾರಕರಿ ಸಂಪ್ರದಾಯ ೧೩ನೇ ಶತಮಾನದ ಅವದಿಯಿಂದ ಮಹಾರಾಷ್ಟ್ರದಲ್ಲಿ ಸಾಮಾನ್ಯ ಜನರ ಜೀವನದಲ್ಲಿ ಪ್ರಭಾವ ಬೀರುತ್ತಾ ಬಂದಿರುವದನ್ನು ಕಾಣುತ್ತೇವೆ. ಯಾವದೇ ರೀತಿ ಜಾತಿ-ಮತ-ಪಂಥಗಳ ತಾರತಮ್ಯವನ್ನು ಗಣನೆಗೆ ತೆಗೆದು ಕೊಳ್ಳದೇ ಸಮಾನತೆಯ ತತ್ವವನ್ನು ಎತ್ತಿ ಹಿಡಿಯುವ ವಾರಕರಿ ಸಂಪ್ರದಾಯದಲ್ಲಿ 'ಭಗವಂತನನ್ನು ಪರಮ ಸತ್ಯ'ವೆಂಬ ಮೌಲ್ಯವನ್ನು ಪ್ರತಿಪಾದಿಸುತ್ತದೆ. ಸ್ವಯಂ ತ್ಯಾಗ, ಕ್ಷಮೆ, ಸರಳತೆ, ಬಾವಾವೇಷಗಳ ಸ್ಮರಣೆ, ಶಾಂತಿಯುತ ಸಹಬಾಳ್ವೆ, ದಯೆ, ಅಹಿಂಸೆ, ಪ್ರೀತಿ ಮತ್ತು ಸಾಮಾಜಿಕ ಜೀವನದಲ್ಲಿ ಮಾನವೀಯತೆ ಒತ್ತು ಕೊಡುವ ವಾರಕರಿ ಸಂಪ್ರದಾಯದಲ್ಲಿ 'ಪ್ರತಿಯೊಬ್ಬನೂ ಬ್ರಹ್ಮ' ಎನ್ನುವ ಆಧ್ಯಾತ್ಮಿಕ ಸತ್ಯತೆಯ ಅರಿವು ಮೂಡಿಸುವದರಿಂದ ಒಬ್ಬ ವಾರಕರಿಯು ಇನ್ನೊಬ್ಬ ವಾರಕರಿಗೆ ಸಾಷ್ಟಾಂಗವೇರಗುತ್ತಾನೆ.

The term Varkari is made upto two words- 'vari' means moving or going on pilgrimage and 'kari' means one who undertakes it. (ವಾರಕರಿ ಪದವು ಎರಡು ಶಬ್ದಗಳಿಂದ ಆಗಿದ್ದು 'ವಾರ' ಎಂದರೆ ಚಲನಶೀಲ, ಜಂಗಮ ಅಥವಾ ತೀರ್ಥ ಯಾತ್ರೆ ಮತ್ತು 'ಕರಿ' ಯ ಅರ್ಥ ಅದನ್ನು ಮಾಡುವವನು) ನಿದಿರ್ಷ್ಟವಾಗಿ ನಡೆದುಕೊಳ್ಳುವ ದೇವರು ಮತ್ತು ಆ ದೈವಿ ಸ್ಥಳಕ್ಕೆ ಕೈಗೊಳ್ಳುವ ತೀರ್ಥಯಾತ್ರಿಕನೇ ವಾರಕರಿ. ಇದು ಪರಂಪರಾನುಗತ ವಿಠೋಭಾ ಪೂಜೆ ಕ್ರೇಂದ್ರಿಕೃತವಾದ ಅದ್ವೆತ ಭಕ್ತಿ ಪಂಥವಾಗಿದೆ. ಈ ಪಂಥವು ಶೈವ ಮತ್ತು ವೈಷ್ಣವ ಸಮೀಕರಣ ಮತ್ತು ಇತರ ಧಾರ್ಮಿಕ ಪಂಥಗಳೊಡನೆ ಸುಲಭವಾಗಿ ಬೆಯುವ ಮುಕ್ತವಾದ ವೈಷ್ಣವ ಪಂಥವಾಗಿದೆ.

"ವಾರಕರಿ ಪಂಥವು ಜಾತಿ- ಮತ-ಪಂಥ ಅಷ್ಟೇಅಲ್ಲಾ ಧರ್ಮವನ್ನು ಮೀರಿದ ಧಾರ್ಮಿಕ ವೃತಾಚರಣೆಯ ಪಂಥವಾಗಿದೆ. ವಿಠೋಬಾ ಆರಾಧನೆಯ ಅದ್ವೈತ ಭಕ್ತಿ ಪಂಥ ಸ್ಥಾಪಕರು ಅದನ್ನು ಪ್ರವರ್ದಮಾನಕ್ಕೆ ತಂದವರು ಬ್ರಾಹ್ಮಣ ಕವಿ ಹಾಗೂ ತತ್ವಜ್ಞಾನಿಯಾದ ಶ್ರೀ ಜ್ಞಾನೇಶ್ವರರು (೧೨೭೫–೧೨೯೬) ಅವರ ನಂತರದ ಸಂತಕವಿಗಳಾದ ನಾಮದೇವರು (೧೨೭೦–೧೩೫೦) ಒಬ್ಬ ಶೂದ್ರ ಸಿಂಪಿಗ, ಏಕನಾಥ (೧೫೩೩–೧೫೯೯), ತುಕಾರಾಮ ಸಂತರು (೧೫೬೮–೧೬೫೦) ಶೂದ್ರ ಕಿರಾಣಿ ವ್ಯಾಪಾರಿ, ಇವರೆಲ್ಲಾ ವಿಠೋಭಾ ಕೇಂದ್ರೀಕೃತ ಸಂಪ್ರದಾಯವನ್ನು ಮಹಾರಾಷ್ಟ್ರ ಪ್ರಾಂತದ ತುಂಬೆಲ್ಲಾ ಪ್ರಚುರ ಪಡಿಸಿದರು. ಈ ಎಲ್ಲಾ ಸಂತ ಕವಿಗಳು, ನಾಮದೇವರ ಸೇವಕಿಯಾಗಿದ್ದ ಜನಾಬಾಯಿ ಮುಂತಾದವರು ವಿಠೋಭ ಭಕ್ತಿಯ ಕಾವ್ಯ ಅಥವಾ ಅಭಂಗಗಳನ್ನು ಬರೆದಿದ್ದಾರೆ.

ಜೊತೆಗೆ ಬೇರೆ ಬೇರೆ ಜಾತಿಯ ಹಾಗೂ ಬಹು ವೈವಿಧ್ಯಮಯ ಹಿನ್ನೆಲೆಯನ್ನು ಹೊಂದಿರುವ ಸಂತರಾದ ವಿಶೋಬಾ ಖೇಚರ (ಸಂಪ್ರದಾಯಿಕ ಶೈವ ಹಾಗೂ ನಾಮದೇವರ ಗುರು), ಕ್ಷೌರಿಕನಾದ ಸೇನಾ, ಪತ್ತಾರನಾದ ನರಹರಿ, ತೋಟಗನಾದ ಸವತಾ, ಗೋರ ಕುಂಬಾರ, ನೃತ್ಯಗಾರ್ತಿ ಕನ್ಹೋಪಾತ್ರ ಅಸ್ಪೃಶ್ಯ ಮಹರನಾದ ಚೋಕಾಮಾಳ ಮತ್ತು ಮುಸ್ಲಿಂನಾದ ಶೇಖ್ ಮಹಮದ್ (೧೫೬೦-೧೬೫೦) ಮುಂತಾದವರು ವಿಠೋಭಾನನ್ನು ಸ್ತುತಿಸುವ ಅಭಂಗಗಳನ್ನು ಮತ್ತು ಹರಿಪಥವನ್ನು ಬೋಧಿಸಿದ್ದಾರೆ". (ಈ ಮಾಹಿತಿಯು ಅಂತರ್ಜಾಲದ ವಿಕಿಪಿಡಿಯಾ ವಿಶ್ವಕೋಶದಲ್ಲಿ 'ವಾರಕರಿ' ಈ ವಿಷಯಕ್ಕೆ ಸಂಬಂಧಪಟ್ಟ ಲೇಖನಗಳಿಂದ ಆಯ್ದು ಕೊಳ್ಳಲಾಗಿದೆ.) ಒಟ್ಟಿನಲ್ಲಿ ಫಂಡರಪುರವನ್ನು ತವರು ಮನೆಯೆಂದು ವಿಠೋಭಾನನ್ನು ತಂದೆ-ತಾಯಿಯೆಂದು, ಒಪ್ಪಿಕೊಳ್ಳುವವರು ಯಾರೇ ಆಗಿರಲಿ ಅವರು ಈ ಪಂಥವನ್ನು ಅಪ್ಪಿಕೊಳ್ಳಬಹುದಾಗಿದೆ ಅಥವಾ ಅನುಸರಿಸಬಹುದಾಗಿದೆ.

'ವಾರಕರಿ'ಗೆ ಒಳಪಡುವ ವ್ಯಕ್ತಿಯು ಕೆಲವು ಮೂಲಭೂತ ತತ್ವಗಳನ್ನು ಅನುಸರಿಸಬೇಕು ಹಾಗೂ ಅವುಗಳಿಗೆ ಬದ್ದನಾಗಿರಬೇಕು.

- ಕಡ್ಡಾಯವಾಗಿ ಶಾಖಾಹಾರಿಯಾಗಿರಬೇಕು.
- ಕೊರಳಿಗೆ ತುಳಸೀ ಮಾಲೆಯನ್ನು ಧರಿಸಿರಬೇಕು.
- ಕುಟುಂಬದಲ್ಲಾಗಲಿ, ವಿರಾಮದ ಅವದಿಯಲ್ಲಿ ವಿಠ್ಠಲನ ಭಜನೆ ಮಾಡಬೇಕು.
- ವರ್ಷಕ್ಕೆ ಒಂದು ಸಲ ವಿಶೇಷವಾಗಿ ಆಷಾಡದಲ್ಲಿ ಸ್ನೇಹಿತರು, ಕುಟುಂಬದವರ ಜೊತೆಗೆ ಫಂಡರಪುರಕ್ಕೆ ದರ್ಶನ ಕೊಡಬೇಕು.
- ಯಾವದೇ ಜಾತಿ-ಮತ-ಪಂಥಗಳ ಬೇಧವನ್ನರಿಯಬಾರದು.
- ಪ್ರತಿಯೊಂದು ಹಾಡುಗಳ ಮದ್ಯದಲ್ಲಿ 'ಪುಂಡಲೀಕ ವರದಾ ಪಾಂಡುರಂಗ ಹರಿ ವಿಠ್ಠಲ' ಅನ್ನಬೇಕು
- ಏಕಾದಶಿಯಂದು ಉಪವಾಸ, ಬ್ರಹ್ಮಚರ್ಯ ಪಾಲನೆ ಮಾಡಬೇಕು.

**ಏಕಾದಶಿ ವೃತಾಚರಣೆ**

'ವಾರಕರಿ' ಗಳು ಪ್ರತಿ ತಿಂಗಳು ಬರುವ ಏಕಾದಶಿಯಂದು ಉಪವಾಸ ವೃತಾಚರಣೆ ಮಾಡಬೇಕು. ವರ್ಷಕ್ಕೊಮ್ಮೆ ಪಾಂಡುರಂಗನ ದರ್ಶನ ಮಾಡಬೇಕು. ಅದರಲ್ಲಿಯೂ ವರ್ಷದಲ್ಲಿ ಬರುವ ಎರಡು ದೊಡ್ಡ ಏಕಾದಶಿಗಳಲ್ಲಿಯ ಒಂದು ಸಂದರ್ಭದಲ್ಲಿಯಾದರೂ ಫಂಡರಪುರಕ್ಕೆ (ಭೀಮ ಅಥವಾ ಚಂದ್ರಭಾಗ ನದಿಯ ದಂಡೆಯ ಮೇಲಿರುವ ಪವಿತ್ರ ಧಾರ್ಮಿಕ ಕೇಂದ್ರ) ಹೋಗಲೇಬೇಕು. ಈ ಹಿನ್ನೆಲೆಯಲ್ಲಿಯೇ ಮಹಾರಾಷ್ಟ್ರ ಹಾಗೂ ಕರ್ನಾಟಕದ ವಿವಿಧ ಭಾಗಗಳಿಂದ ಆಷಾಡ ಏಕಾದಶಿಯ ಸಂದರ್ಭದಲ್ಲಾಗಲೀ ಇಲ್ಲವೇ ಕಾರ್ತಿಕ ಏಕಾದಶಿಯಂದು ಲಕ್ಷಾಂತರ ಜನ ವಾರಕರಿಗಳು ದಿಂಡಿ ಯಾತ್ರೆ(ಪಾದ ಯಾತ್ರೆ)ಯ ಮೂಲಕ ಫಂಡರಪುರಕ್ಕೆ ಫಂಡರಿನಾಥ ವಿಠ್ಠಲ- ರುಕಮಾಯಿಯ ದರ್ಶನಕ್ಕೆ ಹೋಗುತ್ತಾರೆ.

**ಗೊಂದಲಿಗ ವಾರಕರಿಗಳು**

ಇತ್ತೀಚಿನ ಹಲವಾರು ದಶಕಗಳಿಂದ ಗೊಂದಲಿಗ ಸಮುದಾಯದಲ್ಲಿ ಫಂಡರಪುರ ವಿಠ್ಠಲನ ಭಕ್ತರಾಗುವ ಮೂಲಕ ವಾರಕರಿಗಳಾಗುವ ಸಂಪ್ರದಾಯ ಬೆಳೆದು ಬಂದಿದೆ. ವಾರಕರಿ ಸಂಪ್ರದಾಯದ ಅಳವಡಿಕೆಯು ಒಂದು ರೀತಿ ಗೊಂದಲಿಗರಲ್ಲಿ ಧಾರ್ಮಿಕ ವ್ರತಾಚರಣೆಯಲ್ಲಿ ಆ ಮೂಲಕ ಸಾಮಾಜಿಕ-ಸಾಂಸ್ಕೃತಿಕ ಬದುಕಿನಲ್ಲಿ ತೀವ್ರ ತೆರನಾದ ಬದಲಾವಣೆಗೆ ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಮೂಲತಃ ದೇವಿ ಆರಾಧಕರು, ದೇವಿಯ ಮಹಿಮೆ, ಕಥೆ, ಹಾಡುಗಳ ಮೂಲಕ ಸ್ತುತಿಸುವ ಪರಂಪರೆ ರೂಢಿಗತವಾಗಿಯೇ ಬೆಳೆದು ಬಂದಿರುವದು. ಈ ಹಿನ್ನೆಲೆಯಲ್ಲಿ ಹರಿ ಸ್ಮರಣೆ, ಹರಿ ಕಥೆ, ಹರಿ ಭಜನೆ ಮಾಡುವದನ್ನು ಅದರ ಜೊತೆಗೆ ಇನ್ನಳಿದ ಸಮುದಾಯಗಳ ಜೊತೆಗೆಸರಳವಾಗಿ ಒಡನಾಟ-ಸಂಪರ್ಕ ಬೆಳೆಸಲು ಅನುಕೂಲತೆಯ ದೃಷ್ಟಿಯಿಂದ ಈ ಪರಂಪರೆಯನ್ನು ರೂಢಿಸಿಕೊಂಡಿರುವದನ್ನು ಕಾಣಬಹುದಾಗಿದೆ.

**ವಾರಕರಿ ದೀಕ್ಷೆ**

ಮಹರಾಷ್ಟ್ರದ ಮಹತ್ವದ ದೈವತೆಗಳಲ್ಲಿ ಒಂದಾದ ಪವಿತ್ರ ಭೀಮ ಅಥವಾ ಚಂದ್ರಭಾಗ ನದಿಯ ದಂಡೆಯ ಮೇಲಿರುವ ಪವಿತ್ರ ಧಾರ್ಮಿಕ ಕೇಂದ್ರ ಫಂಡರಪುರದ ಆರಾಧ್ಯ ದೈವ ಶ್ರೀ ಫಂಡರಿನಾಥ ವಿಠ್ಠಲ. ಆದೈವವನ್ನು ಭಕ್ತಿ-ಶ್ರದ್ಧೆಯಿಂದ ಆರಾಧನೆ ಮಾಡುತ್ತಾ ಉಪವಾಸ, ಭಜನೆ ಮಾಡುವ ಪ್ರತಿಯೊಬ್ಬನು ಬ್ರಹ್ಮ (Everybody is Brahma) ಎನ್ನುವ ತತ್ವ ಸಾಕ್ಷಾತ್ಕರಿಸಿಕೊಳ್ಳುವದಕ್ಕೆ ವೇದಿಕೆ ಯಾಗಿರುವ ವಾರಕರಿ ದೀಕ್ಷೆಯನ್ನು ತೆಗೆದುಕೊಳ್ಳುವುದು ಅತ್ಯಂತ ಸರಳವಾಗಿದೆ. ದೀಕ್ಷೆ ತೆಗೆದುಕೊಳ್ಳುವ ವ್ಯಕ್ತಿಯು ಭೀಮಾ ನದಿಯಲ್ಲಿ ಸ್ನಾನ ಮಾಡಿ ತುಳಸೀ ಮಾಲೆಯನ್ನು ತೆಗೆದುಕೊಂಡು ಗುರುಗಳ ಹತ್ತಿರ ಹೋಗಬೇಕು. ಆಶ್ರಮದಲ್ಲಿ ಇರುವ ಶ್ರೀಕೃಷ್ಣ ಮಹಾರಾಜ ಶಿವೂರಕರರವರು ವಾರಕರಿಗಳಾಗು ವವರಿಗೆ ದೀಕ್ಷೆಯನ್ನು ನೀಡುವ ಗುರುಗಳಾಗಿದ್ದಾರೆ. ಇತ್ತೀಚಿಗೆ ಬೇರೆ-ಬೇರೆ ಊರುಗಳಿಗೆ ಹೋದಾಗ ಆ ಸಂದರ್ಭದಲ್ಲಿಯೂ ಸಹ ದೀಕ್ಷೆಯನ್ನು ನೀಡುತ್ತಾರೆ. ಈ ದೀಕ್ಷಾ ಗುರುಗಳನ್ನು ಫಂಡರಪುರದಲ್ಲಿ ಸಂದರ್ಶನ ಮಾಡಿದಾಗ ಕರ್ನಾಟಕದಲ್ಲಿಯ ಗೊಂದಲಿಗರಿಗೆ ವಾರಕರಿ ದೀಕ್ಷೆಯನ್ನು ನಾವೇ ನೀಡುತ್ತೇವೆ. ಅನೇಕರು ಇಲ್ಲಿ ಬಂದು ದೀಕ್ಷೆಯನ್ನು ತೆಗೆದು ಕೊಂಡರೆ ಕೆಲವರಿಗೆ ಆಯಾ ಊರಿಗೆ ಹೋದಾಗಲೂ ದೀಕ್ಷೆಯನ್ನು ನೀಡುತ್ತೇವೆ, ಎನ್ನುವ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು. ಈ ಸಂದರ್ಭದಲ್ಲಿ ದೀಕ್ಷಾರ್ಥಿಗಳಿಗೆ ವಾರಕರಿ ಸಂಪ್ರದಾಯ ಅಚರಣೆಗಳ ಬಗ್ಗೆ ಹಾಗೂ ನಡೆದುಕೊಳ್ಳ ಬೇಕಾದ ರೀತಿ-ನೀತಿಗಳ ಬಗ್ಗೆ ಬೋದನೆ ಮಾಡುತ್ತಾರೆ.

"ದೀಕ್ಷಾರ್ಥಿಯು ಗುರು ಹೇಳಿದುದಕ್ಕೆ, ವಿಠೋಭಾನ ಶಪಥದಿಂದ ಹೂಂಗೊಳ್ಳುತ್ತಾನೆ ಸತ್ಯವಂತರ ಸಂಗ ಮಾಡುವದಕ್ಕೆ, ದುಶ್ಚಟಗಳನ್ನು ಬೀಡುವದಕ್ಕೆ ಹರಿಭಜನೆ ಮಾಡುವದಕ್ಕೆ ಪ್ರತಿವರ್ಷಕ್ಕೊಮ್ಮೆ ಏಕಾದಶಿಗೆ ಫಂಡರಪುರಕ್ಕೆ ಬರಲು ಒಪ್ಪಿದ ಬಳಿಕ ಹಣೆಗೆ ಹರಿನಾಮ ಹಚ್ಚಿ ಕೊರಳಿಗೆ ತುಳಸೀ ಮಾಲೆಯನ್ನು ಹಾಕುತ್ತಾರೆ. ನಂತರ ದೀಕ್ಷಾರ್ಥಿಯು ಗುರುವಿನ ಕಾಲು ಮುಟ್ಟಿ ನಮಸ್ಕರಿಸಿ ತನ್ನ

ಶಕ್ತ್ಯಾನುಸಾರ ದಕ್ಷಿಣೆ ಕೊಡುತ್ತಾನೆ. ಈ ರೀತಿ ದೀಕ್ಷೆಯನ್ನು ಪಡೆದು ಫಂಡರಪುರದಲ್ಲಿ ವಿಠ್ಠಲ-ರುಕ್ಮಿಣಿಯರು ಇರುವ ಭಾವಚಿತ್ರವನ್ನು ತೆಗೆದುಕೊಂಡು ಗುರು ಹೇಳಿದಂತೆ ಪೂಜೆ, ಭಜನೆ ಮಾಡಬೇಕು".[೨೨] ಈ ರೀತಿ ವಾರಕರಿ ಪಂಥದ ದೀಕ್ಷಾರ್ಥಿಯಾದವನು ಬಿಳಿ ಉಡುಪುಗಳನ್ನು ತೊಡಬೇಕು. ಒಮ್ಮೆಯಾದರೂ ಫಂಡರಪುರಕ್ಕೆ ಪಾದಯಾತ್ರೆ ಮೂಲಕ ಬರಬೇಕು.

**ದಿಂಡಿ ಯಾತ್ರೆ**

ಪಾದಯಾತ್ರೆಯ ಮೂಲಕ ವಿಠೋಬಾನನ್ನು ನೆನೆಯುತ್ತಾ ಫಂಡರಪುರಕ್ಕೆ ಹೋಗುವ ದೀಕ್ಷಾರ್ಥಿಗಳ ಗುಂಪಿಗೆ 'ದಿಂಡಿಯಾತ್ರೆ' ಹೊರಟವರೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಆಷಾಢ ಏಕಾದಶಿಯ ಅಥವಾ ಕಾರ್ತಿಕ ಏಕಾದಶಿ ಸಂದರ್ಭದಲ್ಲಿ ಈ ದಿಂಡಿಯಾತ್ರೆಯನ್ನು ಕೈಗೊಳ್ಳುತ್ತಾರೆ. ಆಯಾ ಊರಿನಲ್ಲಿ ಇರುವ ಗೊಂದಲಿಗರು ದಿಂಡಿಯಾತ್ರೆ ಕೈಗೊಳ್ಳುವವರ ಸಂಘಟನೆಯಲ್ಲಿ ಕೂಡಿಕೊಂಡು ಏಕಾದಶಿಯ ಪೂರ್ವದಲ್ಲಿ ಕನಿಷ್ಠ ೧೫-೨೦ ದಿವಸ ಮೊದಲು ತಮ್ಮ ಮೂಲ ಸ್ಥಳದಿಂದ ಪ್ರಯಾಣಿಸುತ್ತಾರೆ. ಮೊದಲೇ ದಿನಂಪ್ರತಿ ೧೫ ಕಿ.ಮಿ. ನಡಿಗೆಯ ಹಿನ್ನೆಲೆಯಲ್ಲಿ ಮಧ್ಯಾಹ್ನ ತಲುಪುವ ಹಾಗೂ ರಾತ್ರಿ ತಂಗುವ ಊರುಗಳ ಸ್ಥಳಗಳನ್ನು ನಿಗದಿಪಡಿಸಿ ಆಯಾ ಊರಿಗೆ ಮೊದಲೇ ಮಾಹಿತಿಯನ್ನು ಕೊಡಲು ಪ್ರಯತ್ನಿಸುತ್ತಾರೆ. ಫಂಡರಪುರ ತಲುಪುವವರೆಗೂ ಬರುವ ಪ್ರತಿಯೊಂದು ಊರುಗಳಲ್ಲಿಯೂ ದಿಂಡಿ ಯಾತ್ರಿಗಳಿಗೆ ಊಟ, ಉಪಚಾರ, ಚಹಾ-ಕಾಫಿ, ತಂಪು ಪಾನೀಯಗಳ ವ್ಯವಸ್ಥೆ ಯ ಜೊತೆಗೆ ರಾತ್ರಿ ತಂಗಲು ಸಹ ಆಯಾ ಊರಿನವರು ವ್ಯವಸ್ಥೆ ಮಾಡಿರುತ್ತಾರೆ. ಈ ಸಂದರ್ಭದಲ್ಲಿ ಮೃದಂಗ ಬಾರಿಸುತ್ತಾ, ತಾಳ ಹಾಕಿ ತಂಬೂರಿ ನುಡಿಸುತ್ತಾ ಫಂಡರಿನಾಥನ ಭಜನೆ, ಸಂತರು ರಚಿಸಿದ ಅಭಂಗಗಳನ್ನು ಹಾಡುತ್ತಾ ಸಾಗುವರಲ್ಲದೇ ರಾತ್ರಿ ತಂಗಿದ ಸ್ಥಳದಲ್ಲಿ ಭಕ್ತಿಗೋಷ್ಠಿಯನ್ನು ನಡೆಸುತ್ತಾರೆ.

**ಪ್ರಭಾವ - ಪರಿಣಾಮ**

ವಾರಕರಿ ಸಂಪ್ರದಾಯವು ಗೊಂದಲಿಗ ಸಮುದಾಯದ ಮೇಲೆ ಎಷ್ಟು ಪ್ರಭಾವ ಬೀರಿದೆಯೆಂದರೆ ಕುಟುಂಬದೊಳಗಿನ ಹಿರಿಯರು ತಮ್ಮ ಮಕ್ಕಳಿಗೆ ವಾರಕರಿ ದೀಕ್ಷೆ ತೆಗೆದು ಕೊಳ್ಳಲು ಒತ್ತಾಯಿಸುವರು. ಏಕೆಂದರೆ ಈ ಸಮುದಾಯದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಗಂಡಸರು ಸೆರೆ-ಸಿಂದಿ-ತಂಬಾಕು ಸೇವನೆಯಂತಹ ದುಶ್ಚಟಗಳಿಗೆ ಒಳಗಾಗಿರುವದರಿಂದ ಅಂತಹ ದುಶ್ಚಟಗಳಿಂದ ದೂರವಿರುವಂತೆ ಮಾಡಲು ಈ ಆಚರಣೆಯು ಸಹಾಯಕವಾಗಿದೆ. ಮಾಂಸಾಹಾರ ಸೇವನೆ ಅಷ್ಟಷ್ಟು ವರ್ಜನೆಗೂ ಕಾರಣವಾಗಿದೆ. ಮುಂದುವರೆದು ಹೇಳುವುದಾದರೆ, ನಿರ್ದಿಷ್ಟ ಸ್ಥಳದಲ್ಲಿ ನೆಲೆಗೊಂಡ ಗೊಂದಲಿಗರು ತಮ್ಮ-ತಮ್ಮ ಓಣಿಗಳಲ್ಲಿ ಅಂಬಾಭವಾನಿ, ದುರ್ಗಾದೇವಿಯ ಗುಡಿಯ ಜೊತೆಗೆ ಪಾಡುರಂಗ-ರುಕಮಾಯಿ ದೇವಸ್ಥಾನಗಳನ್ನು ನಿರ್ಮಿಸಿಕೊಂಡಿದ್ದಾರೆ. ಈ ದೇವಸ್ಥಾನಗಳನ್ನು ಸಾಮಾನ್ಯವಾಗಿ ಗೊಂದಲಿಗರು ನೆಲೆಗೊಂಡ ಊರುಗಳಲೆಲ್ಲಾ ಕಾಣಬಹುದಾಗಿದೆ. (ಮುಂಡರಗಿ, ಕೋಡಿಹಾಳ, ಧಾರವಾಡ, ಹುಬ್ಬಳ್ಳಿ, ಕುರಬಗಟ್ಟಿ, ಮುಂತಾದವುಗಳು) ಅವರ ಸಮುದಾಯದ ಕವಿಗಳಾದ

ಕೋಡಿಹಾಳದ ಶ್ರೀ ಎಚ್. ಭೀಮರಾವ್ ವಾಷ್ಟರ್‌ರವರು ಪಾಡುರಂಗನನ್ನು ಕುರಿತು ಹಾಡುಗಳನ್ನು ಬರೆದಿದ್ದಾರೆ. ಅನೇಕ ಗೊಂದಲಿಗರು ಹೊಸದಾಗಿ ಕಟ್ಟಿಸಿಕೊಂಡಿರುವ ಮನೆಗಳಿಗೆ 'ಪಾಡುರಂಗ ನಿಲಯ' ಎಂದು ನಾಮಕರಣ ಮಾಡಿದ್ದಾರೆ. ಗೊಂದಲಿಗರ ಮುಖವಾಣಿಯಾದ 'ಗುಪ್ತಚಾರ' ವಾರಪತ್ರಿಕೆಯಲ್ಲಿ ವಾರಕರಿ ಸಂಪ್ರದಾಯದ ಸಂತ ಮಹಾರಾಜರ ಜೀವನದ ಬಗ್ಗೆ, ಏಕಾದಶಿಗಳ ಮಹತ್ವತೆ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ.

ಬೆಳಗಾಂವ ಜಿಲ್ಲೆಯ ಸಂಕೇಶ್ವರ ನಗರದಲ್ಲಿ 'ಗೊಂದಳಿ ಸಮಾಜ ವಾರಕರಿ ಸಂಪ್ರದಾಯ ಟ್ರಸ್ಟ್' ರಚನೆಗೊಂಡಿದ್ದು ಬೇರೆ ಬೇರೆ ಊರುಗಳ ನೂರಾರು ಟ್ರಸ್ಟಿಗಳು ಇದರ ಸದಸ್ಯರಾಗಿದ್ದಾರೆ. ತಮ್ಮ ಸಮುದಾಯದ ಜನರು ಈ ಸಂಪ್ರದಾಯಕ್ಕೆ ಒಳಪಡುವಂತೆ ಪ್ರೊತ್ಸಾಹಿಸುವದರ ಜೊತೆಗೆ ಫಂಡರಪುರದಲ್ಲಿ ದಿಂಡಿಯಾತ್ರೆ ಕೈಗೊಂಡ ಗೊಂದಲಿಗೆ ಸಮುದಾಯದ ಜನರು ತಂಗಲು 'ಭಕ್ತ ನಿವಾಸ' ಕಟ್ಟಲು ೨೦ ಗುಂಟೆ ನಿವೇಶನವನ್ನು ಖರೀದಿಸಿ ಅಂದಾಜು ೩ ಕೋಟಿ ವೆಚ್ಚದ ಬೃಹತ್ ಕಟ್ಟಡ ನಿರ್ಮಿಸಲು ಉದ್ದೇಶಿಸಿದ್ದಾರೆ. ಕರ್ನಾಟಕ, ಮಹಾರಾಷ್ಟ್ರ, ಗೋವಾ ರಾಜ್ಯಗಳಿಂದ ಶ್ರೀಕ್ಷೇತ್ರ ಫಂಡರಪುರಕ್ಕೆ ಆಗಮಿಸುವ ಭಕ್ತರಿಗೆ ಈ ಕಟ್ಟಡದಲ್ಲಿ ಇಳಿದುಕೊಳ್ಳುವ ವ್ಯವಸ್ಥೆಯನ್ನು ಮಾಡುವ ಉದ್ದೇಶವನ್ನು ಹೊಂದಿದೆ. ಅದಕ್ಕಾಗಿ ಕರ್ನಾಟಕ ರಾಜ್ಯ ಸರ್ಕಾರವು ೧ ಕೋಟಿ ರೂ.ಗಳ ಅನುದಾನವನ್ನು ಮಂಜೂರು ಮಾಡಿದ್ದಾರೆ.

ಧಾರ್ಮಿಕ ವೃತಾಚರಣೆಯ ಹಿನ್ನೆಲೆಯಲ್ಲಿ ವಾರಕರಿ ಸಂಪ್ರದಾಯಕ್ಕೆ ಬದ್ಧರಾಗುವ ಮೂಲಕ ವಿಠ್ಠಲನ ಆರಾಧನೆಯು ಗೊಂದಲಿಗ ಸಮುದಾಯದಲ್ಲಿ ಬದಲಾವಣೆಯ ಬದುಕು ತೆರೆದುಕೊಳ್ಳುವದಕ್ಕೆ, ಸಮಾಜದ ಇತರ ಸಮುದಾಯದವರ ಜೊತೆಗೆ ಬೆರೆತುಕೊಳ್ಳಲು, ತಾವು ಹೊಂದಿರುವ ದುಶ್ಚಟಗಳಿಂದ ಮುಕ್ತರಾಗಲು, ಆಮೂಲಕ ಸಮಾಜದ ಮುಖ್ಯವಾಹಿನಿಯಲ್ಲಿ ಸೇರಲು ಪ್ರೇರಣೆ ನೀಡಿದೆಯೆಂದರೆ ತಪ್ಪಾಗಲಾರದು.

ಇಂದು ಜಗತ್ತಿನ್ಯಾದಂತ ಕಂಡು ಬರುತ್ತಿರುವ ಖಾಸಗೀಕರಣ, ಉದಾರೀಕರಣ, ಜಾಗತೀಕರಣಗಳ ಪ್ರಭಾವಗಳ ಹಿನ್ನೆಲೆಯಲ್ಲಿ ಸಾಮಾಜಿಕ ಜೀವನದಲ್ಲಿ ತೀವ್ರತೆರನಾದ ಬದಲಾವಣೆಗಳು ಕಂಡುಬರುತ್ತಿದ್ದು, ಅದಕ್ಕೆ ಅಲೆಮಾರಿ ಸಮುದಾಯಗಳು ಹೊರತಾಗಿಲ್ಲ. "ಬದುಕು ಚಲನೆಯನ್ನು ಪಡೆದಿರುವಂಥಹದ್ದು, ಆದಿಮಾನವನಿಂದ ಹಿಡಿದು ಇವತ್ತಿನ ಆಧುನಿಕ ಮಾನವನವರೆಗೆ ಬರಬೇಕಾದರೆ ಬದುಕು ಪರಿವರ್ತನೆಗೊಳ್ಳುತ್ತಾ ಹಾಗೆಯೇ ಪರಿಷ್ಕಾರಗೊಳ್ಳುತ್ತಾ ಬಂದಿದೆ. ಅಲೆಮಾರಿಗಳಾಗಿ ಹೋದಲ್ಲಿಯೇ ವಸತಿ ಮಾಡಿಕೊಳ್ಳುತ್ತಾ ಬದುಕುವದೇ ಒಂದು ಸಾಹಸ ವೃತ್ತಿಯಾಗಿ ಭಾವಿಸಿದ ಕೆಲವು ಜನ ಇಂದು ಅಲ್ಲಲ್ಲಿಯೇ ನೆಲೆಯೂರಿ ಬದುಕು ಸಾಗಿಸುತ್ತಿರುವದು ಸರ್ವವಿಧಿತವಾದರೂ ಕೂಡಾ ಯಾವದೇ ರೀತಿಯ ಬದಲಾವಣೆ ಬಯಸದಿರುವದು ಅಥವಾ ಅಂಥ ಪ್ರೇರಣೆ ಪ್ರಭಾವಕ್ಕೆ ಒಳಗಾಗದೇ ಇರುವದು ಆಶ್ಚರ್ಯಕರ ಸಂಗತಿ ಎನ್ನುವ ಸನ್ನಿವೇಶವು ಕಂಡುಬರುತ್ತಿದೆಯಾದರೂ ಇನ್ನೊಂದೆಡೆಗೆ ಅಲೆಮಾರಿ ಸಮುದಾಯಗಳಲ್ಲಿಯ ಅನೇಕರು ನಾಗರೀಕತೆಯ ಪ್ರಭಾವ, ಆಧುನಿಕತೆ ಜಾಗತೀಕರಣದ

ಪ್ರಭಾವದ ಇವತ್ತಿನ ದಿನಗಳಲ್ಲಿ ಇತರ ಜನಾಂಗಗಳ ಸಂಪರ್ಕದಿಂದ ತಮ್ಮ ಆಚಾರ-ವಿಚಾರ, ಉಡುಗೆ-ತೊಡುಗೆ, ಆಹಾರ-ವಿಹಾರಗಳಲ್ಲಿ ಬದಲಾವಣೆ ಮಾಡಿಕೊಳ್ಳುತ್ತಾ ಬರುತ್ತಿದ್ದಾರೆ. ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ತಮ್ಮ ಸಮಾಜದ ಸಂಘಟನೆಯನ್ನು ಮಾಡಿ ಕೊಳ್ಳ ತೊಡಗಿದ್ದಾರೆ. ಈ ಹಿನ್ನೆಲೆಯಲ್ಲಿ ಅಲೆಮಾರಿ ಜನಾಂಗಗಳು ಬಹುರೂಪಿಗಳಾಗಿದ್ದು, ಪ್ರತಿ ಸಂಸ್ಕೃತಿಯನ್ನು ಹುಟ್ಟು ಹಾಕುವ ಹಿನ್ನೆಲೆಯಲ್ಲಿ ಬದುಕಿನ ಹೊಸ ಸಂಸ್ಕೃತಿಗೆ ಮುಖಾಮುಖಿಯಾಗಿಸಲು ಪ್ರಯತ್ನಿಸುತ್ತಿದ್ದಾರೆ"[೫] ಎಂಬುದು ನೈಜವಾದರೂ, ಆಧುನಿಕ ವಾಸ್ತವಿಕತೆಯಲ್ಲಿ ಆಧುನೀಕರಣದ ಪ್ರಕ್ರಿಯೆಗಳು ಗೊಂದಲಿಗರ ಪಾರಂಪರಿಕ ಜೀವನ ಕ್ರಮದಲ್ಲಿ ವೈರುದ್ಯಗಳನ್ನೂ ಸೃಷ್ಟಿಸಿದ್ದರೂ ಆಧುನೀಕರಣವನ್ನು ತಮ್ಮ ಬದುಕಿಗೆ ಪೂರಕವಾಗಿಸಿಕೊಳ್ಳುವಲ್ಲಿ ಸಾಕಷ್ಟು ಹೆಣಗಾಡಬೇಕಾಗಿದೆ. ಆದಾಗ್ಯೂ ಗೊಂದಲಿಗರು ಆಧುನಿಕ ಸಮಾಜದೊಂದಿಗೆ ಸಂಪರ್ಕ ಬೆಸೆಯುವುದರ ಮುಖಾಂತರ ಆಲೋಚನೆ ಮಾಡುವ ಮತ್ತು ಸರಿ-ತಪ್ಪುಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ. ಸಾರಿಗೆ ಮತ್ತು ಸಮೂಹ ಮಾಧ್ಯಮಗಳ ಪ್ರಭಾವದಿಂದಾಗಿ ಗೊಂದಲಿಗರು ಆಧುನಿಕತೆಯ ಸಮಾಜದ ಕಡೆ ಪರಿವರ್ತನೆ ಗೊಳ್ಳುತ್ತಿದ್ದಾರೆ. ಪ್ರಸ್ತುತ ಆಧುನಿಕ ಸಮಾಜದ ಆಚಾರ ವಿಚಾರಗಳು ಗೊಂದಲಿಗರಲ್ಲಿ ಸುಳಿದಾಡುತ್ತಿವೆ. ಅದರಲ್ಲಿಯೂ ಮುಖ್ಯವಾಗಿ ಯುವ ಪೀಳಿಗೆಯ ಮೇಲೆ ಆಧುನಿಕತೆಯು ಪ್ರಮುಖವಾಗಿ ಪ್ರಭಾವ ಬೀರುತ್ತಿದೆ. ಕೆಲವು ವರ್ಷಗಳ ಹಿಂದಿನ ಸ್ಥಿತಿಗತಿಗೆ ಹೋಲಿಕೆ ಮಾಡುವುದಾದರೆ ಇಂದು ಮುಂದು ವರೆಯುವ ಪ್ರಯತ್ನ ಸಮುದಾಯದಲ್ಲಿ ಎದ್ದು ಕಾಣುತ್ತಿದೆ.

ಬಹುತೇಕ ಗೊಂದಲಿಗ ಸಮುದಾಯದ ಹಿರಿಯರಲ್ಲಿಯೊ ತಾವು ಅನುಭವಿಸಿದ ಕಷ್ಟಗಳು ತಮ್ಮ ಕಾಲಕ್ಕೇ ಸಾಕು. ಮುಂದಿನ ಪೀಳಿಗೆಯವರಾದರೂ ಸ್ವತಂತ್ರವಾಗಿ ಬದುಕಲಿ ಎನ್ನುವ ಆಶಯವನ್ನು ವ್ಯಕ್ತಪಡಿಸುತ್ತಾರೆ.

### ಅಡಿಟಿಪ್ಪಣಿಗಳು


೧. ಪಾಡುರಂಗಬಾಬು ಡಿ., ಆದಿವಾಸಿ ಆಖ್ಯಾನ (ಸಂ.) ಎ.ಎಸ್. ಪ್ರಭಾಕರ, ಪು. ೪೦೩, ೨೦೦೬

೨. ಎ.ಎಸ್. ಪ್ರಭಾಕರ, ಅದೇ, ಪು. ೫೬೦-೫೬೧.

3. Zha Akhileshwar., Modernization and the Hindu Social Culture, P- 11, 1978

೪. ನಂಜಮ್ಮಣಿ ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು, ಪು. ೩೯೧, ೧೯೮೨

೫. ಬೈರಪ್ಪ ಕೆ., ಸಮಗ್ರ ಭಾರತೀಯ ಸಮಾಜ, ಪು. ૩೭೪, ೨೦೦೮

೬. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು ಮತ್ತು ಸಾಮಾಜಿಕ ಸಂಸ್ಥೆಗಳು ಮತ್ತು ಸಮೂಹಗಳ ಅಧ್ಯಯನ, ಪು. ೧೫೧, ೨೦೦೬

೭. ಅದೇ, ಪು. ೧೫೧

೮. ಅದೇ, ಪು. ೧೫೨

೯. ಅದೇ, ಪು. ೧೫೨

೧೦. ಗುರುಲಿಂಗಯ್ಯ ಎಂ., ಕರ್ನಾಟಕದ ಗೊಲ್ಲ ಸಮುದಾಯ, ಪು. ೩೮, ೨೦೦೫

೧೧. ವಿಶ್ವನಾಥ ಎಲ್. ಬೈಲಪತ್ತಾರ, ಜಗನ್ನಾಥ ಎಮ್. ಬೈಲಪತ್ತಾರ., ಬೈಲಪತ್ತಾರ, ಪು. ೮೮., ೨೦೦೮

೧೨. ಶಂಕರರಾವ್ ಚ.ನ., ಸಮಾಜಶಾಸ್ತ್ರದ ಮೂಲತತ್ವಗಳು ಮತ್ತು ಸಾಮಾಜಿಕ ಸಂಸ್ಥೆಗಳು ಮತ್ತು ಸಮೂಹಗಳ ಅಧ್ಯಯನ, ಪು. ೧೪೭, ೨೦೦೬

೧೩. ಬಸವರಾಜ ಎಸ್. ಹಿರೇಮಠ, ಗುಲ್ಬರ್ಗಾ ಜಿಲ್ಲೆಯ ಬೈಲಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ (ಎಂಫಿಲ್ ಪ್ರಬಂಧ), ಪು. ೨೩, ೨೦೦೩

೧೪. ಪೋತೆ ಎಚ್.ಟಿ., ಅಲೆಮಾರಿಗಳ ಸ್ಥಿತಿಗತಿ, (ಸಂ.) ಸ.ಚಿ. ರಮೇಶ, ೨೦೦೫, ಪು. ೧೬೧–೧೬೨.

೧೫. ಎ.ಎಸ್. ಪ್ರಭಾಕರ, ಆದಿವಾಸಿ ಆಖ್ಯಾನ (ಸಂ.) ಎ.ಎಸ್. ಪ್ರಭಾಕರ, ಪು. ೪೨೮, ೨೦೦೬

೧೬. ಅದೇ, ಪು. ೪೩೧

೧೭. ತಿಪ್ಪಣ್ಣ ಗೊಂದಳಿ, ಗಜೇಂದ್ರಗಡ, ಶಾಂತವೀರ ಭಾಟ, ಗುಳೇದಗುಡ್ಡ, ಸಂದರ್ಶನದ ಮಾಹಿತಿ.

೧೮. ನೀಲಾ ಕೆ., ಅಲೆಮಾರಿಗಳ ಸ್ಥಿತಿಗತಿ, (ಸಂ.) ಸ.ಚಿ. ರಮೇಶ, ಪು. ೨೩೯, ೨೦೦೫

೧೯. ಪಾಟೀಲ ಎನ್.ಬಿ., ಭಾರತ ಸಂವಿಧನ ಮತ್ತು ಸರ್ಕಾರ, ಪು. ೧೫೬, ೨೦೦೪

೨೦. ನಾಗರಾಜ ಕುಪ್ಪೆ, ದೊಂಬಿದಾಸ ಪು. ೧೧೩, ೨೦೦೮

೨೧. ಮೈತ್ರಿ ಕೆ.ಎಂ., ಚೆನ್ನದಾಸರು, ಯಲ್ಲಪ್ಪ ಬಿ. ಹಿಮ್ಮಡಿ, ಪು. ix-x, ೨೦೦೮

೨೨. ನಿಂಗಣ್ಣ ಸಣ್ಣಕ್ಕಿ, ಗೊಂದಲಿಗರ ಸಂಸ್ಕೃತಿ ಪು. ೧೫೬, ೧೯೯೩

೨೩. ಗುರುಪ್ರಸಾದ ಸಿ.ಟಿ., ಅಲೆಮಾರಿಗಳ ಸ್ಥಿತಿಗತಿ, (ಸಂ.) ಸ.ಚಿ. ರಮೇಶ, ಪು. ೨೩೪–೨೩೫, ೨೦೦೫

ಅಧ್ಯಾಯ - ೨

# ಗೊಂದಲಿಗ ಸಮುದಾಯದ ಸಂಘಟನೆ ಹಾಗೂ ಸಮಸ್ಯೆಗಳು

ಅಧ್ಯಾಯ ಏಳು

# ಗೊಂದಲಿಗ ಸಮುದಾಯದ ಸಂಘಟನೆ ಹಾಗೂ ಸಮಸ್ಯೆಗಳು

---

## ೭.೧. ಸಮುದಾಯ ಸಂಘಟನೆ

ಒಂದು ಸಮುದಾಯದ ಸಂಘಟನೆಯು ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ತೋರಿಸುವುದರ ಜೊತೆಗೆ ರಾಜಕೀಯ, ಆರ್ಥಿಕವಾಗಿ ಪಡೆದುಕೊಳ್ಳಬಹುದಾದ ಅನೂಕೂಲತೆಗಳನ್ನು ಮತ್ತು ಸಮುದಾಯದ ಜನರಲ್ಲಿ ಜಾಗೃತಿಯನ್ನು ಉಂಟು ಮಾಡಲು ಸಾಧ್ಯವಾಗುವುದು. ೧೯೩೫ರಲ್ಲಿಯೇ ಗೊಂದಲಿಗರು "ಅಖಿಲ ಕರ್ನಾಟಕ ಗೊಂದಳಿ ಸಮಾಜ ಸಂಘ"ವನ್ನು ಸ್ಥಾಪಿಸಿ ಸಮುದಾಯದ ಸಂಘಟನೆಗೆ ಚಾಲನೆ ನೀಡಿದ್ದಾರೆ. ಈ ಸಂಘಟನೆಯ ಮೂಲಕ ೧೯೬೦ರಿಂದಲೇ ಗೊಂದಳಿ ಸಮುದಾಯವನ್ನು ಪರಿಶಿಷ್ಠ ಪಂಗಡದಲ್ಲಿ ಸೇರಿಸುವ ದೃಷ್ಟಿಯಿಂದ ಹೋರಾಟಗಳನ್ನು ಮಾಡಿದ್ದಾರೆ. ನಂತರದ ಅವಧಿಯಲ್ಲಿ ಸಂಘಟನೆಯನ್ನು ಸದೃಢಗೊಳಿಸಲು ೧೯೭೬-೭೭ರಲ್ಲಿ ಹುಬ್ಬಳ್ಳಿಯಲ್ಲಿ ಅಖಿಲ ಕರ್ನಾಟಕ ಗೊಂದಳಿ ಸಮಾಜ ಸಂಘವನ್ನು ಪುನರ್ ಸ್ಥಾಪನೆ ಮಾಡಿ ಪ್ರಾರಂಭಿಕವಾಗಿ ಶ್ರೀ ಡಿ.ಎಚ್. ನರವಟೆಯವರು ಅಧ್ಯಕ್ಷರಾಗಿಯೂ, ಶ್ರೀ ಪಿ.ಡಿ.ಸುಗತೆಯವರು ಪ್ರಧಾನ ಕಾರ್ಯದರ್ಶಿ ಗಳಾಗಿಯೂ ಕಾರ್ಯ ನಿರ್ವಹಿಸಿದ್ದಾರೆ. ಇಲ್ಲಿಯವರೆಗೆ ಶ್ರೀ ರಾಮಚಂದ್ರರಾವ್ ಮುಖ್ಯೆ, ಶ್ರೀ ನರಸಿಂಹರಾವ್ ವಾಘ್ಮೋಡೆ, ಶ್ರೀ ಶಿವಾನಂದ ಪಾಂಚಗಿ, ಶ್ರೀ ಪಿ.ಡಿ.ಸುಗತೆಯವರು ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಈ ರೀತಿ ರಾಜ್ಯಮಟ್ಟದ ಸಂಘಟನೆಯ ಅಡಿಯಲ್ಲಿ ಜಿಲ್ಲಾ, ತಾಲೂಕ ಹಾಗೂ ಸ್ಥಳೀಯ ಮಟ್ಟದಲ್ಲಿಯೂ ಸಂಘಟನೆಯನ್ನು ಮಾಡಿ ಸಮುದಾಯದ ಜನರು ಒಟ್ಟಾಗಿ ಸಮಾಜದ ಮುಖ್ಯವಾಹಿನಿಯಲ್ಲಿ ಸಕ್ರೀಯ ಗೊಳ್ಳಲು ಚಾಲನೆ ನೀಡಲಾಗಿದೆ.(ಈ ಮಾಹಿತಿಯನ್ನು ಶ್ರೀಯುತ ಪಿ.ಡಿ.ಸುಗತೆ, ಗುಪ್ತಚಾರ ಪತ್ರಿಕೆಯ ಸಂಪಾದಕರು ಸಂದರ್ಶನದಲ್ಲಿ ಹೇಳಿರುವುದು)

ಆದರೆ ಇನ್ನೊಂದೆಡೆಗೆ ಇನ್ನುಳಿದ ಸಮುದಾಯಗಳಲ್ಲಿ ಕಂಡುಬರುವಂತೆ ಗೊಂದಲಿಗರ ಸಂಘಟನೆಯಲ್ಲಿಯೂ ಗೊಂದಲಗಳಿವೆ. ಏಕೆಂದರೆ ಕೆಲವರು ನಾನೇ ರಾಜ್ಯಮಟ್ಟದ ಅಧ್ಯಕ್ಷ, ನಾನು ರಾಜ್ಯಮಟ್ಟದ ಅಧ್ಯಕ್ಷ ಎನ್ನುವ ಗುಂಪುಗಾರಿಕೆಯು ಕಂಡುಬರುತ್ತದೆ.

ರಾಜ್ಯಮಟ್ಟದಲ್ಲಿ ಸುಮಾರು ೬ ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು ಸಂಘವನ್ನು ಸ್ಥಾಪನೆ ಮಾಡಿಕೊಂಡರೂ, ಸಂಘಕ್ಕೆ ತನ್ನದೇ ಆದಂತಹ ಸ್ವಂತ ಕಛೇರಿ ಕಟ್ಟಡ ಇಲ್ಲ. ಇವರಲ್ಲಿ ಕೆಲವರು ಶ್ರೀಮಂತರು ಇದ್ದರೂ ಆ ರೀತಿಯಲ್ಲಿ ಸಂಘದ ಸಂಘಟನೆಯಲ್ಲಿ ತೊಡಗಿರುವುದು ಇಲ್ಲವೆ ಪ್ರಯತ್ನ ಮಾಡದೇ ಇರುವದನ್ನು ಕಾಣಬಹುದು. ಸಂಘಟನೆ, ಕುಂದುಕೊರತೆಗಳು, ಹೋರಾಟ, ಸರಕಾರಿ ಸೌಲಭ್ಯಗಳ ಅರಿವು ಈ ಉದ್ದೇಶಗಳ ಹಿನ್ನೆಲೆಯಲ್ಲಿ ಸ್ಥಾಪಿಸಿಕೊಂಡಿರುವ ಸಂಘವು ತಮ್ಮ ಜನಾಂಗದ ಮಕ್ಕಳ ಶಿಕ್ಷಣದ ಅನೂಕೂಲತೆಗಾಗಿ ಯಾವುದೇ ರೀತಿ ಶಿಕ್ಷಣ ಸಂಸ್ಥೆಗಳನ್ನಾಗಲಿ, ವಿದ್ಯಾರ್ಥಿನಿಲಯಗಳನ್ನಾಗಲಿ ಸ್ಥಾಪಿಸಿಲ್ಲ. ಸಾಮಾನ್ಯವಾಗಿ ಗೊಂದಲಿಗರು ದೊಡ್ಡ ನಗರ, ಮಹಾನಗರದಲ್ಲಿ ಹೆಚ್ಚು ಹೆಚ್ಚು ಜನರು ವಾಸಿಸುತ್ತಿರುವದರಿಂದ ಅಲ್ಲಿರುವವರು ಹೆಚ್ಚಾಗಿ ಆರ್ಥಿಕ ಸ್ಥಿರತೆಯನ್ನು ಹೊಂದಿದವರೆ ಆಗಿದ್ದು, ನಗರ ಪ್ರದೇಶಗಳಲ್ಲಿ ವಿದ್ಯಾರ್ಥಿಗಳ ಅನೂಕೂಲಕ್ಕಾಗುವ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಯಾವುದೇ ಪ್ರಯತ್ನಗಳನ್ನು ಮಾಡದೇ ಇರುವುದು ಕಂಡುಬರುತ್ತದೆ.

ಗೊಂದಲಿಗರಲ್ಲಿ ಸಂಘಟನೆಗೆ ಸಂಬಂಧಪಟ್ಟಂತೆ ಕೆಲವು ಭಿನ್ನಾಭಿಪ್ರಾಯಗಳು ಕಂಡು ಬರುತ್ತಿದ್ದರೂ, ಗೊಂದಲಿಗ ಸಮುದಾಯವನ್ನು ಪರಿಶಿಷ್ಟ ಪಂಗಡದಲ್ಲಿ ಸೇರಿಸಬೇಕು ಎಂದು ಸ್ವಾತಂತ್ರ್ಯ ನಂತರದ ಅವಧಿಯಿಂದಲೂ ರಾಜ್ಯಮಟ್ಟದ ಹುಬ್ಬಳ್ಳಿ ಗುಲಬುರ್ಗ, ದಾವಣಗೇರಿ ಮುಂತಾದ ನಗರ ಪ್ರದೇಶಗಳಲ್ಲಿ ಬೃಹತ್ ಸಮಾವೇಶದ ಮೂಲಕ ಹೋರಾಟ, ಚಳುವಳಿಗಳನ್ನು ಮಾಡಿದ್ದಾರೆ. ನೂರಾರು ಎಂ.ಎಲ್.ಎ ಗಳ ಸಹಿಗಳನ್ನು ಒಳಗೊಂಡ ಮನವಿ ಪತ್ರಗಳನ್ನು ಇಲ್ಲಿಯವರೆಗೆ ಆಗಿ ಹೋದ ಪ್ರತಿಯೊಬ್ಬ ಮುಖ್ಯಮಂತ್ರಿಗಳಿಗೆ ಸಲ್ಲಿಸುತ್ತಾ ಬಂದ್ದಿದ್ದಾರೆ. ಸಮುದಾಯದ ಮುಖಂಡರ ನಿಯೋಗದೊಂದಿಗೆ ದೆಹಲಿಗೆ ಹೋಗಿ ಕೇಂದ್ರ ಸರಕಾರಕ್ಕೆ, ಶ್ರಿಮತಿ ಸೋನಿಯಾ ಗಾಂಧಿಯವರಿಗೆ ಕಳಕಳಿಯ ಮನವಿ ಪತ್ರಗಳನ್ನು ಸಲ್ಲಿಸಿ ಬಂದ್ದಿದ್ದಾರೆ. ೦೬.೦೧.೨೦೦೬ ಹಾಗೂ ೨೦.೦೧.೨೦೦೯ರಂದು ಧಾರವಾಡದಲ್ಲಿ ಬೃಹತ್ ಸಮಾವೇಶದ ಮೂಲಕ ಪ್ರತಿಭಟನೆ ಮಾಡಿ ಸರ್ಕಾರಕ್ಕೆ ಜಿಲ್ಲಾಧಿಕಾರಿಗಳ ಮೂಲಕ ಮನವಿ ಪತ್ರಗಲನ್ನು ಅರ್ಪಿಸಿದ್ದಾರೆ. ೧೯.೦೩.೨೦೦೮ರಂದು ಗುಲಬರ್ಗಾದಲ್ಲಿ ಕರ್ನಾಟಕದ ರಾಜ್ಯ ಗೊಂದಳಿ, ಜೋಷಿ, ಬುಡಬುಡಕಿ ವಾಸುದೇವ ಸಮಾಜಗಳ ಒಕ್ಕೂಟದ ಅಡಿಯಲ್ಲಿ ಬೃಹತ್ ಸಮಾವೇಶದ ಸಂದರ್ಭದಲ್ಲಿ ಸನ್ಮಾನ ಶ್ರೀ ಬಿ.ಎಸ್.ರೇಣುಕೆ, ಬುಡಕಟ್ಟು ಅಲೆಮಾರಿ–ಅರೆಅಲೆಮಾರಿ ಜನಾಂಗಗಳ ರಾಷ್ಟ್ರೀಯ ಆಯೋಗದ ಅಧ್ಯಕ್ಷರನ್ನು ಕರೆಯಿಸಿ ಸಮುದಾಯದ ಸ್ಥಿತಿಯನ್ನು ವಿವರಿಸಿದ್ದಾರೆ. ಪ್ರಸ್ತುತ ಈ ವರಿದಿಯಲ್ಲಿ ಅಲೆಮಾರಿ–ಅರೆಅಲೆಮಾರಿ ಜನರಿಗೆ ಪರಿಶಿಷ್ಟ ಜಾತಿ ಜನಾಂಗದವರಿಗೆ ಇರುವ ರೀತಿಯಲ್ಲಿ ವಿಶೇಷ ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂದು ಶಿಫಾರಸ್ಸು ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ತಮ್ಮ ಸಮುದಾಯದ ಸಂಘಟನೆಯ ಜೊತೆಗೆ

ರಾಜ್ಯಮಟ್ಟದಲ್ಲಿಯ ಅಲೆಮಾರಿ-ಅರೆಅಲೆಮಾರಿ ಜನಾಂಗಗಳ ಒಕ್ಕೂಟವನ್ನು ಸ್ಥಾಪನೆ ಮಾಡಿ ಆಮೂಲಕ ಪ್ರತಿಯೊಂದು ಜಿಲ್ಲಾ ಕೇಂದ್ರಗಳಲ್ಲಿ 'ರೇಣುಕೆ ಆಯೋಗ'ದ ವರದಿಯನ್ನು ಜಾರಿಗೊಳಿಸಲು ಕೇಂದ್ರ ಸರಕಾರದ ಮೇಲೆ ಒತ್ತಡ ತರಲು ತೀವ್ರ ತೆರನಾದ ಹೋರಾಟ, ಚಳುವಳಿಗಳನ್ನು ಮಾಡುತ್ತಿದ್ದಾರೆ. ಈ ರೀತಿ ಚಳುವಳಿಗಳ ಮೂಲಕ ಬೃಹತ್ ಸಮಾವೇಶ ನಡೆಸಿ ಆಯಾ ಜಿಲ್ಲಾಧಿಕಾರಿಗಳಿಗೆ ಮನವಿ ಪತ್ರಗಳನ್ನು ಸಲ್ಲಿಸಿ ರೇಣುಕಾ ಆಯೋಗದ ವರದಿಯನ್ನು ಯಥಾವತ್ತಾಗಿ ಜಾರಿಗೆ ತರಲು ಆ ಮೂಲಕ ಕೆಂದ್ರ ಸರಕಾರದ ಮೇಲೆ ಒತ್ತಡ ಹೇರುತ್ತಿದ್ದಾರೆ. ದುರ್ದೈವಶಾತ್ ಕೇಂದ್ರ ಸರಕಾರವು ಇನ್ನೂವರೆಗೂ ಆ ವರದಿಯ ಬಗ್ಗೆ ಸದನಗಳಲ್ಲಿ ಚರ್ಚೆಗೂ ಕೈಗೆತ್ತಿಗೊಳ್ಳದೆ. ನಿರ್ಲಕ್ಷತೆಯನ್ನು ತೋರಿಸುತ್ತಲೇ ಬಂದಿದೆ. ಸಮುದಾಯವನ್ನು ಪರಿಶಿಷ್ಟ ಜನಾಂಗದ ಪಟ್ಟಿಯಲ್ಲಿ ಸೇರಿಸಬೇಕೆನ್ನುವ ಬೇಡಿಕೆಗಾಗಿ ನಿರಂತರವಾಗಿ ಪ್ರಯತ್ನಗಳನ್ನು, ಹೋರಾಟವನ್ನು ಮಾಡುತ್ತಾ ಬರುತ್ತಿದ್ದಾರೆ. ತಾಲ್ಲೂಕ ಕೇಂದ್ರಗಳಲ್ಲಿ ಇರುವ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಸಮುದಾಯದ ಜನರಿಗೆ ದೊರಕಬೇಕಾದ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಮತ್ತು ಇಂತಹ ಕಛೇರಿಗಳಲ್ಲಿ ಗೊಂದಲಿಗರಿಗೆ ಎದುರಾಗುವ ಹಾಗೂ ಎದುರಿಸುತ್ತಿರುವ ಅಡೆತಡೆಗಳನ್ನು ನಿವಾರಿಸುವ ದಿಸೆಯಲ್ಲಿ, ಜಿಲ್ಲಾ ಮತ್ತು ತಾಲೂಕ ಮಟ್ಟದ ಮುಖಂಡರು ಸಹಾಯ, ಮಾರ್ಗದರ್ಶನವನ್ನು ಮಾಡುತ್ತಿದ್ದಾರೆ. ಇತ್ತೀಚಿನ ಬದಲಾವಣೆಯ ಹಿನ್ನೆಲೆಯಲ್ಲಿ ಸಂಘಟನೆಯು ಜನಾಂಗದ ಅಭಿವೃದ್ಧಿಗಾಗಿ ಸಂಘಟನೆಗಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು, ಅವಶ್ಯಕ ಮತ್ತು ಅನಿವಾರ್ಯವಾಗಿದೆ.

**'ಗುಪ್ತಚಾರ'-ವಾರಪತ್ರಿಕೆ**

ಸಮುದಾಯ ಸಂಘಟನೆ, ಸಮಸ್ಯೆಗಳು, ಕಲೆಗಳ ಪ್ರಚಾರದ ದೃಷ್ಠಿಯಿಂದ ಗೊಂದಲಿಗರ ಮುಖವಾಣಿಯಾಗಿ ಬಂದ ಪತ್ರಿಕೆಯೇ 'ಗುಪ್ತಚಾರ' ವಾರಪತ್ರಿಕೆ. ಅಂದರೆ ಗೊಂದಲಿಗ ಸಮದಾಯ ದವರ ದ್ವನಿಯಾಗಿ ಹೊರ ಬರುತ್ತಿರುವ ಗುಪ್ತಚಾರ ಪತ್ರಿಕೆಯು ಸಮುದಾಯದ ಸಂಘಟನೆಯ ಜೊತೆ ಜೊತೆಗೆ ಸಮುದಾಯದ ಸಮಸ್ಯೆಗಳ ಬಗ್ಗೆ ಪತ್ರಿಕೆಯ ಮೂಲಕ ತಿಳಿಯ ಪಡಿಸುವುದು. ಸಮುದಾಯಕ್ಕೆ ಸಂಬಂಧ ಪಟ್ಟಂತೆ ನಡೆಯುವ ಕಾರ್ಯಕ್ರಮಗಳ ಬಗ್ಗೆ ಹಾಗೂ ಸಂಸ್ಕೃತಿ, ಕಲೆ, ಆಚರಣೆಗಳ ಬಗ್ಗೆ ತಿಳಿಯಪಡಿಸುವದಾಗಿದೆ. ಗುಪ್ತಚಾರ ಪತ್ರಿಕೆಯ ಹೆಸರಿನ ಬಗ್ಗೆ ಮಾಹಿತಿ ಕೇಳಿದಾಗ ಶ್ರಿ ಪಿ.ಡಿ.ಸುಗತೆಯವರು 'ಹಿಂದೂ ಧರ್ಮ ರಕ್ಷಣೆಗಾಗಿ ಮರಾಠ ಸಾಮ್ರಾಜ್ಯ ಸ್ಥಾಪಿಸಿದ ಛತ್ರಪತಿ ಶಿವಾಜಿ ಮಹಾರಾಜರ ಆಳ್ವಿಕೆಯ ಅವದಿಯಲ್ಲಿ ನಮ್ಮ ಸಮುದಾಯದ ಜನರು ಗುಪ್ತಚಾರಿಕೆಯ ಕೆಲಸದಲ್ಲಿ ತೊಡಗಿಸಿಕೊಂಡಿದ್ದರು. ಹೀಗಾಗಿ ಈ ಹೆಸರನ್ನು ನಾಮಕರಣ ಮಾಡಿದ್ದೇವೆ' ಎಂದು ಹೇಳಿದರು. ಈ ಪತ್ರಿಕೆಯು ೧೯೮೬ರಲ್ಲಿ ಪ್ರಾರಂಭವಾಗಿದ್ದು, ಶ್ರೀಮತಿ ಅಹಲ್ಯಾಭಾಯಿ ಪ್ರಲ್ಹಾದರಾವ್ ಸುಗತೆಯವರು ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಾ ಬಂದಿದ್ದರು. ಸದ್ಯ, ಸಹಕಾರಿ ಸಂಘಗಳ ಸಂಯುಕ್ತ ನಿಬಂಧಕರು ಆಗಿ ಸರಕಾರಿ ಸೇವೆಯಿಂದ ನಿವೃತ್ತರಾಗಿರುವ, ೨೦೧೧ವರೆಗೆ ಗೊಂದಲಿಗ ಸಮುದಾಯದ ರಾಜ್ಯಮಟ್ಟದ ಅಧ್ಯಕ್ಷರಾಗಿದ್ದ ಶ್ರೀ ಪ್ರಲ್ಹಾದರಾವ್ ಡಿ. ಸುಗತೆಯವರು

ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಪತ್ರಿಕೆಯು ನವನಗರ ೧೯, ಶಿವಾನಂದನಗರ ಹುಬ್ಬಳ್ಳಿಯಿಂದ ಪ್ರಕಟಗೊಳ್ಳುತ್ತಿದೆ. ಗುಪ್ತಚಾರ ಪತ್ರಿಕೆಯು ಪ್ರತಿವಾರ ಬಿಡುಗಡೆಯಾಗುತ್ತಲಿದ್ದು ರಾಜ್ಯದ ಉದ್ದಗಲಕ್ಕೂ ಸಮುದಾಯದ ಜನರು ಈ ಪತ್ರಿಕೆಯನ್ನು ಪಡೆದುಕೊಳ್ಳುತ್ತಾರೆ.

ಪತ್ರಿಕೆಯಲ್ಲಿ ಡಿ ದೇವರಾಜ ಅರಸು ಹಿಂದುಳಿದ ವರ್ಗಗಳು ಇಲಾಖೆಯಿಂದ ಅಲೆಮಾರಿ-ಅರೆ ಅಲೆಮಾರಿ ಜನಾಂಗದವರಿಗೆ ದೊರಕುವ ಸೌಲಭ್ಯಗಳ ಬಗ್ಗೆ ಮಾಹಿತಿಯನ್ನು ಕೊಡುವುದರ ಜೊತೆಗೆ ಪಡೆದುಕೊಳ್ಳುವ ವಿಧಾನಗಳ ಬಗ್ಗೆ ಸಮಗ್ರ ವಿವರಣೆಯನ್ನು ಕೊಡುತ್ತಾರೆ. ಗೊಂದಲಿಗರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಸಮುದಾಯಕ್ಕೆ ಸರಕಾರಕ್ಕೆ ತಿಳಿಸುವ ಪ್ರಯತ್ನ ಮಾಡುತ್ತದೆ. ಸಮುದಾಯದ ಸಾಧನೆ ಮಾಡಿದ ವ್ಯಕ್ತಿಗಳ ಹಾಗೂ ಬರೆದ ಕಥೆ, ಕವನ, ಲೇಖನಗಳನ್ನು ಪ್ರಕಟಿಸಿ ಅವರಿಗೆ ಪ್ರೋತ್ಸಾಹ ನೀಡುತ್ತಿದೆ. ಸಮುದಾಯದ ಧಾರ್ಮಿಕ ಕಾರ್ಯಕ್ರಮಗಳ ಬಗ್ಗೆ, ಆಚರಿಸುವ ಹಬ್ಬ-ಹರಿದಿನಗಳ ಮಹತ್ವ, ಸಂತರ ಜೀವನ ಚರಿತ್ರೆಗಳ ಕುರಿತು ವರದಿಯನ್ನು ಸಮಗ್ರವಾಗಿ ತಿಳಿಸಿಕೊಡುವ ಪ್ರಯತ್ನ ಮಾಡುತ್ತಿದ್ದಾರೆ. ಸಂಘದವತಿಯಿಂದ ಬೇರೆ ಬೇರೆ ಜಿಲ್ಲೆಗಳಲ್ಲಿ ನಡೆಯುವ ಸಂಘಟನಾ ಕಾರ್ಯಕ್ರಮಗಳು, ವಧು ವರರ ಮಾಹಿತಿ, ವಧು ವರರ ಸಮಾವೇಶಗಳ ಬಗ್ಗೆ ವಿವರಣೆಗಳನ್ನು ಪ್ರಕಟಿಸುತ್ತಿದ್ದಾರೆ.

ಕರ್ನಾಟಕ ರಾಜ್ಯದ ಗೊಂದಲಿಗರ ಸಂಘದ ಚಟುವಟಿಕೆಗಳನ್ನು ತಿಳಿಸಲು ಮತ್ತು ಜನಾಂಗಕ್ಕೆ ಅರಿವು ಮೂಡಿಸುವಲ್ಲಿ ಪ್ರಾರಂಭವಾದ ಈ ಪತ್ರಿಕೆಯು ಜಿಲ್ಲಾ ಸಂಘದ ಚಟುವಟಿಕೆಗಳ ವಿವರ ಶಿಕ್ಷಣ- ಉದ್ಯೋಗದ ಬಗ್ಗೆ ಮಾಹಿತಿ, ಜನಾಂಗದ ಅಭಿವೃದ್ಧಿಯ ಮಾರ್ಗಗಳು, ಜನಾಂಗದ ಸಾಮಾಜಿಕ ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನಕ್ಕೆ ಸಂಬಂದಿಸಿದ ಲೇಖನಗಳನ್ನು, ಸಾಧನೆ ಮಾಡಿದ ಜನಾಂಗದ ವ್ಯಕ್ತಿಗಳ ವಿವರಗಳನ್ನು ಪ್ರಕಟಿಸುತ್ತಿದೆ. ಅಂದರೆ ಗುಪ್ತಚಾರ ಪತ್ರಿಕೆಯು ಸಮುದಾಯಕ್ಕೆ ಸಂಬಂಧಪಟ್ಟಂತೆ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ವಿಷಯಗಳ ಮಾಹಿತಿಗಳ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ವಿವರಣೆಗಳನ್ನು ಕೂಡಾ ಪ್ರಕಟಿಸುತ್ತಿದೆ. ಸಮುದಾಯದ ಜಾಗೃತಿಯಲ್ಲಿ ಈ ಪತ್ರಿಕೆಯು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿದೆ. ಆ ಮೂಲಕ ಸಮಾಜದ ಮುಖ್ಯವಾಹಿನಿಗೆ ಸೇರಲು ಹಾಗೂ ಸಂಘಟನಾ ಕಾರ್ಯದಲ್ಲಿ ಸಕ್ರಿಯವಾಗಿ ತೊಡಗಲು ಪ್ರೋತ್ಸಾಹ ನೀಡುತ್ತಿದೆ.

### ಜೈಭವಾನಿ ಮಾಸಿಕ ಪತ್ರಿಕೆ

ಗುಪ್ತಚಾರ ಪತ್ರಿಕೆಯ ಜೊತೆಗೆ ಗೊಂದಲಿಗರಿಗೆ ಸಂಬಂಧಪಟ್ಟಂತೆ ಹೊರಬರುತ್ತಿರುವ ಇನ್ನೊಂದು ಪತ್ರಿಕೆ 'ಜೈ ಭವಾನಿ' ಮಾಸಿಕ ಪತ್ರಿಕೆ. ಯುವ ಮುಖಂಡ ಪದವೀಧರ ಶ್ರೀ ನಟರಾಜ ಪ್ರಕಾಶ ದುರ್ವೆಯವರ ಸಂಪಾದಕತ್ವದಲ್ಲಿ ಹೊರಬರುತ್ತಿರುವ ಈ ಪತ್ರಿಕೆ ಬೆಳಗಾಂವ ಜಿಲ್ಲೆ ರಾಯಬಾಗ ತಾಲ್ಲೂಕಿನ ಚಿಂಚಲಿಯಿಂದ ಪ್ರಕಾಶನ ಗೊಳ್ಳುತ್ತಿದೆ. ಈ ಪತ್ರಿಕೆಯು ೨೦೧೦ ಹೊಸ ವರ್ಷದ ಸಂಭ್ರಮದ ಸಂದರ್ಭದಲ್ಲಿ ಪ್ರಾರಂಭವಾಗಿದ್ದು, ಪತ್ರಿಕೆಯ ಮೊದಲ ಸಂಚಿಕೆಯ ಸಂಪಾದಕೀಯದಲ್ಲಿ

ನಟರಾಜ ದುರ್ವೆಯವರು 'ಸಮಾಜದ ಆಗು-ಹೋಗುಗಳ ಬಗ್ಗೆ ಮತ್ತು ಸಮಾಜದ ಒಳಿತಿಗಾಗಿ ಈ ಪತ್ರಿಕೆಯನ್ನು ಪ್ರಾರಂಭಿಸಿರುತ್ತೇವೆ. ಸ್ವಾತಂತ್ರ ಬಂದು ೬೦ ವರ್ಷ ಕಳೆದರೂ ಸರಿಯಾದ ಹೋರಾಟದ ಮಾರ್ಗದರ್ಶನ ಮಾಡಬಲ್ಲ ಮುಂದಾಳತ್ವದ ಕೊರತೆಯಿಂದ, ನಮ್ಮವರೆಲ್ಲಾ ವಿವಿಧ ಆಶೆ-ಆಮಿಷಗಳಿಗೆ ದಾಸರಾಗಿ ಒಡೆದಾಳುವ ನೀತಿ ಅನುಸರಿಸಿ, ಗೊಂದಳಿ ಸಮಾಜ ಸರಕಾರದ ಸವಲತ್ತುಗಳಿಂದ ವಂಚಿತವಾಗಿ ಅಧೋಗತಿ ತಲುಪುವಂತಾಗಿದೆ. ಸಂಘಟನೆಯಾಗದ ಹೊರತು ಗೊಂದಳಿ ಜನಾಂಗದ ಏಳಿಗೆ ಆಸಾಧ್ಯವಾದ ಮಾತಾಗಿರುವದರಿಂದ ಈಗಲಾದರೂ ಜನಾಂಗದ ಮುಖಂಡರು, ಪ್ರಜ್ಞಾವಂತರು ಈ ಬಗ್ಗೆ ನಿದ್ರಾವಸ್ಥೆಯಿಂದ ಎಚ್ಚೆತ್ತು, ತಮ್ಮೆಲ್ಲಾ ಭಿನ್ನಾಭಿಪ್ರಾಯಗಳನ್ನು ಜನಾಂಗದ ಹಿತ ದೃಷ್ಟಿಯಿಂದ ಬದಿಗೊತ್ತಿ, ಒಂದೇ ವೇದಿಕೆಗೆ ಬಂದು ಸಂಘಟಿತರಾಗುವದು ಅತ್ಯಗತ್ಯ. ಸಮಾಜದ ಸ್ಥಿತಿ ಅರಿತು ಮುಖಂಡರು, ಪ್ರಜ್ಞಾವಂತರು, ಯುವಕರು ಈ ಬಗ್ಗೆ ತಕ್ಷಣವೇ ಸಿಡಿದೆದ್ದು, ಸಂಘಟನೆಯಲ್ಲಿ ಒಮ್ಮತ ಮೂಡಿಸಲು ಮುಂದಾಗಬೇಕು". ಈ ರೀತಿ ಸಂಪಾದಕೀಯದಲ್ಲಿನ ಮಾಹಿತಿಯು 'ಜೈ ಭವಾನಿ' ಪತ್ರಿಕೆಯು ಗೊಂದಳಿ ಸಮಾಜದ ಅಭಿವೃದ್ಧಿಶೀಲ ಸಂಘಟನಾ ದೃಷ್ಟಿಯ ಚಿಂತನಾ ಮಾಸ ಪತ್ರಿಕೆಯಾಗಿದೆ. ಸಮುದಾಯಕ್ಕೆ ಸಂಬಂಧಪಟ್ಟಂತೆ ಸ್ಥಿತಿಗತಿ, ಸಮಸ್ಯೆ ಸಂಘಟನೆ, ಪರಿಹಾರ ಮತ್ತು ಸೌಲಭ್ಯಗಳ ಬಗ್ಗೆ ಸಮಗ್ರವಾಗಿ ಹಾಗೂ ಅರ್ಥಪೂರ್ಣವಾದ ವಿವರಣೆಯನ್ನು ಈ ಪತ್ರಿಕೆಯಲ್ಲಿಯ ಪ್ರತಿಗಳಲ್ಲಿ ಕಾಣಬಹುದಾಗಿದೆ.

ಜನಾಂಗದ ಬೌದ್ಧಿಕತೆ, ಸಂಘಟನೆಯ ಹಿನ್ನೆಲೆಯಲ್ಲಿ ವಾರಪತ್ರಿಕೆಯಾಗಿ 'ಗುಪ್ತಚಾರ', ಮಾಸಪತ್ರಿಕೆ ಯಾಗಿ 'ಜೈ ಭವಾನಿ ಪತ್ರಿಕೆ'ಗಳು ಹೊರ ಬರುತ್ತಿರುವುದು ಸಂತೋಷದ ವಿಷಯವೇ ಆಗಿದೆ. ಈ ಪತ್ರಿಕೆಗಳ ಮೂಲಕ ಜನಾಂಗದ ಸಮಸ್ಯೆಗಳ ಬಗ್ಗೆ ಸರಕಾರಕ್ಕೆ ಮುಟ್ಟಿಸುವದರಲ್ಲಿ ಈ ಹಿನ್ನೆಲೆ ಯಲ್ಲಿ ಸರಕಾರವು ಪರಿಹಾರ ಕ್ರಮಗಳನ್ನು ಕೈಗೊಳ್ಳುವಲ್ಲಿ, ಸಮುದಾಯದ ಜನರಲ್ಲಿ ಅರಿವು ಜಾಗೃತಿಯನ್ನುಂಟು ಮಾಡಲು ಮಾರ್ಗದರ್ಶಿಯಾಗಿದೆ.

## ಕರ್ನಾಟಕ ರಾಜ್ಯ ಗೊಂದಳಿ ಸಮಾಜ ಸರಕಾರಿ ನೌಕರರ ಸಂಘಟನೆ

ಶಿಕ್ಷಣದ ಸಾರ್ವತ್ರಿಕರಣದ ಹಿನ್ನೆಲೆಯಲ್ಲಿ ಗೊಂದಲಿಗರು ಆಧುನಿಕ ಶಿಕ್ಷಣವನ್ನು ಪಡೆದುಕೊಳ್ಳಲು ದಾಪುಗಾಲು ಇಡುತ್ತಿದ್ದಾರೆ. ಪರಿಣಾಮ ಅನೇಕರು ಸರಕಾರಿ ಅರೆ-ಸರಕಾರಿ ಉದ್ಯೋಗ ಅವಕಾಶವನ್ನು ಪಡೆದುಕೊಳ್ಳುತ್ತಿದ್ದಾರೆ. ಈ ದೃಷ್ಟಿಯಲ್ಲಿ "ಗೊಂದಳಿ ಸಮಾಜದ ಸಹೋದರ-ಸಹೋದರಿಯರು ಸರಕಾರಿ, ಅರೆ-ಸರಕಾರಿ, ಕೆ.ಎಸ್.ಆರ್.ಟಿ.ಸಿ., ಕೆ.ಇ.ಬಿ., ಸಹಕಾರಿ ಸಂಘಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಸದರಿ ಸಮಾಜದ ಬಂಧುಗಳಿಗೆ ಅನಾವಶ್ಯಕ ಕರ್ತವ್ಯ ಲೋಪಗಳನ್ನು ಹೊರಸಿ ಅಮಾನತ್ತಿನಲ್ಲಿ ಇಡುವುದು ಮತ್ತು ಇತರೆ ಕಿರುಕುಳಗಳನ್ನು ಕೊಡುವದನ್ನು ಕೇಳುತ್ತಿದ್ದೇವೆ. ಇಂತಹ ಶೋಷಣೆಗೆ ಒಳಗಾದವರ ಪರವಾಗಿ ಸಂಘಟನಾತ್ಮಕವಾಗಿ ಪ್ರತಿಭಟಿಸಿ, ನ್ಯಾಯ ದೊರಕಿಸುವುದು ಸಂಘಟನೆಯ ಉದ್ದೇಶ. ಪ್ರಜ್ಞಾವಂತರಾದ ನೌಕರರು ಸಮಾಜದ ಬಂಧುಗಳಿಗೆ ಸರಕಾರಿ ಸೌಲಭ್ಯಗಳ ಅರಿವು ನೀಡುತ್ತದೆ. ರಾಜ್ಯ ಗೊಂದಳಿ ಸಮಾಜದ ಆಗು-ಹೋಗುಗಳ ಬಗ್ಗೆ

ಸ್ಪಂದಿಸಿ ಉತ್ತೇಜನ ನೀಡುವುದು, ಸಂಘಟನೆಯ ಜವಾಬ್ದಾರಿಯಾಗಿದೆ. ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುದರ ಮೂಲಕ ಸಮಾಜವನ್ನು ಸದೃಢ ಹಾಗೂ ಆರೋಗ್ಯಕರವಾಗಿಡುವುದು".[೧] ಈ ಹಿನ್ನೆಲೆಯಲ್ಲಿ ಗೊಂದಲಿಗರು ರಾಜ್ಯಮಟ್ಟದಲ್ಲಿ ಸರಕಾರಿ ಅರೇ ಸರಕಾರಿ ಹಾಗೂ ಇತರೆ ಇಲಾಖೆಗಳ ಅಡಿಗಳಲ್ಲಿ ಮಹಿಳಾ ನೌಕರರನ್ನೊಳಗೊಂಡು ಕರ್ನಾಟಕ ರಾಜ್ಯ ಗೊಂದಳಿ ನೌಕರರ ಸಂಘವನ್ನು ಸ್ಥಾಪಿಸುವಲ್ಲಿ ಪ್ರಯತ್ನಗಳು ನಡೆಯುತ್ತಿದ್ದು, ಶ್ರೀಯುತ ಡಿ.ವಾಯ್.ಭಾಗಲೆಯವರ ಸಾಕಷ್ಟು ಶ್ರಮವಹಿಸುತ್ತಿದ್ದಾರೆ. ಅಷ್ಟೇ ಅಲ್ಲ ಉತ್ತರ ಕರ್ನಾಟಕದ ಭಾಗಗಳಲ್ಲಿ ಗೊಂದಲಿಗರಿಗೆ ಆರ್ಥಿಕವಾಗಿ ಅಲ್ಪಸ್ವಲ್ಪ ಸಹಾಯ ಮಾಡುವ ಹಿನ್ನೆಲೆಯಲ್ಲಿ ಸಹಕಾರಿ ಸಂಘಗಳನ್ನು ಸ್ಥಾಪಿಸುವ ಮುಂಚೂಣಿಯಲ್ಲಿದ್ದಾರೆ.

**ಭಾರತೀಯ ಜಾನಪದ ಕಲಾ ಟೆಲಿ ಫಿಲ್ಮ್ ಸೊಸೈಟಿ(ರಿ), ಬೆಂಗಳೂರು**

ಸಮುದಾಯದ ಮುಖಂಡರು ತಮ್ಮದೇ ಆದ ಭಾರತೀಯ ಜಾನಪದ ಕಲಾ ಟೆಲಿ ಫಿಲ್ಮ್ ಸೊಸೈಟಿ(ರಿ), ಬೆಂಗಳೂರು., ಸ್ಥಾಪನೆಯ ಮೂಲಕ ಗೊಂದಲಿಗ ಕಲಾವಿದರ ಕಲೆಗಳನ್ನು ಉಳಿಯಬೇಕು ಎನ್ನುವ ದೃಷ್ಟಿಯಿಂದ ಗೊಂದಲಿಗರ ಹಾಡುಗಳನ್ನು ಕ್ಯಾಸೆಟ್ ಮತ್ತು ಸಿಡಿ ಮಾಡಿ ಸಂಗ್ರಹಿಸುವ ಪ್ರಯತ್ನ ಮಾಡುತ್ತಿದ್ದಾರೆ. ಈ ಸೊಸೈಟಿಯ ಅಡಿಯಲ್ಲಿ, 'ಪದ್ಮಾವತಿ' ಗೋಂದಳಿ ಕಥೆ ಎನ್ನುವ ಸಿಡಿಯು ಹೊರಬಂದಿದೆಯಲ್ಲದೆ ಇನ್ನಿತರ ಹಾಡುಗಳ ಸಿಡಿಯನ್ನು ಹೊರತರುತ್ತಿದ್ದಾರೆ.

## ೭.೨. ಸಮಸ್ಯೆಗಳು

ಸಮಾಜವು ನಿತ್ಯ ಪರಿವರ್ತನಾಶೀಲವಾದುದು. ಬದಲಾವಣೆ ಅಥವಾ ಪರಿವರ್ತನೆ ಒಂದು, ಪ್ರಕೃತಿ ನಿಯಮ. ಸಮಾಜವು ಯಾವಾಗಲೂ ಬದಲಾವಣೆಯ ಸುಳಿಯಲ್ಲಿಯೇ ಮುಂದುವರಿಯುತ್ತದೆ. ಹೊಸ ನೀರು ಬಂದು ಹಳೆ ನೀರು ಕೊಚ್ಚಿ ಹೋಗುವಂತೆ, ಸಮಾಜದಲ್ಲಿ ಹಳೆಯ ಸಂಘ ಸಂಸ್ಥೆಗಳು ಮರೆಯಾಗಿ, ಹೊಸ ಸಂಘ ಸಂಸ್ಥೆಗಳು ಹುಟ್ಟಬಹುದು ಅಥವಾ ಹಳೆಯದಾದವುಗಳು ಹೊಸ ರೂಪವನ್ನು ಹೊಸ ಪಾತ್ರದಲ್ಲಿ ಕಾರ್ಯನಿರ್ವಹಿಸಬಹುದು. ಬದಲಾವಣೆಯ ಸ್ಥಿತ್ಯಂತರದ ಸಂದರ್ಭಗಳಲ್ಲಿ ಬದಲಾವಣೆಯ ತೀವ್ರತೆಗನುಗುಣವಾಗಿ ಸೂಕ್ತವಾಗಿ ಸ್ಪಂದಿಸಲು ಸಂಘ ಸಂಸ್ಥೆಗಳು, ಜನರು ವಿಫಲರಾದರೆ ಸಾಮಾಜಿಕ ರಚನೆದಲ್ಲಿ ಏರು ಪೇರಾಗುತ್ತದೆಯಲ್ಲದೇ ಸಾಮಾಜಿಕ ವಿಘಟನೆಗೆ ಎಡೆಮಾಡಿಕೊಡುತ್ತದೆ.

"ಸಮಾಜವು ಸಾಮಾಜಿಕ ಬಾಂಧವ್ಯಗಳ ಬಲೆಯಾಗಿದೆ. ಜೇಡನ ಬಲೆಯಲ್ಲಿರುವ ಎಳೆಗಳಂತೆ ಸಮಾಜದಲ್ಲಿ ಇರುವ ವಿವಿಧ ಪ್ರಕಾರದ ಸಂಘ ಸಂಸ್ಥೆಗಳು ಪರಸ್ಪರ ಹೆಣೆದು ಕೊಂಡಿರುತ್ತವೆ. ನಿತ್ಯ ಪರಿವರ್ತನಾಶೀಲವಾದ ಸಮಾಜದಲ್ಲಿ ಅದರ ವಿವಿಧ ವ್ಯವಸ್ಥೆಗಳು ಪರಿವರ್ತನೆ ಹೊಂದುವದು ಅನಿವಾರ್ಯವಾಗಿರುತ್ತದೆ. ಒಂದು ವೇಳೆ ಸಮಾಜದ ವಿವಿಧ ಘಟಕಗಳು ಪರಿವರ್ತನೆಯ ವೇಗಕ್ಕೆ ಹೊಂದಿಕೊಂಡು ಹೋಗದಿದ್ದರೆ ಸಾಮಾಜಿಕ ಸಮಸ್ಯೆಗಳು ತಲೆ ಎತ್ತುತ್ತವೆ".[೨] ಔದ್ಯೋಗಿಕರಣ

ನಗರೀಕರಣದ ಹಿನ್ನೆಲೆಯಲ್ಲಿ ಭೌತಿಕ ಪ್ರಗತಿಗೆ ಅನುಗುಣವಾಗಿ ನಮ್ಮ ಆಚಾರ-ವಿಚಾರ, ರೀತಿ-ನೀತಿಗಳು, ಪದ್ಧತಿ-ಪರಂಪರೆಗಳಿಗೆ ಸಂಬಂಧಪಟ್ಟಂತೆ ಅದೇ ರೀತಿಯಲ್ಲಿ ಬದಲಾವಣೆ ಮಾಡಿಕೊಳ್ಳದೆ ಇರುವುದು, ವ್ಯಕ್ತಿ-ವ್ಯಕ್ತಿ-ಸಮೂಹಗಳ ನಡುವಿನ ಭಿನ್ನತೆಗಳಿಂದ ಒಂದು ರೀತಿಯ ಸಂಘರ್ಷದ-ವಿಘಟಿತ ಸ್ಥಿತಿಯನ್ನು ಎತ್ತಿ ತೋರಿಸುವುದರ ಮೂಲಕ ಸಮಸ್ಯೆಗಳಿಗೆ ಎಡೆಮಾಡಿಕೊಡುತ್ತದೆ.

ಸಮಸ್ಯೆಗಳು ಸಾರ್ವತ್ರಿಕವಾದವುಗಳು. ಎಂತಹ ಮುಂದುವರೆದ-ಮುಂದುವರೆಯದ ಸಮಾಜವೇ ಆಗಲಿ ಹಿಂದುಳಿದ ಸಮಾಜವೇ ಆಗಲಿ ನಾಗರಿಕ-ಅನಾಗರಿಕ ಸಮಾಜವೇ ಆಗಲಿ ಒಂದಿಲ್ಲಾ ಒಂದು ಸಮಸ್ಯೆಗಳನ್ನು ಎದುರಿಸುತ್ತಲೇ ಇರುತ್ತವೆ. "ಯಾವುದೇ ತೊಂದರೆ ನಿರಂತರವಾಗಿ ಕಾಡುತ್ತಿದ್ದು, ಅದನ್ನು ಅನಿವಾರ್ಯವಾಗಿ ಅನುಭವಿಸುವಂತಹ ವಾತವರಣ ನಿರ್ಮಾಣವಾದರೆ ಅದು ಸಮಸ್ಯೆ ಎನಿಸಿಕೊಳ್ಳುತ್ತದೆ".[೩] ಹಾರ್ಟನ ಮತ್ತು ಲೆಸ್ಲಿಯವರು- "ಸಮಾಜದಲ್ಲಿನ ಗಣನೀಯ ಸಂಖ್ಯೆಯ ಜನರನ್ನು ಭಾದಿಸುವ ಮತ್ತು ಅದರಿಂದ ಅನಪೇಕ್ಷಣೀಯ ಎಂದು ಪರಿಗಣಿಸಲ್ಪಟ್ಟ ಸ್ಥಿತಿಗತಿಯೇ ಸಮಸ್ಯೆ"[೪] ರಿಚರ್ಡ ಪುಲ್ಲರ ಮತ್ತು ಮೇಯರ್ಸರವರು- "ಸಮಾಜದ ಬಹು ಸಂಖ್ಯಾತ ಜನರಿಂದ ಅನಪೇಕ್ಷಣೀಯವೆಂದು ಪರಿಗಣಿಸಲ್ಪಡುವ ವರ್ತನಾಂಶಗಳೇ ಸಾಮಾಜಿಕ ಸಮಸ್ಯೆಗಳು".[೫] ಸಮಸ್ಯೆಗಳು ಸಮಾಜದ ರೋಗಗ್ರಸ್ಥ ಸ್ಥಿತಿಯನ್ನು ಪ್ರತಿಬಿಂಬಿಸುತ್ತಿದ್ದು, ಸಾಮಾಜಿಕ ರೋಗ ರುಜಿನಗಳೇ ಅಥವಾ ಜಾಡ್ಯಗಳೇ ಸಾಮಾಜಿಕ ಸಮಸ್ಯೆಗಳೆಂದು ಗುರುತಿಸಲಾಗುತ್ತದೆ. ಕಾರಣ ಸಾಮಾಜಿಕ ಸಮಸ್ಯೆಗಳು ಸಮಾಜಕ್ಕೆ ಸಂಬಂಧಿಸಿದ ಸಮಸ್ಯೆಗಳೇ ಆಗಿವೆ.

ನಾಗರೀಕತೆಯ ನಾಗಾಲೋಟಕ್ಕನುಗುಣವಾಗಿ ಆಧುನಿಕತೆಯತ್ತ ದಾಪುಗಾಲು ಇಡುತ್ತಿರುವ ಸಂದರ್ಭದಲ್ಲಿಯೂ ಪ್ರತಿಯೊಂದು ಸಮಾಜ, ಸಮುದಾಯಗಳು ಒಂದಿಲ್ಲಾ ಒಂದು ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿವೆ. ವಿಭಿನ್ನ ವಿಶಿಷ್ಟ ಸಂಸ್ಕೃತಿಯ ಹಿನ್ನೆಲೆಯಲ್ಲಿ ಪಾರಂಪರಿಕ ಜೀವನವನ್ನು ಅನುಸರಿಸುತ್ತಾ ಬಂದಂತಹ ಅಲೆಮಾರಿ ಸಮುದಾಯಗಳು ಸಹ ಕಂಡು ಬರುತ್ತಿರುವ ಬದಲಾವಣೆಗೆ ಸ್ಪಂದಿಸುತ್ತಿರುವಂತೆ ಇನ್ನೊಂದೆಡೆಗೆ ಆ ಸ್ಪಂದನೆಗೆ ಒಳಗಾಗುವ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವದು ಕಂಡುಬರುತ್ತದೆ.

"ನಗರೀಕರಣ, ಆಧುನೀಕರಣ, ಕೈಗಾರೀಕರಣ ಮತ್ತು ಇತರೆ ಜಾತಿ ಜನಾಂಗಗಳ ಪ್ರಭಾವದಿಂದ ಗೊಂದಲಿಗ ಸಮುದಾಯದ ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳಲ್ಲಿ ಬದಲಾವಣೆಯ ಅಂಶಗಳು ಕಂಡುಬರುತ್ತವೆ. ವಸತಿ, ಊಟ, ವೇಷ-ಭೂಷಣ, ಉಡುಗೆ-ತೊಡುಗೆಗಳಲ್ಲಿ ಗಮನಾರ್ಹ ಸಾಮಾಜಿಕ ಬದಲಾವಣೆಗಳು ಗೋಚರಿಸತೊಡಗಿವೆ".[೬] ಬದಲಾವಣೆಯ ಪ್ರಕ್ರಿಯೆಗಳು ಗಾಢವಾದ ಪ್ರಭಾವ ಬೀರಿದ್ದು, ಸಾಮಾಜಿಕ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಅದರ ಪರಿಣಾಮಗಳನ್ನು ಗುರುತಿಸಬಹುದಾಗಿದೆ.

ಗೊಂದಲಿಗರು ಗ್ರಾಮಾಂತರ ಪ್ರದೇಶಗಳಿಂತ ನಗರ ಪ್ರದೇಶಗಳ ಕಡೆಗಿನ ಒಲವು ಮತ್ತು ನೆಲೆ ಕಂಡುಕೊಳ್ಳುವ ಪ್ರಯತ್ನಗಳಿಂದಾಗಿ ಶಿಕ್ಷಣದ ಬಗ್ಗೆ ಹೆಚ್ಚೆಚ್ಚು ಆಸಕ್ತರಾಗಿದ್ದಾರೆ. ಕಾರಣ ಮಕ್ಕಳನ್ನು ಅಷ್ಟೇಅಲ್ಲ, ಹೆಣ್ಣು ಮಕ್ಕಳನ್ನು ಶಾಲೆ ಕಾಲೇಜುಗಳಿಗೆ ಕಳಿಸಲು ಪ್ರಾರಂಭಿಸಿದ್ದಾರೆ.

ಎಲ್ಲಕಿಂತ ಮಿಗಿಲಾಗಿ ಸಮುದಾಯದ ಬಗೆಗಿನ ಅರಿವು ಹೆಚ್ಚುತ್ತಿದ್ದು, ಸಂಘಟಿತರಾಗಲು ಪ್ರಯತ್ನಿಸುತ್ತಿದ್ದಾರೆ. ಸಂಪ್ರದಾಯ, ನಂಬಿಕೆಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಬದಲಾವಣೆಗಳು ಗೋಚರಿಸುತ್ತಿವೆ. ಮೌಢ್ಯತೆಗಳ ಆಚರಣೆಗಳು ಕಡಿಮೆಯಾಗುತ್ತಿದ್ದು, ಗೊಂದಲಿಗರಲ್ಲಿ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಜೀವನದಲ್ಲಿ ಸಹ ಬದಲಾವಣೆಗಳು ಕಂಡುಬರುತ್ತಿವೆ. ಆ ಮೂಲಕ ಸಮಾಜದ ಮುಖ್ಯವಾಹಿನಿಯಲ್ಲಿ ದಾಪುಗಾಲು ಇಡುತ್ತಿದ್ದಾರೆ. ಆದರೆ ಇನ್ನೊಂದೆಡೆಗೆ ಆಧುನಿಕತೆಯ ಸನ್ನಿವೇಶಗಳು, ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳು ಬಂದಂತೆ ಸಮುದಾಯದಲ್ಲಿ ತಲ್ಲಣಗಳು ಪ್ರಾರಂಭವಾಗಿವೆ. ಸಂವಿಧಾನ ಬದ್ದವಾಗಿ ಸಿಗಬೇಕಾದ ಸೌಲಭ್ಯಗಳು ಯಾರು ಬಹುಸಂಖ್ಯಾತರಾಗಿದ್ದಾರೋ, ಅವಕಾಶಗಳನ್ನು ಬಾಚಿಕೊಳ್ಳಲು ಯಾರು ಶಕ್ತರಿದ್ದಾರೂ ಅವರಿಗೆ ಮಾತ್ರ ದೊರೆಯುತ್ತಿವೆಯಲ್ಲದೇ ಅಶಕ್ತರಿಗೆ, ನೆಲೆ ಇಲ್ಲದೇ ಅಲೆಯುತ್ತಿದ್ದ ಮೈಕ್ರೋಸ್ಕೋಪಿಕ ಸಮುದಾಯವಾಗಿರುವ ಗೊಂದಲಿಗರಂತಹ ಅಲೆಮಾರಿಗಳಿಗೆ ಸಂವಿಧಾನ ಬದ್ಧವಾದ ಸೌಲಭ್ಯಗಳು ತಲುಪಿತ್ತಿಲ್ಲ ಎಂದೇ ಹೇಳಬೇಕಾಗಿದೆ.

"ಆಧುನಿಕತೆ ಬೆಳದೆಂತಲ್ಲಾ ಇವತ್ತಿಗೂ ಸಮುದಾಯವನ್ನು ಕಾಡುತ್ತಿರುವ ಸಮಸ್ಯೆ ಎಂದರೆ ಸಮಾಜದಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುವುದು ಹೇಗೆ ಎಂಬುದು. ತನಗೊಂದು ಗುರುತು ಸಮಾಜದಲ್ಲೊಂದು ಗೌರವಕ್ಕಾಗಿ ಸಮುದಾಯ ಹಾತೊರೆಯುತ್ತಿದೆ. ತನ್ನ ಪಾರಂಪರಿಕ ವೃತ್ತಿ ಜೀವನವನ್ನು ಬಿಟ್ಟು ಈಗ ನೆಲೆ ನಿಲ್ಲುವ ಮನಸ್ಸು ಮಾಡತೊಡಗಿದಂತೆ, ದುಡಿದು ತಿನ್ನಲು ಭೂಮಿ ಪರ್ಯಾಯ ಉದ್ಯೋಗ, ತನ್ನ ಕಂದಮ್ಮಗಳಿಗೆ ಶಿಕ್ಷಣ ಬೇಕೆಂದು ಹಾತೊರೆಯುತ್ತಿದೆ. ಆದರೆ ಇವುಗಳನ್ನು ಪಡೆಯುವ ಬಗೆ ಹೇಗೇ? ಕೊಡುವ ದಾತರಾರೆಂದು ಚಿಂತಿತ ಗೊಂಡಿದೆ. ದುರ್ಬಲರಿಗೆ ಮತ್ತು ಮತ ಬ್ಯಾಂಕ ಅಲ್ಲದ ಜನಗಳಿಗೆ ರಾಜಕೀಯ ಪಕ್ಷ ಮತ್ತು ಸರಕಾರಗಳಿಂದ ನೆರವು ದೊರೆಯುವುದು ಮರಳುಗಾಡಿನಲ್ಲಿ ನೀರಿಗಾಗಿ ಹಾತೊರಿದಂತೆ, ಎನ್ನುವ ಸನ್ನಿವೇಶ ಕಂಡುಬರುತ್ತಿದೆ.

ನಿರಕ್ಷರತೆ, ನಿರುದ್ಯೋಗ, ಬಡತನ, ಮೀಸಲಾತಿ ವಂಚನೆ, ರಾಜಕೀಯ ಸ್ಥಾನಮಾನಗಳಿಂದ ವಂಚನೆ, ತನ್ನ ದುಃಖ ದುಮ್ಮಾನಗಳು ಹೇಳಿದರೆ ಕಿವಿಗೆ ಹಾಕಿಕೊಳ್ಳದ ದಪ್ಪ ಚರ್ಮದ ಸರ್ಕಾರಗಳಿಂದಾಗಿ ಈಗಲೂ ಸಮುದಾಯದ ಅನೇಕರು ತಮ್ಮ ಹೊಟ್ಟೆ ಹೊರೆಯಲು ಪಡಬಾರದ ಪಾಡು ಪಡುತ್ತಿದ್ದಾರೆ. ವಾಸಕ್ಕೆ ಯೋಗ್ಯ ಮನೆಯಿಲ್ಲದೇ, ಗುಡಿಸಲು-ಟೆಂಟುಗಳಲ್ಲಿ ಬಿಸಿಲು, ಚಳಿ, ಮಳೆ-ಗಾಳಿಗಳಿಂದ ತನ್ನನ್ನೂ ತಾನು ರಕ್ಷಿಸಿಕೊಳ್ಳಲು ಪರದಾಡುತ್ತಿದೆ. ಕೈಯಲ್ಲಿ ಸ್ಲೇಟು, ಬಳಪ ಹಿಡಿದು ಶಾಲೆಗೆ ಹೊಗಬೇಕಾದ ಮಕ್ಕಳು ಕಂಕುಳಲ್ಲಿ ಜೋಳಿಗೆ ಹಾಕಿಕೊಂಡು ಭಿಕ್ಷೆಗೂ, ಚಿಂದಿ ಹಾಯಲಿಕ್ಕೂ, ಬಾಲಕಾರ್ಮಿಕರಾಗಿ ದುಡಿಯಲಿಕ್ಕೂ ಹೊಗಬೇಕಾದ ಪರಿಸ್ಥಿತಿ ಇದೆ".[೬] ಆಧುನಿಕತೆಯ ಇಂದಿನ ಪರಿಸ್ಥಿತಿಯಲ್ಲಿ ಅನೇಕ ಗೊಂದಲಿಗರು ಅನುಭವಿಸುತ್ತಿರುವ ವಾಸ್ತವಿಕತೆಯ ಬದುಕು-ಭವಣೆಯನ್ನು ಇದು ಪ್ರತಿಬಿಂಬಿಸುತ್ತಿದೆ. ಸ್ವಾತಂತ್ರದ ನಂತರದ ಸನ್ನಿವೇಶದಲ್ಲಿ ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಘೋಷಣೆಗಳು ಎಲ್ಲಡೆಗೂ ಪ್ರತಿಧ್ವನಿಸುತ್ತಿದ್ದರೂ, ಗೊಂದಲಿಗರು ಸೌಲಭ್ಯಗಳು ಅನುಕೂಲತೆಗಳಿಂದ ವಂಚಿತರಾಗಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಪರಿಣಾಮ ಇನ್ನೂ ಅನೇಕರು ಮೂಲಭೂತವಾದ ಆಹಾರ, ಬಟ್ಟೆ, ವಸತಿಯಂತಹ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಪರಿತಪಿಸುತ್ತಿರುವ ಸಂದರ್ಭದಲ್ಲಿ, ಗೊಂದಲಿಗರು ಅನೇಕ ಸಮಸ್ಯೆಗಳ ಸುಳಿಯಲ್ಲಿ ತೊಳಲಾಡುತ್ತಿದ್ದಾರೆ.

**೭.೨.೧. ವಸತಿ ಸಮಸ್ಯೆ**

ಮೂಲತಃ ಅಲೆಮಾರಿಗಳಾಗಿರುವ ಗೊಂದಲಿಗ ಸಮುದಾಯ ಸ್ಥಿರತೆಯ ನೆಲೆಯನ್ನು ಕಂಡು ಕೊಂಡಿರುವದರ ಜೊತೆಗೆ ಅನೇಕರು ತಮ್ಮದೇಯಾದ ಸ್ವಂತ ಆರ್.ಸಿ.ಸಿ ಕಟ್ಟಡದ ಮನೆಯನ್ನು ಹೊಂದಿದ್ದಾರೆ. ಇನ್ನೂ ಕೆಲವರೂ ತಮ್ಮ ಸ್ವಂತ ನಿವೇಶನಗಳಲ್ಲಿ ಅಷ್ಟು ಸುಸಜ್ಜಿತವಲ್ಲದ ದಾಭಾ ರೀತಿಯ ಮನೆಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಹೆಚ್ಚಾಗಿ ನಗರದಂತಹ ಪ್ರದೇಶಗಳಲ್ಲಿಯೂ ನೆಲೆ ಕಂಡುಕೊಂಡಿರುವ ಇವರುಗಳಲ್ಲಿಯೇ ಇನ್ನು ಅನೇಕರು ಗುಡಾರ ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಮುಂಡರಗಿ, ನವಲಗುಂದದಂತಹ ತಾಲೂಕ ಕೇಂದ್ರಿತ ನಗರ ಪ್ರದೇಶಗಳಲ್ಲಿ ಈಗಲೂ ಅನೇಕ ಕುಟುಂಬಗಳು ಅತ್ಯಂತ ಚಿಕ್ಕದಾಗಿರುವ ಗುಡಿಸಲುಗಳಲ್ಲಿ ತಮ್ಮ ಸಂಸಾರಿಕ ಜೀವನವನ್ನು ಕಳೆಯುತ್ತಿರುವ ಅತ್ಯಂತ ದಯನೀಯ ಸ್ಥಿತಿಯನ್ನು ಕಾಣುತ್ತೇವೆ. ಮುಂದೆ ಇರುವ ಅಂಗಳದಲ್ಲಿಯೇ ಅಡುಗೆ, ತಡಿಕೆ ಅಥವಾ ಗೋಣಿ ತಟ್ಟುಗಳಿಂದ ಮಾಡಿದ ಬಚ್ಚಲಿನಲ್ಲಿಯೆ ಸ್ನಾನ ಮಾಡುತ್ತಾರೆ. ನೀರಿಗಾಗಿ ಸಾರ್ವಜನಿಕ ನಲ್ಲಿ, ಬೋರೆವೆಲ್ಲಗಳಿಗೆ ಹೋಗಿ ನೀರು ತುಂಬಿಕೊಂಡು ಬರುತ್ತಾರೆ. ಇನ್ನು ಶೌಚಾಯಲಕ್ಕೆ ಸಾರ್ವಜನಿಕ ಶೌಚಾಲಯಗಳಿಗೂ ಅಥವಾ ಹೊರಗಿನ ಬಯಲು ಪ್ರದೇಶಗಳಿಗೂ ಹೋಗುತ್ತಾರೆ. ಇದೇ ರೀತಿಯಲ್ಲಿ ಗುಡಾರ, ಗುಡಿಸಲುಗಳನ್ನು ಹೊಂದಿರದೆ ಇರುವವರು, ಒಂದು ಕೋಣೆ ಎರಡು ಕೊಣೆ ಇರುವ ಯಾವುದೇ ಸುಸಜ್ಜಿತ-ಸೌಕರ್ಯಗಳಿರದ ಒಂದು ರೀತಿ ಸ್ಥಿತಿವಂತರು ದವಸ-ಧ್ಯಾನಗಳನ್ನು ಇಡಲು ಬಳಸುತ್ತಿದ್ದ ಗೌಡಾನುಗಳ ರೀತಿಯಲ್ಲಿ ಇರುವ ಮನೆಗಳಲ್ಲಿ ಅಲ್ಪ ಸ್ವಲ್ಪ ಅಂದರೆ ತಿಂಗಳಿಗೆ ೧೦೦-೨೦೦ ರೂ.ಗಳ ಬಾಡಿಗೆ ಕೊಟ್ಟು ವಾಸಿಸುತ್ತಿರುವುದು ಕಂಡುಬರುತ್ತದೆ. ಸಮೀಕ್ಷೆಯ ಪ್ರಕಾರ ೧೫೪೪ ಕುಟುಂಬಗಳು ಹೊಂದಿರುವ ಮನೆಗಳ ಮಾದರಿಯನ್ನು ಗಮನಿಸಿದಾಗ-

| ಮನೆಗಳ ಮಾದರಿ | ಸಂಖ್ಯೆ |
|---|---|
| ಗುಡಾರ | - |
| ಗುಡಿಸಲು | ೨೨೭ |
| ಟಿನ್ | ೨೩೭ |
| ದಾಬಾ/ಮಾಳಿಗೆ | ೨೫೮ |
| ಆರ್.ಸಿ.ಸಿ | ೭೪ |
| ಹೆಂಚಿನ | ೪೩೮ |
| ಜನತಾ | ೭೩ |
| ಬಾಡಿಗೆ | ೨೩೭ |

ಈ ಅಂಕಿ-ಸಂಖ್ಯೆಗಳನ್ನು ಗಮನಿಸಿದಾಗ ಬಹುಪಾಲು ಕುಟುಂಬಗಳು ಹೆಂಚಿನ, ಗುಡಿಸಲು, ಟಿನ್, ದಾಬಾಮಾಳಿಗೆ ಹಾಗೂ ಬಾಡಿಗೆ ಮನೆಗಳಲ್ಲಿ ವಾಸಿಸುತ್ತಿದ್ದು, ಆರ್.ಸಿ.ಸಿ ಮನೆಯನ್ನು ಕೇವಲ ಶೇ. ೫ರಷ್ಟು ಕುಟುಂಬಗಳು ಮಾತ್ರ ಹೊಂದಿವೆ.

ಪ್ರಸ್ತುತ ಈ ರೀತಿಯ ವಾಸಸ್ಥಾನದ ಮನೆಗಳಲ್ಲಿ ವಯಸ್ಸಾದ ಅಜ್ಜ-ಅಜ್ಜಿ, ತಂದೆ-ತಾಯಿ, ಮಕ್ಕಳು, ಯುವಕ ಯುವತಿಯರು, ಹೊಸದಾಗಿ ವಿವಾಹ ಮಾಡಿಕೊಂಡಿರುವ ಎಲ್ಲರೂ ವಾಸಿಸುತ್ತಿರುವುದು, ಪ್ರತ್ಯೇಕತೆಗೆ ಅವಕಾಶವೇ ಇಲ್ಲ ಎನ್ನುವ ಸ್ಥಿತಿ ಕಾಣುತ್ತೇವೆ. ಇಂತಹ ಸ್ಥಿತಿಯಲ್ಲಿರುವ ಮನೆಗಳಲ್ಲಿಯ ಕುಟುಂಬದವರು ದಿನ ನಿತ್ಯ ಹಲವಾರು ಸಮಸ್ಯೆಗಳ ಪಡಿಪಾಟಲು ಪಡುತ್ತಿದ್ದಾರೆ. ಹಂದಿ-ನಾಯಿಗಳ ಕಾಟ, ಮನೆಯ ಮುಂದೆಯೆ ಸ್ನಾನ ಹಾಗೂ ಬಾಂಡೆಗಳನ್ನು ಸ್ವಚ್ಚ ಮಾಡುವುದರಿಂದ ಉಂಟಾಗುವ ಕೊಳಚೆ ಪರಿಸರದಿಂದಾಗಿ ಸೊಳ್ಳೆಗಳ ಕಾಟಗಳನ್ನು ಅನುಭವಿಸುವ ಸ್ಥಿತಿ ಸರ್ವೇಸಾಮಾನ್ಯವಾಗಿದೆ. ಅದರಲ್ಲೂ ಮಳೆಗಾಲದ ಸಂದರ್ಭದಲ್ಲಂತೂ ಅವರ ಪರಿಸ್ಥಿತಿ ಹೇಳತೀರದು. ಗಾಳಿ ಮಳೆಯ ಸಂದರ್ಭದಲ್ಲಿ ಅಡುಗೆ ಮಾಡಲು ಆಗುವ ತೊಂದರೆಯಿಂದ ಊಟ ಮಾಡಲು ಪರಿತಪಿಸಬೇಕಾದ ಅಥವಾ ಉಪವಾಸ ಇರಬೇಕಾದ ಸಂಕಷ್ಟವನ್ನು ಅನುಭವಿಸುತ್ತಿದ್ದಾರೆ.

ಪ್ರಜಾಪ್ರಭುತ್ವ-ಕಲ್ಯಾಣರಾಷ್ಟ್ರದ ಕಲ್ಪನೆಯ ಹಿನ್ನೆಲೆಯಲ್ಲಿ ಆಡಳಿತದಲ್ಲಿ ಇರುವ ಪ್ರತಿಯೊಂದು ಸರ್ಕಾರಗಳು 'ಗುಡಿಸಲು ಗುಡಾರ ರಹಿತ ರಾಜ್ಯ'ವನ್ನಾಗಿ ಮಾಡುವ ಆಶಯದ ಹಿನ್ನೆಲೆಯಲ್ಲಿ ಪ್ರತಿಯೊಂದು ಕುಟುಂಬಗಳಿಗೂ ಮನೆಯನ್ನು ಕಟ್ಟಿಕೊಡುತ್ತೇವೆ ಎಂಬ ಪೊಳ್ಳು ಭರವಸೆಗಳನ್ನು ಪ್ರತಿ ಚುನಾವಣೆಯ ಸಂದರ್ಭದಲ್ಲಿ ಹೇಳುತ್ತಾ ಬರುತ್ತಿವೆ. ಆದರೆ ಭರವಸೆಗಳು ಭರವಸೆಗಳಾಗಿಯೇ ಉಳಿದಿದ್ದು, ಗುಡಿಸಲು ನಿವಾಸಿಗಳು ಸಂಕಷ್ಟ ತೊಂದರೆಗಳಿಂದ ಮುಕ್ತರಾಗಿ ಸ್ವಂತಿಕೆಯ ಕಲ್ಪನೆ ಇನ್ನೂ ಸಾಧ್ಯವಾಗಿರದೇ ಇರುವುದು, ನಮ್ಮ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಹಿಡಿದ ಕನ್ನಡಿಯಾಗಿದೆ. ಈ ಸಮಸ್ಯೆಯನ್ನು ಹೋಗಲಾಡಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವಸತಿ ನಿರ್ಮಾಣಕ್ಕೆ ಸಂಬಂಧಪಟ್ಟಂತೆ ಹಲವಾರು ಯೋಜನೆಗಳನ್ನು ಜಾರಿಗೆ ತಂದಿವೆಯೇನೂ ನಿಜ, ವಾಲ್ಮೀಕಿ-ಅಂಬೇಡ್ಕರ ಅವಾಸ ಯೋಜನೆ, ಆಶ್ರಯ ಯೋಜನೆ, ಜೊತೆಗೆ ರಾಜೀವಗಾಂಧಿ ವಸತಿ ಯೋಜನೆಯು ವಿಶೇಷವಾಗಿ ಅಲೆಮಾರಿ-ಅರೆ ಅಲೆಮಾರಿಗಳಿಗೆ ಸಂಬಂಧಪಟ್ಟ ವಸತಿ ಯೋಜನೆ, ಸರ್ವರಿಗೂ ವಸತಿ ಕಾರ್ಯಕ್ರಮದಡಿಯಲ್ಲಿ ಪ್ರತಿವರ್ಷ ಎರಡು ದಶಲಕ್ಷ ಮನೆಗಳನ್ನು ನಿರ್ಮಿಸುವ ಉದ್ದೇಶದಿಂದ ಎರಡು ದಶಲಕ್ಷ ಗೃಹಗಳ ಕಾರ್ಯಕ್ರಮ ಎಂಬ ಯೋಜನೆಯನ್ನು ೧೯೯೮ರಿಂದ ಪ್ರಾರಂಭಿಸಿರುವದು, ಹುಡ್ಕೊ ಯೋಜನೆ, ವಾಜಪೇಯಿ ನಗರ ಯೋಜನೆ ಮುಂತಾದವುಗಳು ಪ್ರಮುಖವಾದವುಗಳು. ದೇಶದುದ್ದಗಲಕ್ಕೂ ಲಕ್ಷಾಂತರ ಕುಟುಂಬಗಳು ವಸತಿ ವಿಹೀನರಾಗಿದ್ದು ಸರ್ಕಾರಗಳು ಮುಂಗಡ ಪತ್ರದಲ್ಲಿ ಒದಗಿಸುವ ಹಣವು ಯಾವುದೇ ರೀತಿಯಲ್ಲಿ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾಗುತ್ತಿಲ್ಲ, ಅಂದರೆ ನಿರ್ದಿಷ್ಟ ಪಡಿಸಿದ ಹಣವನ್ನು ತಾಲೂಕವಾರು ಹಂಚಿದಾಗ ತಾಲೂಕಿಗೆ ಸಂಬಂಧಪಟ್ಟಂತೆ ಬರುವ ಹಣವು ಅತ್ಯಲ್ಪ. ಅದನ್ನು ಎಲ್ಲಾ ಸಮುದಾಯಗಳನ್ನು ದೃಷ್ಠಿಯಲ್ಲಿಟ್ಟು ಹಂಚಬೇಕಾಗುತ್ತದೆ.

ಪರಿಣಾಮ ಪ್ರತಿ ತಾಲ್ಲೂಕಿಗೂ ಸಂಬಂಧಪಟ್ಟಂತೆ, ಹೇಳುವದಾದರೆ ಗೊಂದಲಿಗರ ೧ ಅಥವಾ ೨ ಕುಟುಂಬಗಳು ಮಾತ್ರ ಅಂತಹ ಯೋಜನೆಗಳ ಫಲಾನುಭವಿಗಳಾಗಿದ್ದಾರೆ. ಕಾರಣ ಈಗಲೂ ಗುಡಿಸಲು ನಿವಾಸಿಗಳಾಗಿರುವ ಗೊಂದಲಿಗರು ವಸತಿ ಸಮಸ್ಯೆಯನ್ನು ಅನುಭವಿಸುತ್ತಲೇ ಇದ್ದಾರೆ.

**೬.೨.೨. ಶೈಕ್ಷಣಿಕ ಸಮಸ್ಯೆ**

ಹಿಂದುಳಿದ ಅಲೆಮಾರಿ–ಅರೆಅಲೆಮಾರಿ ಸಮುದಾಯಗಳ ಅಭಿವೃದ್ಧಿಗೆ ಶಿಕ್ಷಣವೇ ಮೂಲಾಧಾರ. ಒಂದು ದೇಶದ ಅಭಿವೃದ್ಧಿಗೆ ಮುಖ್ಯವಾಗಿ ನೈಸರ್ಗಿಕ ಸಂಪತ್ತು, ತಾಂತ್ರಿಕ ಜ್ಞಾನ ಮತ್ತು ಮಾನವ ಶಕ್ತಿ ಇವುಗಳ ನಡುವಿನ ಸಮನ್ವಯವೇ ಆಧಾರವಾಗಿರುವ ಅಂಶಗಳಾಗಿವೆ. ಮಾನವರು ಸುಶಿಕ್ಷಿತರಾದಾಗ ಮಾತ್ರ ಒಂದು ಸಂಪತ್ತಾಗಿ ಪರಿವರ್ತನೆಗೊಳ್ಳುತ್ತದೆ. ಮಾನವ ಶಕ್ತಿಯ ಸದ್ಬಳಕೆಗೆ, ಆ ಮೂಲಕ ದೇಶದ ಅಭಿವೃದ್ಧಿಗೆ ಶಿಕ್ಷಣ ಮುಖ್ಯ ಕಾರಣವಾಗಿದೆ. ಸಾಮಾನ್ಯವಾಗಿ ಇನ್ನುಳಿದ ದೇಶಗಳಿಗೆ ಹೋಲಿಕೆ ಮಾಡಿದರೆ ನಮ್ಮ ದೇಶದಲ್ಲಿ ಸಾಕ್ಷರತಾ ಪ್ರಮಾಣ ಕಡಿಮೆ ಎಂದು ಹೇಳಬೇಕು. ಈ ಹಿನ್ನೆಲೆಯಲ್ಲಿ ಕೇಂದ್ರ–ರಾಜ್ಯ ಸರ್ಕಾರಗಳು ಶಿಕ್ಷಣದ ಸಾರ್ವತ್ರೀಕರಣ, ವಯಸ್ಕರ ಶಿಕ್ಷಣದ ಮೂಲಕ ಸಾಕ್ಷರತಾ ಪ್ರಮಾಣ ಹೆಚ್ಚಿಸುವ ಪ್ರಯತ್ನಗಳನ್ನು ಮಾಡುತ್ತಲೇ ಬಂದಿವೆ. ಪರಿಣಾಮ ದೇಶದ ಸಾಕ್ಷರತಾ ಪ್ರಮಾಣವು ಹೆಚ್ಚುತ್ತಾ ನಡೆದಿದೆ. ೨೦೦೧ರಲ್ಲಿ ದೇಶದ ಸಾಕ್ಷರತಾ ಪ್ರಮಾಣ ಶೇ. ೬೪.೮೩, ಕರ್ನಾಟಕದ ಸಾಕ್ಷರತಾ ಪ್ರಮಾಣ ಶೇ. ೬೭.೦೪ ಇದ್ದರೆ, ೨೦೧೧ರಲ್ಲಿಯ ಜನಗಣತಿಯ ಪ್ರಕಾರ ದೇಶದ ಸಾಕ್ಷರತಾ ಪ್ರಮಾಣವು ಶೇ. ೭೪.೦೪ರಷ್ಟಿದ್ದು ಇದರಲ್ಲಿ, ಪುರುಷರ ಸಾಕ್ಷರತಾ ಪ್ರಮಾಣವು ಶೇ. ೮೨.೧೪, ಸ್ತ್ರೀಯರ ಸಾಕ್ಷರತಾ ಪ್ರಮಾಣವು ಶೇ. ೬೫.೪೬ರಷ್ಟಿದ್ದು, ಕರ್ನಾಟಕದ ಸಾಕ್ಷರತಾ ಪ್ರಮಾಣವು ಶೇ. ೭೫.೬೦ರಷ್ಟಿದೆ. ಸಮೀಕ್ಷೆಯ ಹಿನ್ನೆಲೆಯಲ್ಲಿ ಗಮನಿಸಿದಾಗ ಗೊಂದಲಿಗರ ಸಾಕ್ಷರತಾ ಪ್ರಮಾಣ ಶೇ. ೫೬.೦೩ರಷ್ಟಿದ್ದು, ಅದರಲ್ಲಿ ಪುರುಷರು ಶೇ. ೬೬.೩ ಮತ್ತು ಮಹಿಳೆಯರು ಶೇ. ೪೫.೦೬ರಷ್ಟಿದೆ.

ಈ ಅಂಕಿ ಸಂಖ್ಯೆಗಳ ಹಿನ್ನೆಲೆಯಲ್ಲಿ ಗೊಂದಲಿಗ ಸಮುದಾಯದ ಸಾಕ್ಷರತಾ ಪ್ರಮಾಣವನ್ನು ಗಮನಿಸಿದಾಗ ರಾಷ್ಟ್ರ ರಾಜ್ಯದ ಸರಾಸರಿ ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆಯಾಗಿದೆ. ಅಂದರೆ ಗೊಂದಲಿಗರಲ್ಲಿ ಅನಕ್ಷರತೆಯ ಪ್ರಮಾಣ ಹೆಚ್ಚು ಇದ್ದು, ಹೆಣ್ಣು ಮಕ್ಕಳ ಶಿಕ್ಷಣಕ್ಕಂತೂ ಇನ್ನೂವರೆಗೂ ಪ್ರೋತ್ಸಾಹಿಸುತ್ತಿರುವದನ್ನು ಕಾಣಲಾರೆವು. ಪರಿಣಾಮ ಸಮಾಜದ ಅಭಿವೃದ್ಧಿಯ ಚಟುವಟಿಕೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಸಾಧ್ಯವಾಗುತ್ತಿಲ್ಲ. ಮೂಲತಃ ಬಡತನದ ಪರಿಸ್ಥಿತಿಯಲ್ಲಿ ತೊಳಲಾಡುತ್ತಿರುವುದರಿಂದ, ಮಕ್ಕಳನ್ನು ಶಾಲೆಗೆ ಕಳುಹಿಸುವದರಿಂದ ಏನು ಬರುತ್ತದೆ? ಹೆಣ್ಣು ಮಕ್ಕಳು ಶಾಲೆ ಕಲಿತು ಏನು ಮಾಡುತ್ತಾರೆ? ಎನ್ನುವ ಮಾತುಗಳಿಂದ ಹಾಗೂ ತಮ್ಮ ದುಡಿಮೆಯಲ್ಲಿ ಮಕ್ಕಳನ್ನು ಬಳಸಿಕೊಳ್ಳುವದರಿಂದ ಶಿಕ್ಷಣದಿಂದ ದೂರ ಉಳಿಯುತ್ತಿದ್ದಾರೆ.

ಅಭಿವೃದ್ಧಿಯ ಮೂಲ ಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನವಾಗಿರುವ ಶಿಕ್ಷಣವು ಸಾಮಾಜಿಕ ಚಲನೆಗೆ ವಾಹಕವಾಗಿದ್ದು, ವ್ಯಕ್ತಿಯ ಅಂತಸ್ತಿನ ನಿರ್ಧಾರಕ ಅಂಶವಾಗಿದೆ.

ಶಿಕ್ಷಣವಿಲ್ಲದೆ ವ್ಯಕ್ತಿ ವೈಯುಕ್ತಿಕವಾಗಲಿ, ಸಾಮಾಜಿಕವಾಗಲಿ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ. ಶಿಕ್ಷಣದ ಕೊರತೆಯು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಹಿಂದುಳಿಯಲು ಕಾರಣವಾಗುವುದರ ಜೊತೆಗೆ ಸಮಾಜದ ಮುಖ್ಯವಾಹಿನಿಗೆ ಬರಲು ಸಹ ಅಡ್ಡಿಯಾಗಿದೆ. ಕೇವಲ ಮೇಲಸ್ತರದಲ್ಲಿರುವ ಗೊಂದಲಿಗರು ಶಿಕ್ಷಣ, ಉದ್ಯೋಗ ಪಡೆದುಕೊಂಡರೆ ಸಾಲದು, ಕೆಳಸ್ತರದಲ್ಲಿರುವ, ಶಿಕ್ಷಣದಿಂದ ವಂಚಿತರಾದವರು, ಸರಕಾರವು ಕೊಟ್ಟಿರುವ ಸೌಲಭ್ಯಗಳಿಂದ ಶಿಕ್ಷಣವನ್ನು ಕಲಿಯಲು ಆ ಮೂಲಕ ಉತ್ತಮ ಉದ್ಯೋಗ ಅವಕಾಶಗಳನ್ನು ಪಡೆದುಕೊಳ್ಳಲು ಪ್ರೋತ್ಸಾಹಿಸುವುದು ಅವಶ್ಯಕವಾಗಿದೆ.

### ೭.೨.೩. ಮೀಸಲಾತಿ ಸಮಸ್ಯೆ

ಗೊಂದಲಿಗ ಸಮುದಾಯದವರನ್ನು ಆಯಾ ಪ್ರದೇಶದ ಜನರು ಗೊಂದಲಿಗ್ಯಾರು, ದೋಷಿಗರಾರು, ಬುಡಬುಡಿಕ್ಯಾರು ಎಂಬ ವಿವಿಧ ಹೆಸರುಗಳಿಂದ ಗುರುತಿಸಿದ್ದಾರೆ. ಗೊಂದಳಿ ಪೂಜಾ ವಿಧಾನದ ಮೂಲಕ ಗೊಂದಲಿಗರು ಎಂದು ಗುರುತಿಸಿಕೊಂಡಿರುವ ಇವರು ವೃತ್ತಿ ನಿರ್ವಹಣೆಯ ಮೂಲಕ ಭಿಕ್ಷಾಟನೆಯಿಂದ ಜೀವನ ನಿರ್ವಹಣೆ ಮಾಡುತ್ತಾ ಬಂದವರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಡಾ. ಗಂಗಾಧರ ದೈವಜ್ಞ ಅವರು ಬರೆದ 'ಗೊಂದಲಿಗರು' ಎನ್ನುವ ಗ್ರಂಥದಲ್ಲಿ ಅವರ ಮೂಲ, ಹಿನ್ನೆಲೆ, ಸಾಮಾಜಿಕ ಸಾಂಸ್ಕೃತಿಕ ಅಂಶಗಳು, ಭಾಷೆ, ಬೆಡಗುಗಳ ಹಿನ್ನೆಲೆಯಲ್ಲಿ ಗೊಂದಲಿಗರು ಬುಡಕಟ್ಟು ಸಮುದಾಯದ ಎಲ್ಲಾ ಲಕ್ಷಣಗಳನ್ನು ಹೊಂದಿದ್ದಾರೆ, ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಶ್ರೇಷ್ಠ ಸಮಾಜಶಾಸ್ತ್ರಜ್ಞರಾದ ಡಿ.ಎನ್. ಮಜುಂದಾರ್ ರವರು "ಒಂದೇ ಹೆಸರನ್ನು ಹೊಂದಿರುವ ಒಂದೇ ಭೂಪ್ರದೇಶದಲ್ಲಿ ವಾಸಿಸುವ, ಒಂದೇ ಭಾಷೆಯನ್ನಾಡುವ, ಒಳಬಾಂಧವ್ಯದ ವಿವಾಹ ಹೊಂದಿರುವ, ವಿಶಿಷ್ಟ ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಕಾಪಾಡಿಕೊಂಡು ಬಂದಿರುವ ಕುಟುಂಬಗಳ ಸಮೂಹವೇ ಆದಿವಾಸಿ ಸಮೂಹಗಳು".[೮] ಈ ವಾಖ್ಯೆಯ ಹಿನ್ನೆಲೆಯಲ್ಲಿ ಗೊಂದಲಿಗ ಸಮುದಾಯವನ್ನು ಹೋಲಿಕೆ ಮಾಡಿದಾಗ ಬುಡಕಟ್ಟು ಸಮುದಾಯದ ಎಲ್ಲಾ ಲಕ್ಷಣಗಳು ಗೋಚರಿಸುತ್ತವೆ. ಈ ದೃಷ್ಟಿಯಲ್ಲಿಯೇ ಗೊಂದಲಿಗರು ತಮ್ಮನ್ನು 'ಪರಿಶಿಷ್ಠ ಪಂಗಡ'ದ ಪಟ್ಟಿಯಲ್ಲಿ ಸೇರಿಸಲು ಸ್ವಾತಂತ್ರದ ನಂತರದಲ್ಲಿ ಸಾಕಷ್ಟು ಚಳುವಳಿ-ಹೋರಾಟಗಳನ್ನು ಮಾಡುವುದರ ಜೊತೆಗೆ ರಾಜ್ಯ-ಕೇಂದ್ರ ಸರ್ಕಾರಕ್ಕೆ ನೂರಾರು ಮನವಿ ಪತ್ರಗಳನ್ನು ಸಲ್ಲಿಸಿದ್ದಾರೆ. ಇತ್ತೀಚೆಗೆ ರಾಷ್ಟ್ರಿಯ ಅಲೆಮಾರಿ - ಅರೆಅಲೆಮಾರಿ ಮತ್ತು ವಿಮುಕ್ತ ಬುಡಕಟ್ಟುಗಳ ಆಯೋಗದ ಅಧ್ಯಕ್ಷರಾದ ಶ್ರೀ ಬಾಳಕೃಷ್ಣ ರೇಣುಕೆಯವರು ತಮ್ಮ ವರದಿಯನ್ನು ಕೊಟ್ಟಿದ್ದು ಪರಿಶಿಷ್ಟ ಜಾತಿ/ಜನಾಂಗದವರ ರೀತಿಯಲ್ಲಿ ಸಮಾನಾಂತರವಾಗಿ ಇವರಿಗೆ ಮೀಸಲಾತಿ ಮತ್ತು ಸೌಲಭ್ಯಗಳನ್ನು ಕಲ್ಪಿಸಿಕೊಡಬೇಕೆಂದು ಶಿಫಾರಸ್ಸು ಮಾಡಿದೆ. ಈ ಆಯೋಗದ ವರದಿಯನ್ನಾದರೂ ಜಾರಿಗೆ ತರಬೇಕೆಂದು ಇತ್ತೀಚಿಗೆ ಬೃಹತ್ ಸಮಾವೇಶಗಳ ಮೂಲಕ ಹೋರಾಟ ಮಾಡುತ್ತಿದ್ದಾರೆ.

ಗೊಂದಲಿಗ ಸಮುದಾಯವು ರಾಜ್ಯ ಸರಕಾರದ ಮೀಸಲಾತಿಯಡಿಯಲ್ಲಿ ಪ್ರವರ್ಗ-೧ರಲ್ಲಿ ಬರುತ್ತದೆ. ಆದರೆ ಪರಿಶಿಷ್ಟ ಜಾತಿ/ಜನಾಂಗದವರಿಗೆ ಇರುವಷ್ಟು ಸೌಲಭ್ಯಗಳು, ಅನುಕೂಲತೆಗಳು ಪ್ರವರ್ಗ-೧ರಲ್ಲಿ ಬರುವ ಸಮುದಾಯಗಳಿಗೆ ಇರುವುದಿಲ್ಲ. ಹೀಗಾಗಿ ಕೆಲವು ಮೂಲಭೂತ ಸಮಸ್ಯೆಗಳಿಂದ ವಂಚಿರಾಗಿದ್ದಾರಲ್ಲದೇ ಸುಶಿಕ್ಷಿತರಾದ ಗೊಂದಲಿಗ ಯುವಕ-ಯುವತಿಯರು ಸರ್ಕಾರದ ಉದ್ಯೋಗವಕಾಶಗಳು ಸಿಗದೆ ನಿರುದ್ಯೋಗಿಗಳಾಗಿದ್ದಾರೆ. ಪರಿಣಾಮ ಮಾಡಿರುವ ಸಮೀಕ್ಷೆಯನ್ನು ಗಮನಿಸಿದಾಗ ಸರ್ಕಾರಿ ಉದ್ಯೋಗಿಗಳು ಶೇ. ೨ರಷ್ಟು ಇರುವುದು ಕಾಣಸಿಗುವುದು. ಒಟ್ಟಾರೆ ಈ ಸಮುದಾಯವು ಹಿಂದುಳಿದ ಬುಡಕಟ್ಟು ಸಮುದಾಯವಾಗಿರುವದರಿಂದ ಪರಿಶಿಷ್ಠ ಪಂಗಡಕ್ಕೆ ಸೇರಬೇಕಾದದ್ದು ಅವಶ್ಯಕವಾಗಿದೆ. ಇಲ್ಲವಾದರೆ ಕರ್ನಾಟಕದಲ್ಲಿನ ಪರಿಶಿಷ್ಟ ಜಾತಿ-ಜನಾಂಗ, ಅಲೆಮಾರಿ-ಅರೆಅಲೆಮಾರಿ ಸಮುದಾಯಗಳ ಪುನರ್ ಸಮಿಕ್ಷೆ ಮಾಡಿ ಈ ಪಟ್ಟಿಗಳನ್ನು ಪುನರ್ ರಚಿಸಬೇಕು. ಇದು ಸಾಧ್ಯವಾಗದಿದ್ದರೆ ಕರ್ನಾಟಕದ ಎಲ್ಲಾ ಅಲೆಮಾರಿ-ಅರೆಅಲೆಮಾರಿ ಸಮುದಾಯಗಳ ಸ್ಪಷ್ಟ ಅಂಕಿ-ಅಂಶಗಳನ್ನು ಕಲೆ ಹಾಕಿ, ಇಂತಹ ಸಮುದಾಯಗಳಿಗೆ ಪರಿಶಿಷ್ಟರಿಗೆ ಇರುವ ರೀತಿಯ ಎಲ್ಲ ಸೌಲಭ್ಯಗಳನ್ನು, ಅವಕಾಶಗಳನ್ನು ಕಲ್ಪಿಸಿಕೊಡಬೇಕು. ಅಂದಾಗ ಮಾತ್ರ ಇಂತಹ ಸಮುದಾಯಗಳು ಸಮಾಜದ ಮುಖ್ಯವಾಹಿನಿಯಲ್ಲಿ ಸೇರಲು ಸಾಧ್ಯವಾಗುವದು. ಕಾರಣ ಗೊಂದಲಿಗರು ಬುಡಕಟ್ಟಿನ ಎಲ್ಲ ಲಕ್ಷಣಗಳು ಹೊಂದಿರುವದರಿಂದ ಇವರನ್ನು ಪರಿಶಿಷ್ಟ ವರ್ಗಕ್ಕೆ ಸೇರಿಸುವುದರ ಮೂಲಕ ಸಾಮಾಜಿಕ ನ್ಯಾಯ ಕಲ್ಪಿಸುವುದರೊಂದಿಗೆ ಅಲೆಮಾರಿಗಳಿಗಾಗಿಯೇ ವಿಶೇಷ ಮೀಸಲಾತಿ ಸೌಲಭ್ಯಗಳನ್ನು ನೀಡಬೇಕಾಗಿರುವದು ಅಗತ್ಯವಾಗಿದೆ.

### ೭.೨.೪. ಸರ್ಕಾರಿ ಮೂಲಭೂತ ಸೌಲಭ್ಯಗಳ ಕೊರತೆ

ಗೊಂದಲಿಗ ಸಮುದಾಯದಂತಹ ಅಲೆಮಾರಿ ಸಮುದಾಯಗಳು ಅನೇಕ ಸರ್ಕಾರಿ ಸೌಲಭ್ಯಗಳಿಂದ ವಂಚಿತವಾಗಿರುವಂತಹ ಸ್ಥಿತಿ ಕಂಡುಬರುತ್ತಿದೆ. ಇಂದಿನ ಆಧುನಿಕ ಕಾಲದಲ್ಲಿ ಬಡತನ ರೇಖೆಯಲ್ಲಿರುವರು, ಸಾರ್ವಜನಿಕರು ರೇಷನ್ ಕಾರ್ಡ್, ಮತದಾರರ ಗುರುತಿನ ಚೀಟಿ, ವಿಧವಾ ವೇತನ, ವೃದ್ಯಾಪವೇತನ, ಶಿಷ್ಯವೇತನದಂತಹ ಸೌಲಭ್ಯಗಳನ್ನು ಅನೇಕರು ಹೊಂದದೇ ಇರುವದು ಕಂಡುಬರುತ್ತದೆ. ಸಂದರ್ಶನದ ಸಂದರ್ಭದಲ್ಲಿ ಅಣ್ಣಪ್ಪ ಶಿಂಧೆ, ಬುಡಬುಡಿಕೆಯ ವೃತ್ತಿಯಲ್ಲಿರುವರು, ೬೫ ವರ್ಷವಿದ್ದರೂ, ಮತದಾರರ ಗುರುತಿನ ಚೀಟಿ ಇಲ್ಲದೇ ಇರುವದು ಹಾಗೂ ರಹವಾಸಿ ಪತ್ರ ದೊರಕದೆ ಇರುವದರಿಂದ ವೃದ್ಯಾಪ ವೇತನಕ್ಕಾಗಿ ಅಲೆದಾಡುತ್ತಿರುವ ತಮ್ಮ ಸಂಕಷ್ಟವನ್ನು ತೋಡಿಕೊಂಡರು. ಹಾಗೆಯೇ ತಮ್ಮ ಸಹೋದರಿಯು ವಿಧವೆಯಾಗಿದ್ದು, ಈ ಮೊದಲು ಅವರು(ಗದಗ) ಬೇರೆ ಊರಲ್ಲಿ ಇದ್ದರು, ಈಗ ನಾವು ಇದ್ದಲ್ಲಿಯೇ(ಹೊಳೆ-ಅಲೂರ)ಬಂದ್ದಿದಾರೆ. ಇದರಿಂದಾಗಿ ಅಲ್ಲಿ ಅವರಿಗೆ ಸಿಗುತ್ತಿದ್ದ. ಅಥವಾ ಬರುತ್ತಿದ್ದ ವಿಧವಾ ವೇತನವನ್ನು ಇಲ್ಲಿಗೆ ವರ್ಗಾವಣೆ ಮಾಡಲು ಆಗದೇ ಇರುವದರಿಂದ ಬರುತ್ತಿದ್ದ ವಿಧವಾ ವೇತನ ೭-೮ ತಿಂಗಳುಗಳಿಂದ ಸ್ಥಗಿತಗೊಂಡಿದೆ. ಅದರಿಂದ ಸಾಕಷ್ಟು ತೊಂದರೆಯನ್ನು ಅನುಭವಿಸುತ್ತಿದ್ದಾರೆ. ಎಂಬ ಕೊಟ್ಟಿರುವ ಮಾಹಿತಿಯು

ಅಲೆಮಾರಿತನದ ಬದುಕಿನಿಂದ ಅವರು ಅನುಭವಿಸುತ್ತಿರುವ ತೊಂದರೆಗಳನ್ನು ಎತ್ತಿತೋರಿಸುತ್ತದೆ. ಶಾಲೆ ಕಾಲೇಜುಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳಲ್ಲಿಯೂ ಅನೇಕರು ಶಿಷ್ಯವೇತನಕ್ಕಾಗಿ ಪರದಾಡುತ್ತಿದ್ದಾರೆ.

**ಕೋಷ್ಟಕ ೭.೧ ಸರ್ಕಾರಿ ಮೂಲಭೂತ ಸೌಲಭ್ಯಗಳು**

| ಹೊಂದಿರುವ ಸೌಲಭ್ಯಗಳು | ಒಟ್ಟು ಸಂಖ್ಯೆ |
|---|---|
| ಗುರುತಿನ ಚೀಟಿ | ೪೦೦೮ |
| ವಿಧವಾವೇತನ | ೨೪೫ |
| ನಿವೃತ್ತಿ ವೇತನ | ೩೭ |
| ಶಿಷ್ಯ ವೇತನ | ೧೭೧ |
| ಅಂಗವಿಕಲರ ವೇತನ | ೭೪ |
| ಪಡಿತರ ಚೀಟಿ ಹೊಂದಿದ ಕುಟುಂಬಗಳು | ೭೩೨ |

ಈ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ ಮೂಲಭೂತವಾಗಿ ಪ್ರತಿಯೊಂದು ಕುಟುಂಬಗಳು ಹೊಂದಿರಬೇಕಾದ ಪಡಿತರ ಚೀಟಿಯನ್ನೇ ಅರ್ಧದಷ್ಟು ಕುಟುಂಬಗಳು ಹೊಂದಿರದೇ ಇರುವದು, ಗುರುತಿನ ಚೀಟಿಯನ್ನು ಇನ್ನೂ ಅನೇಕರು ಹೊಂದಿರದೇ ಇರುವದು, ವಿಧವಾ ವೇತನ ಇನ್ನೂ ೭೯ರಷ್ಟು ಮಹಿಳೆಯರು ಪಡೆಯದೇ ಇರುವದು ಮುಂತಾದ ಮೂಲಭೂತವಾಗಿ ಹಕ್ಕಿನ ರೀತಿಯಲ್ಲಿ ಪಡೆದುಕೊಳ್ಳಬೇಕಾದ ಅನೂಕೂಲತೆಗಳನ್ನು ಪಡೆದುಕೊಂಡಿಲ್ಲಯೆನ್ನುವದೇ ಆಶ್ಚರ್ಯವೆನಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಅನಕ್ಷರತೆಯ ಜೊತೆಗೆ ಅಲೆಮಾರಿತನದ ಬದುಕನ್ನು ಕಳೆಯುತ್ತಿರುವದರಿಂದ ಇಂಥಹ ಸೌಲಭ್ಯಗಳನ್ನು ಪಡೆದುಕೊಳ್ಳಲು ಪ್ರಯತ್ನಿಸದೇ ಇರುವದನ್ನು ಕಾಣುತ್ತೇವೆ.

ಗೊಂದಲಿಗರಲ್ಲಿ ಅನೇಕರು ಅನಕ್ಷರಸ್ಥರಾಗಿರುವದರಿಂದ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಇಲಾಖೆಗಳಿಂದ ಗೃಹ ಕೈಗಾರಿಕೆಗಳಿಗೆ, ಕೌದಿ ಹೊಲೆಯುವ ಕಾರ್ಯದಲ್ಲಿ ತೊಡಗಲು ಕೊಡಮಾಡಲ್ಪಡುವ ಸಬ್ಸಿಡಿ ಹಾಗೂ ಕಡಿಮೆ ಬಡ್ಡಿ ದರದಲ್ಲಿ ಸಾಲ ಸೌಲಭ್ಯಗಳನ್ನು ಪಡೆದುಕೊಳ್ಳಲಿಕ್ಕೆ ಸಾಧ್ಯವಾಗದೇ ಇರುವ ಸ್ಥಿತಿ ಕಂಡುಬರುತ್ತದೆ. ಆ ಸಾಲವನ್ನು ತೆಗೆದು ಕೊಳ್ಳಬೇಕಾದರೆ ಹಲವಾರು ಕಾಗದ ಪತ್ರಗಳು, ಒಬ್ಬ ಜಾಮೀನುದಾರರನ್ನು ಕೊಡಬೇಕಾಗುತ್ತದೆ. ವಸತಿವಿಹೀನರು ವಸತಿ ಯೋಜನೆಗಳಿಂದಲೂ ಹೆಚ್ಚಿನ ಅನುಕೂಲತೆಗಳನ್ನು ಪಡೆದುಕೊಳ್ಳಲು ಸಾಧ್ಯವಾಗದೆ ಇರುವ ಸ್ಥಿತಿಯು ಕಂಡುಬರುತ್ತದೆ. ಸರಕಾರದ ವಿವಿಧ ಸೌಲಭ್ಯಗಳನ್ನು ಹೆಚ್ಚಾಗಿ ಸಮುದಾಯದ ಮೇಲಸ್ಥರದಲ್ಲಿ ಇರುವವರು ಪಡೆದುಕೊಳ್ಳುತ್ತಿದ್ದಾರೆ. ಆದರೆ ಕೆಳಸ್ಥರದವರು ಅಂತಹ ಸೌಲಭ್ಯಗಳ ಪರಿಚಯವಿಲ್ಲದ ಸ್ಥಿತಿಯಲ್ಲಿಯು ಇದ್ದಾರೆ.

ಔದ್ಯೋಗಿಕರಣ ಉದಾರೀಕರಣ ಜಾಗತೀಕರಣದ ಸಂದರ್ಭದಲ್ಲಿ ಒಂದೆಡೆಗೆ ಸರಕಾರಿ ಮತ್ತು ಅರೆ-ಸರಕಾರಿ ಉದ್ಯೋಗವಕಾಶಗಳು ಕಡಿಮೆಯಾಗುತ್ತಿರುವದರಿಂದ ಇನ್ನೊಂದೆಡೆಗೆ ಲಭ್ಯವಿರುವ

ಉದ್ಯೋಗವಕಾಶಗಳು ವಿಶೇಷ ಕೌಶಲ್ಯತೆ ಮತ್ತು ಪ್ರಾವೀಣ್ಯತೆಯ ಮೇಲೆ ಆಧಾರವಾಗಿರುವುದರಿಂದ ಈ ರೀತಿಯ ತಾಂತ್ರಿಕ ಶಿಕ್ಷಣವನ್ನು ಹೊಂದಿದವರು ಗೊಂದಲಿಗರಲ್ಲಿ ಕಂಡುಬರುವವರು ಕೇವಲ ಬೆರಳಣಿಕೆಯಷ್ಟು ಮಾತ್ರ, ಇನ್ನೊಂದೆಡೆಗೆ ಸುಶಿಕ್ಷಿತರಾದವರು ಮೀಸಲಾತಿಯ ಸೌಲಭ್ಯದ ಅಡಿಯಲ್ಲಿ ಪ್ರಯತ್ನಿಸುತ್ತಿದ್ದರೂ, ಉದ್ಯೋಗ ಅವಕಾಶಗಳು ಸಿಗದೆ ಇರುವುದರಿಂದ ನಿರುದ್ಯೋಗಿ ಯುವಕರ ಸಂಖ್ಯೆಯು ಕಂಡುಬರುತ್ತದೆ. ಸಿಕ್ಕಿರುವ ಸರಕಾರಿ ಉದ್ಯೋಗ ಅವಕಾಶಗಳ ಸಂದರ್ಭದಲ್ಲಿ ನೀತಿ ನಿಯಮಗಳ ಅನುಗುಣವಾಗಿ ಜಾತಿ ಪ್ರಮಾಣ ಪತ್ರ, ಸಿಂಧುತ್ವವನ್ನು ತೆಗೆಸಲು ಸಾಕಷ್ಟು ಪರದಾಡ ಬೇಕಾಗುತ್ತದೆ. ಮೊದಲೇ ಬಡತನದ ಪರಿಸ್ಥಿತಿಯಲ್ಲಿರುವ ಗೊಂದಲಿಗರು ನಿರಂತರ ಅಲೆದಾಟ ಹಾಗೂ ಲಂಚದಿಂದಾಗಿ ಸಾಕಷ್ಟು ಹಣವನ್ನು ವ್ಯಯಿಸುವ ಸ್ಥಿತಿಯನ್ನು ಕಾಣುತ್ತವೆ.

ಸಂದರ್ಶನದ ಸಂದರ್ಭದಲ್ಲಿ ಗಜೇಂದ್ರಗಡದಲ್ಲಿ ಜ್ಯೋತಿಷಿ ಹನಮಂತ ಶಾಸ್ತ್ರಿಯವರು ಸಮುದಾಯದ ವೃತ್ತಿಗೆ ಸಂಬಂಧಪಟ್ಟ ಮಾಹಿತಿಯಗಳನ್ನು ಕೇಳುತ್ತಿರುವಾಗ ಸರಿಯಾಗಿ ಸ್ಪಂದಿಸಿದೇ ಅನೇಕ ಜನರು ಬರುತ್ತಾರೆ, ಹೋಗುತ್ತಾರೆ. ನಮ್ಮ ಮಾಹಿತಿ ಕೇಳುತ್ತಾರೆ, ಹೋಗುತ್ತಾರೆ, ಇದರಿಂದ ನಮಗೆ ಏನು ಲಾಭವಾಗುತ್ತಿಲ್ಲ, ನಮ್ಮ ಸಮಸ್ಯೆಗಳೇ ನಮಗೆ! ನೀವು ತೆಗೆದುಕೊಂಡು ಏನು ಮಾಡುತ್ತರಿ? ಎನ್ನುವ ರೀತಿಯಲ್ಲಿ ಸಿಟ್ಟಿನಿಂದ ಉತ್ತರವನ್ನು ಕೊಡುತ್ತಿರುವದರ ಬಗ್ಗೆ ಅವರ ಹತ್ತಿರದ ವ್ಯಕ್ತಿಯನ್ನು ಕೇಳಿದಾಗ ಸಾಕಷ್ಟು ಖರ್ಚು ಮಾಡಿ ಮಗನನ್ನು ಡಿಪ್ಲೋಮಾ ಓದಿಸಿದ್ದಾರೆ, ಆದರೆ ಅವನಿಗೆ ಯಾವುದೇ ನೌಕರಿ ಸಿಕ್ಕಿಲ್ಲ ಎನ್ನುವ ಮಾಹಿತಿಯು ದೊರೆಯಿತು. ಇದು ಕೇವಲ ಯಾರದೊಬ್ಬರ ಸ್ಥಿತಿಯಲ್ಲ, ನಿರುದ್ಯೋಗ ಸಮಸ್ಯೆಯ ಪೆಂಡಭೂತ ಇವರನ್ನು ಕಾಡುತ್ತಿದೆ. ಹೀಗಾಗಿ ಬದಲಾದ ಇಂದಿನ ಸನ್ನಿವೇಶದಲ್ಲಿ ಸುಶಿಕ್ಷಿತರಾಗಿದ್ದರೂ ಸರಿಯಾದ ಉದ್ಯೋಗವಕಾಶಗಳು ಲಭ್ಯವಾಗುತ್ತಿಲ್ಲ.

ಪರಿಣಾಮ ಜೀವನಕ್ಕಾಗಿ ಅವಲಂಬಿತವಾಗಿದ್ದ ವಂಶಪಾರಂಪರ್ಯ ಕುಲಕಸಬುಗಳು ಅಥವಾ ಪ್ರದರ್ಶಕ ಕಲೆಗಳ ಬೆಲೆ ಇಲ್ಲದೇ ಇರುವದರಿಂದ, ಆದಾಯ ತರುವ ಯಾವುದೇ ಉದ್ಯೋಗವಕಾಶಗಳು ಸಿಗದೇ ಇರುವ ಸಂದರ್ಭದಲ್ಲಿ ಅನೇಕ ಗೊಂದಲಿಗರು ದಿನದ ಉಪಜೀವನಕ್ಕಾಗಿ ಕೂಲಿ-ನಾಲಿ ಮಾಡಿಯೂ ಇಲ್ಲವೇ ಗುಜರಿ ವ್ಯಾಪಾರವನ್ನು ಮಾಡಿ ಜೀವನ ನಿರ್ವಹಣೆಗೆ ಆರ್ಥಿಕ ಮೂಲಗಳನ್ನು ಕಂಡುಕೊಂಡಿದ್ದಾರೆ. ಆದರೆ ಇಂತಹ ಉದ್ಯೋಗ ನಿರ್ವಹಣೆಯು ಜೀವನಕ್ಕೆ ಸಾಕಾಗುವಷ್ಟು ಹಣ ಸಂಪಾದಿಸುವಷ್ಟು ಸಾಧ್ಯವಾಗದೇ ಇರುವುದರಿಂದ ಸಮುದಾಯದ ಅನೇಕ ಜನರು ಆರ್ಥಿಕ ಸಂಕಷ್ಟದಿಂದ ಬಳಲುತ್ತಿರುವುದು ಕಂಡುಬರುತ್ತದೆ.

### ೭.೨.೫. ರಾಜಕೀಯ ಪ್ರಾತಿನಿಧ್ಯದ ಕೊರತೆ

ರಾಜ್ಯದಲ್ಲಿ ಗೊಂದಲಿಗರು ರಾಜಕೀಯವಾಗಿ ಅತ್ಯಂತ ಹಿಂದುಳಿದಿದ್ದಾರೆ. ರಾಜಕೀಯವಾಗಿ ಹಿಂದುಳಿದಿರುವಿಕೆಯಿಂದಾಗಿ ಆರ್ಥಿಕ ಮತ್ತು ಶೈಕ್ಷಣಿಕ ಪ್ರಗತಿಯು ಸಾಧ್ಯವಾಗಿಲ್ಲ. ಸ್ವಾತಂತ್ರ್ಯ ಸಿಕ್ಕು ೬-೭ ದಶಕಗಳು ಕಳೆದರೂ, ಈ ಸಮುದಾಯವು ಯಾವುದೇ ರಾಜಕೀಯ ಪ್ರತಿನಿಧಿಗಳನ್ನು

ರಾಷ್ಟ್ರಮಟ್ಟದಲ್ಲಾಗಲಿ, ರಾಜ್ಯಮಟ್ಟದಲ್ಲಾಗಲಿ ಹೊಂದಿಲ್ಲ. ಸ್ವಾತಂತ್ರ ಪೂರ್ವದಲ್ಲಿಯೇ ಸಮುದಾಯದ ಸಂಘಟನೆಗೆ ಪ್ರಯತ್ನಗಳು ನಡೆದಿದ್ದರೂ, ಸಂಘಟನೆಯಿಂದ ಯಾವುದೇ ರೀತಿ ರಾಜಕೀಯ ಪ್ರಗತಿ ಸಾಧಿಸಲು ಸಾಧ್ಯವಾಗಿಲ್ಲ. ಸ್ವಾತಂತ್ರದ ನಂತರ ಸಮುದಾಯ ಸಂಘಟನೆಗಾಗಿ ಹಿರಿಯ ಮುಖಂಡರು ಸಂಘಟಿತ ಪ್ರಯತ್ನಗಳನ್ನು ಮಾಡಿದರೂ ಸಮುದಾಯದ ಜನರಲ್ಲಿ ರಾಜಕೀಯ ಜಾಗೃತಿಯನ್ನು ಉಂಟುಮಾಡಲು ಇನ್ನೂವರೆಗೂ ಸಾಧ್ಯವಾಗಿಲ್ಲ ಸ್ಥಳೀಯ ಸಂಸ್ಥೆಗಳ ಚುನಾವಣೆಗಳಲ್ಲಿ ಮಾಡಿರುವ ಮೀಸಲಾತಿ ಸೌಲಭ್ಯದಿಂದಾಗಿ ಗೊಂದಲಿಗರು ಹಿಂದುಳಿದ 'ಎ' ಗುಂಪಿನಲ್ಲಿ ಬರುವುದರಿಂದ, ಅದರ ಅನುಕೂಲತೆಯಿಂದಾಗಿ ಅಲ್ಲೊಬ್ಬರೂ, ಇಲ್ಲೊಬ್ಬರೂ ಗ್ರಾಮ ಪಂಚಾಯಿತಿ, ತಾಲೂಕ ಪಂಚಾಯಿತಿ, ಜಿಲ್ಲಾ ಪಂಚಾಯತಿ, ನಗರಸಭೆಗಳ ಸದಸ್ಯರಾಗಿ ಆಯ್ಕೆಗೊಳ್ಳುತ್ತಿದ್ದಾರೆ.

ಅಲೆಮಾರಿಗಳಾಗಿರುವ ಗೊಂದಲಿಗರು ರಾಜಕೀಯ ಪ್ರಜ್ಞೆಗೆ ಮೂಲಭೂತವಾಗಿ ಹೊಂದಿರ ಬೇಕಾದ ಮತದಾರರ ಗುರುತಿನ ಚೀಟಿಯನ್ನು ಹೊಂದದೆ ಇರುವುದನ್ನು ಕಾಣುತ್ತೇವೆ. ಅಷ್ಟೇಅಲ್ಲ ಮತದಾನದಲ್ಲಿಯೂ ಆಸಕ್ತಿಯಿಂದ ಭಾಗವಹಿಸುತ್ತಿಲ್ಲ. ಪರಿಣಾಮ ಗೊಂದಲಿಗ ಸಮುದಾಯ ರಾಜಕೀಯವಾಗಿ ಯಾವುದೇ ಪ್ರಾತಿನಿಧ್ಯವನ್ನು ಹೊಂದಿರದೇ, ರಾಜಕೀಯ ಲಾಭಗಳನ್ನು, ಅವಕಾಶ ಗಳನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲದಿರುವುದರಿಂದಾಗಿ ರಾಜಕೀಯವಾಗಿ ಹಿಂದುಳಿದಿದೆ. ಅಷ್ಟೇಅಲ್ಲ ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂದುಳಿಯಲು ಕಾರಣವಾಗಿದೆ.

### ೭.೨.೬. ಮದ್ಯಪಾನ ವ್ಯಸನ

ಸಾಮಾನ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯು ಒಂದಿಲ್ಲಾ ಒಂದು ದುಶ್ಚಟಗಳಿಂದ ಒಳಗಾಗಿದ್ದಾರೆ. ಏಕೆಂದರೆ ವ್ಯಕ್ತಿಯು ತನ್ನ ದೌರ್ಬಲ್ಯಗಳನ್ನು ಮರೆಮಾಚಲು ಇಲ್ಲವೆ ದೈಹಿಕ, ಮಾನಸಿಕ ಸ್ಥಿರತೆ, ಸದೃಢತೆಯನ್ನು ಹೊಂದದೇ ಇರುವವರು ಸಹಜವಾಗಿ ಒಂದಿಲ್ಲಾ ಒಂದು ದುಶ್ಚಟಗಳಿಗೆ ಬಲಿ ಯಾಗುತ್ತಾರೆ. ಇಂತಹ ದುಶ್ಚಟಗಳಿಂದ ದೈಹಿಕವಾಗಿ, ಮಾನಸಿಕವಾಗಿ ತೊಂದರೆಯಾದರೂ, ಕೌಟುಂಬಿಕವಾಗಿ, ಸಾಮಾಜಿಕವಾಗಿ ಏರುಪೇರುಗಳಾದರೂ ವ್ಯಕ್ತಿಯು ದುಶ್ಚಟಗಳಿಂದ ಹೊರಬರಲು ಪ್ರಯತ್ನಿಸುವುದು ಕಡಿಮೆ, ಅಲ್ಲದೇ ಅವನು ದೈಹಿಕವಾಗಿ, ಮಾನಸಿಕವಾಗಿ ಆ ದುಶ್ಚಟಗಳ ಮೇಲೆ ಸಂಪೂರ್ಣ ಅವಲಂಬಿತನಾಗಿರುವದರಿಂದ ಅದರ ಕಪಿಮುಷ್ಟಿಯಿಂದ ಹೊರಬರುವುದು ಕಷ್ಟದಾಯಕ. ಅದರಲ್ಲೂ ಇಂದಿನ ಆಧುನಿಕ ಕಾಲದಲ್ಲಿ ಕಂಡುಬರುತ್ತಿರುವ ಕೆಲಸದ ಒತ್ತಡಗಳು, ಜೀವನ ನಿರ್ವಹಣೆಗೆ ಸಂಬಂಧಪಟ್ಟಂತೆ ಕಂಡುಬರುವ ಮಾನಸಿಕ ಒತ್ತಡಗಳು, ಅದರ ಜೊತೆಗೆ ಆಕರ್ಷಣೆಗೆ ಒಳಗಾಗುವ ರೀತಿಯಲ್ಲಿ ಸುಲಭವಾಗಿ ದೊರಕುವ ದುಶ್ಚಟದ ವಸ್ತುಗಳು ಸಹಜವಾಗಿ ವ್ಯಕ್ತಿಗಳ ಮೇಲೆ ಪ್ರಭಾವ ಬೀರಿ ಅಂತಹ ದುಶ್ಚಟಗಳ ದಾಸಾನುದಾಸರಾಗಿದ್ದಾರೆ. ಅದೇ ರೀತಿ ಪ್ರದರ್ಶಕ ಕಲೆಯನ್ನು ಅನುಸರಿಸುತ್ತಾ ಊರಿಂದ ಊರಿಗೆ ಅಲೆಯುವ ಮೂಲಕ ವೃತ್ತಿ ನಿರ್ವಹಣೆಯನ್ನು ಮಾಡುವ ಗೊಂದಲಿಗರು ಶ್ರಮ ಜೀವಿಗಳು, ಕಷ್ಟ ಸಹಿಷ್ಣುಗಳು, ದಿನಪೂರ್ತಿ ಅಲೆಯುವ ಇವರು ತಮಗಾಗಿರುವ ದೈಹಿಕ ಆಯಾಸವನ್ನು ಹೋಗಲಾಡಿಸಿಕೊಳ್ಳಲು ದುಶ್ಚಟಗಳಿಗೆ ಬಲಿಯಾಗಿದ್ದಾರೆ.

ಆದರಲ್ಲೂ ಮುಖ್ಯವಾಗಿ ಗೊಂದಲಿಗರು ಮದ್ಯಪಾನ, ತಂಬಾಕು ಸೇವನೆಯಂತಹ ದೈಹಿಕ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುವಂತಹ ದುಶ್ಚಟಗಳಿಗೆ ಒಳಗಾಗಿದ್ದಾರೆ.

ಆಧುನಿಕ ಸಂಕೀರ್ಣ ಸಮಾಜದಲ್ಲಿ ಜಗತ್ತಿನ ಹಲವಾರು ದೇಶಗಳು ಎದುರಿಸುತ್ತಲಿರುವ ಜ್ವಲಂತ ಹಾಗೂ ಭೀಕರ ಸಮಸ್ಯೆಗಳಲ್ಲಿ ಮದ್ಯಪಾನ, ಅತಿ ಪಾನೀಯತೆಯು ಪ್ರಮುಖ ಸಮಸ್ಯೆಯಾಗಿದೆ. ನಮ್ಮ ದೇಶದ ಗ್ರಾಮಗಳಲ್ಲಿ ಶುದ್ಧ ಕುಡಿಯುವ ನೀರಿನ ಬಾವಿಗಳು, ಸಿಗಲಿಕ್ಕಿಲ್ಲ ಆದರೆ ಸೆರೆ-ಸಿಂದಿಯ ಅಂಗಡಿಗಳು ಮಾತ್ರ ಖಂಡಿತ ಸಿಗುತ್ತವೆ. ತಮಗಾಗಿರುವ ಆಯಾಸವನ್ನು ಹೊಗಲಾಡಿಸಲು, ದುಃಖ ಮರೆಯಲು, ಸಂತೋಷ ಹೆಚ್ಚಾದಾಗ, ಉದ್ಯೋಗ ಅಥವಾ ನೌಕರಿ ಸಿಗದೆ ಇರುವದರಿಂದ, ಫ್ಯಾಷನಿಗಾಗಿ ಹೀಗೆ ಹಲವಾರು ಕಾರಣಗಳಿಗಾಗಿ ಕುಡಿತದ ಚಟಕ್ಕೆ ಒಳಗಾಗುವ ವ್ಯಕ್ತಿಗಳು ಬರುಬರುತ್ತಾ ದೈಹಿಕವಾಗಿ, ಮಾನಸಿಕವಾಗಿ ಅದರ ಮೇಲೆ ಸಂಪೂರ್ಣ ಅವಲಂಬಿತರಾಗಿ ದಾಸಾನುದಾಸರಾಗಿ ತಮಗೂ ತಮ್ಮನ್ನು ಅವಲಂಬಿಸಿರುವ ಅಥವಾ ಹತ್ತಿರದ ಸಂಬಂಧಿಕರಿಗೂ, ಯಾವುದೇ ರೀತಿ ಸಂತೋಷ-ನೆಮ್ಮದಿಯನ್ನು ತಂದುಕೊಡದೇ, ದೈಹಿಕ-ಮಾನಸಿಕ ಹಿಂಸೆಯನ್ನು ಕೊಡುತ್ತಾ ಕೊನೆಗೆ ತಮ್ಮ ಜೀವನವನ್ನು ಅಂತ್ಯಗೊಳಿಸಿಕೊಳ್ಳುತ್ತಾರೆ.

"ಮದ್ಯಪಾನವು ವ್ಯಕ್ತಿಯ ಶರೀರ ಮತ್ತು ಆತ್ಮವನ್ನು ನಾಶಗೊಳಿಸುತ್ತದೆ ಎಂದು ಗಾಂಧೀಜಿಯವರು ಹೇಳಿದಂತೆ ಕುಡಕರು ದೈಹಿಕ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಕಳೆದುಕೊಂಡು ವಾಸಿಯಾಗದ ರೋಗ ರುಜಿನಗಳಿಗೆ ಬಲಿಯಾಗುತ್ತಾರೆ. ದೇಹದ ಮೇಲಿನ ಸಂಪೂರ್ಣ ಹಿಡಿತವನ್ನು ಕಳೆದುಕೊಂಡು, ವಿಚಾರ ಶಕ್ತಿ ಕುಂಠಿತಗೊಂಡು ವಿವೇಕಶೂನ್ಯನಾಗಿ, ಕಾಡು ಪ್ರಾಣಿಯಂತೆ ವರ್ತಿಸುತ್ತಾನೆ. ಕುಡಿತದಿಂದ ಜೀರ್ಣಾಂಗಗಳು ನಾಶವಾಗುತ್ತದೆ, ಪಚನ ಶಕ್ತಿ ಕಡಿಮೆಯಾಗುತ್ತದೆ, ಕುಡಿತದ ಅಮಲಿನಲ್ಲಿ ಬರೀ ಹೊಟ್ಟೆಯಿಂದ ಹಾಗೆ ಇರಲು ಪ್ರಾರಂಭಿಸಿದಾಗ, ಜಠರದ ಒಳಭಾಗಕ್ಕೆ ಹಾನಿಯಾಗುವ ಸಾಧ್ಯತೆಗಳು ಇರುತ್ತವೆ. ಮದ್ಯಪಾನವು ನೇರವಾಗಿ ಯಕೃತಿನ ಮೇಲೆ ದುಷ್ಪರಿಣಾಮವನ್ನು ಬೀರುತ್ತದೆ. ಯಕೃತ್ ತನ್ನ ಕಾರ್ಯಚರಣೆಯನ್ನು ಸರಿಯಾಗಿ ಮಾಡದಿದ್ದಾಗ ವ್ಯಕ್ತಿಗೆ ಯಕೃತ್ ರೋಗ(Liver Desease) ಬರಬಹುದಾಗಿದೆ. ಕುಡಿತದ ಪರಿಣಾಮವು ಹೃದಯ ಮತ್ತು ನರಮಂಡಲಗಳ ಮೇಲೂ ಪ್ರಭಾವ ಬೀರುತ್ತದೆ. ಮದ್ಯದ ಅಂಶವು ರಕ್ತನಾಳದಲ್ಲಿ ಪಸರಿಸಿ ರಕ್ತದ ಚಲನ-ವಲನೆಗಳ ಮೇಲೆ ದುಷ್ಪರಿಣಾಮ ವನ್ನು ಬೀರುತ್ತದೆ. ಹೃದಯದ ಸುತ್ತಲಿರುವ ರಕ್ತಮಾಂಸ, ಜೀವಕೋಶಗಳ ಮೇಲೆ ಮದ್ಯದ ಪರಿಣಾಮವಾಗುವುದರಿಂದ ಅವುಗಳ ಚಟುವಟಿಕೆಗಳು ಸ್ಥಗಿತಗೊಂಡು, ನರಗಳ ದೌರ್ಬಲ್ಯಗಳಿಂದ ಬಳಲುವದರಿಂದ, ಕೈ-ಕಾಲುಗಳ ನಡುಕ ಪ್ರಾರಂಭವಾಗಿ ಗ್ರಹಣ ಶಕ್ತಿ, ನೆನೆಪಿನ ಶಕ್ತಿ, ವಿಚಾರ ಶಕ್ತಿಗಳನ್ನು ಕಳೆದುಕೊಂಡು ದುರ್ಬಲ ಮನಸ್ಸಿನವನಾಗಿ ಬೀಡುತ್ತಾನೆ".[೯] ಸಾಮಾಜಿಕವಾಗಿಯೂ ಕುಡುಕ ವ್ಯಕ್ತಿಯು ಒಂದು ರೀತಿಯ ತಪ್ಪಿತಸ್ಥ ಭಾವನೆಯಿಂದಾಗಿ, ಅವಿಶ್ವಾಸ, ಸಂಶಯಾತ್ಮಕ ಮನೋಭಾವನೆಯಿಂದ ಯಾರೊಂದಿಗೂ ಬೆರೆಯಲು ಆಗದೇ ಒಂಟಿತನ ಏಕಾಂಗಿತನದ ಜೀವನವನ್ನು ಕಳೆಯಬೇಕಾಗುತ್ತದಲ್ಲದೇ, ಇನ್ನುಳಿದವರು ಯಾರು ಇವನಿಗೆ ಗೌರವ ಕೊಡಲಾರರು. 'ಸಿಂದಿ-

ಸೆರೆ ಸಹವಾಸ ಹೆಂಡರು-ಮಕ್ಕಳೂ ಉಪವಾಸ' ಎನ್ನುವ ಹಾಗೆ ದಾಂಪತ್ಯ ಜೀವನದ ಮೇಲೆ ಪರಿಣಾಮ ಬೀರಿ ಕೌಟುಂಬಿಕ ವಿಘಟನೆಗೆ ಎಡೆಮಾಡಿಕೊಡುವ ಮದ್ಯಪಾನ ಸೇವನೆಯನ್ನು ತಡೆಗಟ್ಟಲು ಸರಕಾರ ಹಲವಾರು ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಂಡಿದ್ದರೂ, ಇನ್ನೊಂದೆಡೆಗೆ ಅವುಗಳನ್ನು ಮಾರಾಟ ಮಾಡುವ ಬಾರ್ ಅಂಗಡಿಗಳನ್ನು ತೆರೆಯಲು ಮುಕ್ತವಾಗಿ ಪರವಾನಿಗೆ ಕೊಡುತ್ತಲಿರುವದು, ಅಷ್ಟೇ ಅಲ್ಲ ಸರ್ಕಾರದ ಅಂಗಸಂಸ್ಥೆಯಾಗಿರುವ ಎಂ.ಎಸ್.ಆಯ್.ಎಲ್. ಮೂಲಕ ಪ್ರತಿಯೊಂದು ನಗರ ಪ್ರದೇಶಗಳಲ್ಲಿ ಮದ್ಯದ ಅಂಗಡಿಗಳನ್ನು ತೆರೆಯುತ್ತಿರುವ ವಿಪರ್ಯಾಸದ ಸ್ಥಿತಿಯು ಕಂಡುಬರುತ್ತದೆ.

ಅಲೆಮಾರಿ ಬದುಕಿನ ಹಿನ್ನೆಲೆಯನ್ನು ಹೊಂದಿರುವ ಗೊಂದಲಿಗರು ತಮ್ಮ ವೃತ್ತಿಯ ನಿರ್ವಹಣೆಯ ಹಿನ್ನೆಲೆಯಲ್ಲಿಯೂ ವಂಶ ಪಾರಂಪರ್ಯವಾಗಿ ಮದ್ಯಪಾನದ ದುಶ್ಚಟಗಳಿಗೆ ಒಳಗಾಗಿದ್ದಾರೆ. ಅಂದರೆ ಮದ್ಯಪಾನ ಸೇವನೆಯು ಮೊದಲಿನಿಂದಲೂ ಬೆಳೆದು ಬಂದಿದ್ದು ಪ್ರಾರಂಭದಲ್ಲಂತೂ ಗೊಂದಲಿಗರಲ್ಲಿ ಸೆರೆ-ಸಿಂದಿ ಸೇವನೆಯು ಸರ್ವೇಸಾಮಾನ್ಯವಾದ ರೀತಿಯಲ್ಲಿ ಸಮುದಾಯದ ಬಹುಪಾಲು ಜನರು ಹೆಣ್ಣು ಗಂಡು ಎನ್ನುವ ಬೇಧವು ಇಲ್ಲದೆ ಕುಡಿಯುವ ಪದ್ಧತಿಯು ಕಂಡುಬರುತ್ತಿತಂತೆ. ಹೆಣ್ಣು ಗಂಡು ಕೊಡ ಕೊಳ್ಳುವ ವ್ಯವಹಾರವು ಸಹ ಸೆರೆ ಸಿಂದಿ ಅಂಗಡಿಗಳಲ್ಲಿಯೇ ನಡೆಯುತ್ತಿದ್ದವಂತೆ. ಹೀಗೆ ಮದ್ಯಪಾನ ದುಶ್ಚಟಕ್ಕೆ ಒಳಗಾಗುತ್ತಾ ಗೊಂದಲಿಗರು ತಮ್ಮ ಆದಾಯದ ಶೇ. ೩೦ರಿಂದ ೪೦ರಷ್ಟು ಹಣವನ್ನು ಈ ದುಶ್ಚಟಕ್ಕಾಗಿ ವ್ಯಯಿಸುತ್ತಿರುವದು, ಆರ್ಥಿಕವಾಗಿ ಮತ್ತಷ್ಟು ಸಂಕಷ್ಟಕರ ಪರಿಸ್ಥಿತಿಯಲ್ಲಿ ತೊಳಲಾಡುವದಕ್ಕೆ ಕಾರಣವಾಗಿದೆ ಅಂದರೆ ತಪ್ಪಾಗಲಿಕ್ಕಿಲ್ಲ.

ಇಂದಿನ ಬದಲಾದ ಆಧುನಿಕ ಕಾಲದಲ್ಲಿಯೂ ಗೊಂದಲಿಗರಲ್ಲಿ ಅನೇಕರು ಮದ್ಯಪಾನದಂತಹ ದುಶ್ಚಟಗಳಿಂದ ಮುಕ್ತರಾಗಿಲ್ಲ. ಸಾಯಂಕಾಲದ ಅವಧಿಯಾಯಿತೆಂದರೆ ಸಾಕು, ಗಂಡಸರು ಮದ್ಯದ ಅಂಗಡಿಗಳಿಗೆ ಹೋಗಿ ಅಲ್ಲಿಯೇ ಕುಡಿದು ಬರುವದಾಗಲಿ ಇಲ್ಲವೇ ಮನೆಗೆ ಬಾಟಲಿಗಳನ್ನು ತಂದು, ಮನೆಯ ಮುಂದಿನ ಅಂಗಳದಲ್ಲಿಯೇ ಕುಳಿತು ಮದ್ಯ ಸೇವನೆ ಮಾಡಿ ಮನೆಯ ಸದಸ್ಯರಿಗೆ ಅಸಭ್ಯವಾಗಿ ಮಾತನಾಡುವದನ್ನು, ಬಡತನ ರೇಖೆಯಲ್ಲಿ ಇರುವ ಕೆಲವು ಕುಟುಂಬದಲ್ಲಿ ಈಗಲೂ ಕಂಡುಬರುತ್ತದೆ. ಇಂತಹ ಕುಡಿತದ ಚಟಗಳಿಗೆ ಒಳಗಾದ ಗಂಡಸರು ಅನೇಕ ದೈಹಿಕ ಮಾನಸಿಕ ರೋಗಗಳಿಗೆ ಒಳಗಾಗಿ ಮದ್ಯವಯಸ್ಸಿನಲ್ಲಿ ಸಾವಿಗೆ ಈಡಾಗುತ್ತಿದ್ದಾರೆ. ಪರಿಣಾಮ ಇವರಲ್ಲಿ ವಿಧುರರಗಿಂತ ವಿಧವೆಯರ ಸಂಖ್ಯೆಯೇ ಹೆಚ್ಚು ಕಂಡುಬರುವುದೇ ಸಾಕ್ಷಿಯಾಗಿದೆ. ಭವಿಷ್ಯತ್ತಿನಲ್ಲಿ ಅಂತಹ ಕುಟುಂಬಗಳು ವಿಧವೆ ಮಕ್ಕಳು ಸಾಕಷ್ಟು ತೊಂದರೆಗಳನ್ನು ಅನುಭವಿಸುತ್ತಾ ಬದುಕನ್ನು ಕಳೆಯುವ ದುಸ್ತರ ಪರಿಸ್ಥಿತಿಯು ಕಂಡು ಬರುವದು. ಇದರ ಜೊತೆಗೆ ತಂಬಾಕು ಸೇವನೆಯು ಸಾಮಾನ್ಯವಾಗಿದ್ದು, ಹಿರಿಯ ತಲೆಮಾರಿನ ಮಹಿಳೆಯರು ಸಹ ಮನೆಯಲ್ಲಿ ಎಲೆ ಅಡಕಿಯ ಜೊತೆಗೆ ತಂಬಾಕನ್ನು ಜಗೆಯುತ್ತಿರುವುದು ಕಂಡುಬರುತ್ತದೆ. ಯುವ ಜನಾಂಗದವರು ಇತ್ತಿತ್ತಲಾಗಿ ಬಂದಿರುವ ಗುಟಕಾ ಚೀಟುಗಳ ಸೇವನೆಗೆ ಹೆಚ್ಚು ಬಲಿಯಾಗುತ್ತಿದ್ದಾರೆ.

ಧಾರ್ಮಿಕ ಆಚರಣೆಗಳಡಿಯಲ್ಲಿ ಇತ್ತಿತ್ತಲಾಗಿ ಅನುಸರಿಸುತ್ತಾ ಬಂದಿರುವ ಮತ್ತು ಅವರ ಸಾಮಾಜಿಕ ಜೀವನದ ಮೇಲೆ ಆಗಾಧ ಪ್ರಭಾವ ಬೀರುತ್ತಿರುವ ಪರಂಪರೆಯಾಗಿರುವ 'ವಾರಕರಿ' ಸಂಪ್ರದಾಯದಿಂದ ಮತ್ತು ಶಿಕ್ಷಣದ ಪ್ರಭಾವದಿಂದಾಗಿ ಗೊಂದಲಿಗರಲ್ಲಿ ಅನೇಕರು ಇಂತಹ ದುಶ್ಚಟಗಳಿಂದ ವಿಮುಖರಾಗುತ್ತಿರುವದು, ಒಳ್ಳೆಯ ಬೆಳೆವಣಿಗೆಯಾಗಿದೆ. ಆದಾಗ್ಯೂ ಗೊಂದಲಿಗರ ಸಮುದಾಯದಲ್ಲಿ ಇನ್ನೂ ಅನೇಕರು ಮದ್ಯಪಾನದಂತ ದುಶ್ಚಟಗಳಿಗೆ ಒಳಗಾಗಿ ಆರ್ಥಿಕ ಸಂಕಷ್ಟವನ್ನು, ಬಡತನದಂತಹ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ.

"ಒಂದು ಕಾಲದ ಅಲೆಮಾರಿಗಳು ನೆಲೆ ನಿಲ್ಲಲೂ ಇನ್ನಿಲ್ಲದಂತೆ ಯತ್ನಿಸುತ್ತಿದ್ದಾರೆ. ಈಗಾಗಲೇ ಬಹುತೇಕ ಅಲೆಮಾರಿಗಳು ನೆಲೆ ನಿಂತಿದ್ದಾರೆ. ಆದರೆ ಮುಖ್ಯವಾಹಿನಿಯ ಆರ್ಥಿಕ ಚಲನೆಗಳ ಜೊತೆ ಅವರಿಗೆ ಅನುಸಂಧಾನ ಸಾಧ್ಯವಾಗುತ್ತಿಲ್ಲ. ಅಲೆಮಾರಿಗಳ ವರ್ತಮಾನದ ಸ್ಥಿತಿಗತಿಗಳು ಮತ್ತು ಕೆಳ ಜಾತಿ ಸಮುದಾಯಗಳ ಸ್ಥಿತಿಗತಿಗಳಿಗೂ ಭಾರತದ ಸಾಮಾಜಿಕ ಅಧಿಕಾರ ಹಂಚಿಕೆಯ ವ್ಯವಸ್ಥೆಯಲ್ಲಿ ಒಂದೇ ಬಗೆಯ ಕಾರಣಗಳಿದ್ದರೂ ಸಹ, ಅಲೆಮಾರಿಗಳ ಸಮಸ್ಯೆಗಳು ತುಸು ಸಂಕೀರ್ಣವಾಗಿವೆ. ಸಾಮಾಜಿಕ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ವಲಯಗಳಲ್ಲಿ ಅಂತಹ ಸೌಲಭ್ಯಗಳನ್ನು ಪಡೆಯುವಾಗ ಈ ಸಮುದಾಯಗಳು ತಲ್ಲಣಗೊಳ್ಳುತ್ತಿವೆ. ಜಾತಿ ಪ್ರಮಾಣ ಪತ್ರ ಪಡೆಯುವ ಪ್ರಾಥಮಿಕ ಹಂತದಿಂದಲೂ ಅಲೆಮಾರಿ ಸಮುದಾಯಗಳು ಹೊರಾಟ ನಡೆಸಬೇಕಿದೆ, ಇನ್ನು ಮೀಸಲಾತಿಯೊಂದಿಗೆ ಮುಖ್ಯ ಪ್ರವಾಹದ ವೇಗದ ಲಯಕ್ಕೆ ಅಲೆಮಾರಿಗಳು ಒಗ್ಗುವದಕ್ಕೆ ಎಷ್ಟೂ ತಲೆಮಾರು ಬೇಕು?"[೧೦] ಎನ್ನುವ ವಾಸ್ತವಿಕ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಗೊಂದಲಿಗರು ಅನೇಕ ರೀತಿಯ ಸಮಸ್ಯೆಗಳನ್ನು ಸವಾಲುಗಳನ್ನು ಎದುರಿಸಬೇಕಾಗಿದೆ

ಅಧಿಕಾರದಲ್ಲಿರುವ ಪ್ರತಿಯೊಂದು ಸರ್ಕಾರಗಳು ಅಭಿವೃದ್ಧಿಯ ಹೆಸರಿನಲ್ಲಿ ಸಾವಿರಾರು ಕೋಟಿ ರೂ. ಹಣವನ್ನು ವಿನಿಯೋಗಿಸುತ್ತವೆ, ಖರ್ಚುಮಾಡುತ್ತವೆ. "ಇತ್ತೀಚಿನ ದಿನಗಳಲ್ಲಿ ಅತ್ಯಂತ ವ್ಯಾಪಕವಾಗಿ ಬಳಕೆಯಲ್ಲಿ ಇರುವ ಪರಿಕಲ್ಪನೆ ಎಂದರೆ ಅಭಿವೃದ್ಧಿ. ಈ ಅಭಿವೃದ್ಧಿಯ ಪ್ರಕ್ರಿಯೆಯು ಸಮಾಜದ ಕೆಳವರ್ಗಗಳಿಗೆ ಮಾತ್ರ ಮೇಲ್ಮುಖ ಚಲನೆಗೆ ಸೋಪಾನವಾಗಿ ಪರಿಣಮಿಸಿದೆಯೇ, ಹೊರತು ಶತಮಾನಗಳಿಂದ ಸಾಮಾಜಿಕ ಅಸಮಾನತೆ ಅನ್ಯಾಯಗಳನ್ನು ಎದುರಿಸುತ್ತಿರುವ ಎಲ್ಲ ಸಮೂಹಗಳಿಗಿಲ್ಲ, ಎನ್ನುವುದು ವಾಸ್ತವಿಕ ಸತ್ಯ".[೧೧] ಪರಿಣಾಮ ಇಂದಿನ ಅಭಿವೃದ್ಧಿಯ ಪರಿಕಲ್ಪನೆಯು ಉಳ್ಳವರನ್ನು ಮತ್ತಷ್ಟು ಅನುಕೂಲವಂತರನ್ನಾಗಿಸಿ, ಕೆಳಸ್ಥರ ದಲ್ಲಿರುವವರನ್ನು ಮತ್ತಷ್ಟು ಅವನತಿಯ ಅಂಚಿನಲ್ಲಿ ದೂಡಿರುವುದು, ಇಂತಹ ಸ್ಥಿತಿಯಲ್ಲಿ ಶ್ರೀಮಂತರು ಶ್ರೀಮಂತರಾಗುತ್ತಾ ಹೋಗುವುದು, ಬಡವರು ಮತ್ತಷ್ಟು ಬಡವರಾಗುವುದು ನಮ್ಮ ಆಡಳಿತ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ. ಅನೇಕ ದಾರ್ಶನಿಕರು ಅಭಿಪ್ರಾಯ ಪಟ್ಟಿರುವಂತೆ ಅಭಿವೃದ್ಧಿ ಯೋಜನೆಗಳು ಆಯಾ ಸಮುದಾಯ, ಪ್ರಾದೇಶಿಕತೆಗನುಗುಣವಾಗಿ ರೂಪಿಸುವಂತಾಗಬೇಕು. ಅಭಿವೃದ್ಧಿಯ ಫಲಗಳನ್ನು ಸಮುದಾಯದ ಕಟ್ಟಕಡೆಯವನನ್ನು ಸಹ ನಿರಂತರ ಸಂಪರ್ಕವನ್ನಿಟ್ಟು ಕೊಂಡು ಯೋಜನೆಗಳ ಜೊತೆ ಒಡನಾಡಬೇಕು, ಪ್ರತಿಫಲ ಪಡೆಯುವಂತಾಗಬೇಕು.

ಶತ–ಶತಮಾನಗಳಿಂದಲೂ ಅಲೆಮಾರಿತನ ಜೀವನವನ್ನು ಕಳೆಯುತ್ತಾ ಬಂದಂತಹ ಗೊಂದಲಿಗರಂತಹ ಹಲವಾರು ಸಮುದಾಯಗಳು ಆಧುನಿಕತೆ ನಾಗರೀಕತೆಯ ವೈಪರೀತ್ಯಗಳ ಮಧ್ಯದಲ್ಲಿ ಮುಖ್ಯವಾಹಿನಿಯಲ್ಲಿ ಸೇರ್ಪಡೆಯಾಗಬೇಕಾದರೆ ಅವರು ಎದುರಿಸುತ್ತಿರುವ ಸಮಸ್ಯೆಗಳು ಅಡ್ಡಿಯಾಗಿವೆ. ಜನ ಸಮುದಾಯದ ಮಧ್ಯದಲ್ಲಿಯೆ ಬದುಕುತ್ತಿರುವ ಗೊಂದಲಿಗರಲ್ಲಿಯೇ ಅನೇಕರು ಮುಖ್ಯವಾಹಿನಿಯಿಂದ ದೂರ ಉಳಿದಿದ್ದಾರೆ. ಸಂವಿಧಾನ ಬದ್ಧವಾಗಿ ಸಿಗಬೇಕಾದ ಮೂಲಬೂತ ಸೌಲಭ್ಯಗಳನ್ನು ಪಡೆದುಕೊಳ್ಳಲು ಆಗುತ್ತಿಲ್ಲ. ತನ್ನದೆಯಾದ ಮನೆ, ಭೂಮಿ, ಉದ್ಯೋಗ, ಶಿಕ್ಷಣ, ಸಮಾಜದಲ್ಲಿ ಗೌರವಯುತವಾದ ಬದುಕಲು ಅವಕಾಶವಿಲ್ಲದೇ ಸಂಕಷ್ಟವನ್ನು ಅನುಭವಿಸುತ್ತಿದ್ದಾರೆ. ಜಾಗತೀಕರಣದಂತಹ ಸಂದರ್ಭದಲ್ಲಿ ಸಾವಿರಾರು ಉದ್ಯೋಗ ಅವಕಾಶಗಳು ಸೃಷ್ಟಿಯಾಗಿದ್ದರೂ ಅದಕ್ಕೆ ಅನುಗುಣವಾಗಿ ವಿಶಿಷ್ಟ ಪ್ರಾವಿಣ್ಯತೆ ಆಧಾರಿತ ಶಿಕ್ಷಣವನ್ನು ಈ ಜನಾಂಗದ ಯುವಕರು ಪಡೆದುಕೊಂಡಿಲ್ಲ. ಕಾರಣ ಶಿಕ್ಷಣ ಮತ್ತು ಆರ್ಥಿಕ ಸಬಲತೆ ಇಲ್ಲದೇ ಬೀಸುತ್ತಿರುವ ಆಧುನಿಕತೆಯ ಗಾಳಿ ಈ ಸಮುದಾಯದ ಬದುಕಿನಲ್ಲಿ ಅಷ್ಟು ತೀವ್ರವಾದ ಆರೋಗ್ಯಕರವಾದ ಬದಲಾವಣೆಗಳನ್ನು ತಂದಿಲ್ಲ ಎಂದು ಹೇಳಬೇಕು.

"ಯಾವದೇ ಒಂದು ರಾಷ್ಟ್ರದ ಅಭಿವೃದ್ಧಿ ಆ ರಾಷ್ಟ್ರದ ಆರ್ಥಿಕ ಸ್ಥಿತಿ–ಗತಿಯ ಮೇಲೆ ಅವಲಂಬಿತವಾಗಿರುತ್ತದೆ. ಅದು ಕೇವಲ ಬಂಡವಾಳ ಹೂಡಿಕೆ, ತಂತ್ರಜ್ಞಾನ ಹಾಗೂ ಶ್ರಮಶಕ್ತಿಯಿಂದ ಕೂಡಿದ ಉತ್ಪಾದನಾಂಗಗಳ ಪೂರೈಕೆ ಮೇಲೆ ಅವಲಂಬಿತವಾಗಿರುವದಿಲ್ಲ. ಬದಲಾಗಿ ಸಾಮಾಜಿಕ–ಆರ್ಥಿಕ ಸಮಸ್ಯೆಗಳ ನಿವಾರಣೆಯ ಮೇಲೆ ಅವಲಂಬಿತವಾಗಿರುತ್ತದೆ. ಏಕೆಂದರೆ ಆರ್ಥಿಕ ಸ್ಥಿತಿಗತಿ ಎನ್ನುವದು ಜನರ ಜೀವನದ ಒಂದು ಸಾಮಾಜಿಕ ಸಮಷ್ಟಿಯಾಗಿದ್ದು, ಒಂದಕ್ಕೊಂದು ಸಂಬಂಧ ಹೊಂದಿರುತ್ತದೆ ಮತು ಒಂದಕ್ಕೊಂದು ಅವಲಂಬಿತವಾಗಿರುತ್ತದೆ".[೨] ದೇಶದ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಕಂಡುಬರುವ ಅದರಲ್ಲೂ ಸಮುದಾಯಗಳು ಎದುರಿಸುವ ಸಮಸ್ಯೆಗಳ ನಿವಾರಣೆಗೆ ಆದ್ಯತೆ ಕೊಡಬೇಕು. ಈ ಹಿನ್ನೆಲೆಯಲ್ಲಿ ಅವೈಜ್ಞಾನಿಕ ಮೀಸಲಾತಿಯನ್ನು ಪುನರ್ ವಿಮರ್ಶಿಸಿ, ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಕ್ರಮಕೈಗೊಳ್ಳುವದರ ಜೊತೆಗೆ ಅವಶ್ಯಕ ಅನುಕೂಲಗಳಾದ ಶಿಕ್ಷಣ, ವಸತಿ, ಉದ್ಯೋಗ ಅವಕಾಶಗಳನ್ನು ಪಡೆದುಕೊಳ್ಳುವಂತಾಗಬೇಕು. ಹಾಗೆಯೇ ಸಾಮುದಾಯಿಕ ವಾಗಿಯೂ ಪ್ರತಿಸ್ಪಂದನೆಯ ರೀತಿಯಲ್ಲಿ ಗೊಂದಲಿಗರಲ್ಲಿ ಶಿಕ್ಷಣ–ಸಂಘಟನೆ–ಹೋರಾಟದ ತತ್ವಗಳಡಿಯಲ್ಲಿ ಜಾಗೃತರಾಗುವದವಶ್ಯಕ.

**ಅಡಿಟಿಪ್ಪಣಿಗಳು**

೧. ಗುಪ್ತಚಾರ ಪತ್ರಿಕೆಯಲ್ಲಿ ವರದಿ, ಸಂಪುಟ–೨೩, ಸಂಚಿಕೆ–೧ ದಿ. ೪.೧.೧೦ರ ೪ನೇ ಪು.
೨. ಹಿರೇಮಠ ಎಸ್.ಜಿ., ಸಾಮಾಜಿಕ ಸಮಸ್ಯೆಗಳು, ಪು. ೧೦, ೨೦೦೭
೩. ಬಸವರಾಜ ಎಸ್. ಹಿರೇಮಠ, ಅಂಜಲಿ ಸಾಳುಂಕೆ., ಘಿಸಾಡಿ, ಪು. ೧೪೪–೧೪೫, ೨೦೦೮
೪. ಹಿರೇಮಠ ಎಸ್.ಜಿ., ಸಾಮಾಜಿಕ ಸಮಸ್ಯೆಗಳು, ಪು. ೧೦, ೨೦೦೭

೫. ಅದೇ, ಪು. ೧೧.

೬. ಗುರುಲಿಂಗಯ್ಯ ಎಂ., ಕರ್ನಾಟಕದ ಗೊಲ್ಲ ಸಮುದಾಯ, ಪು. ೧೧೨, ೨೦೦೫

೭. ನಾಗರಾಜ ಕುಪ್ಪೆ, ದೊಂಬಿದಾಸ ಪು. ೧೨೧–೧೨೨, ೨೦೦೮

೮. ಬೈರಪ್ಪ ಕೆ., ಸಮಗ್ರ ಭಾರತೀಯ ಸಮಾಜ, ಪು. ೧೯೩–೧೯೪, ೨೦೦೮

೯. ಹಿರೇಮಠ ಎಸ್.ಜಿ., ಸಾಮಾಜಿಕ ಸಮಸ್ಯೆಗಳು, ಪು. ೧೦೧, ೨೦೦೭

೧೦. ಎ.ಎಸ್.ಪ್ರಭಾಕರ, ಆದಿವಾಸಿ ಆಖ್ಯಾನ (ಸಂ.) ಎ.ಎಸ್. ಪ್ರಭಾಕರ, ಪು. ೪೩೩, ೨೦೦೬

೧೧. ಇಂದಿರಾ ಆರ್., ಅದೇ, ಪು. ೪೯೨

೧೨. ಉಮಾ ವಿ. ಪಾಕರೆ, ವಾಲ್ಮೀಕಿ ಸಮುದಾಯ, (ಸಂ.) ಮಂಜುನಾಥ ಬೇವಿನಕಟ್ಟಿ, ಪು. ೬೭, ೨೦೦೯,

ಅಧ್ಯಾಯ ಎಂಟು

# ಉಪಸಂಹಾರ

ಗೊಂದಲಿಗರು ಸಾಮಾನ್ಯವಾಗಿ ಕರ್ನಾಟಕದುದ್ದಗಲಕ್ಕೂ ಕಂಡುಬರುತ್ತಿದ್ದರೂ, ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಹೆಚ್ಚು ನೆಲೆ ಕಂಡುಕೊಂಡಿರುವ ಅರೆಅಲೆಮಾರಿ ಸಮುದಾಯವಾಗಿದೆ. ಈ ಹಿನ್ನೆಲೆಯಲ್ಲಿ ಬದಲಾವಣೆಯ ಆಧುನಿಕತೆಯ ಸಂದರ್ಭದಲ್ಲಿ ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ ಗೊಂದಲಿಗರ ಕುರಿತಾದ ಅಧ್ಯಯನವನ್ನು ಕೈಗೊಂಡಿದ್ದು, ಪ್ರಸ್ತುತ ಪರಂಪರೆ ಮತ್ತು ಆಧುನಿಕತೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

ಅಲೆಮಾರಿತನದಲ್ಲಿಯೇ ಪ್ರಾರಂಭವಾದ ಮಾನವನ ಬದುಕು, ಆಹಾರದ ನಿಶ್ಚಿತ ಮತ್ತು ಸಮೃದ ಅವಕಾಶಗಳು ಗುರುತಿಸಲ್ಪಟ್ಟ ಮೇಲೆ ತನ್ನ ಅಲೆದಾಟವನ್ನು ಸ್ಥಗಿತಗೊಳಿಸಿ, ಅಲ್ಲಲ್ಲಿ ನೆಲೆ ನಿಂತು ಆ ಮೂಲಕ ಹಳ್ಳಿ, ಊರುಗಳನ್ನು ನಿರ್ಮಿಸಿಕೊಂಡನು. ಪರಿಣಾಮ ಬಹುಸಂಖ್ಯಾತ ಮಾನವ ಸಮೂಹಗಳು ಒಂದೆಡೆ ನೆಲೆ ನಿಂತರೂ, ಕೆಲವು ಮಾನವ ಸಮೂಹಗಳು ಅತಂತ್ರ ಬದುಕು ಹಾಗೂ ನಿರ್ವಹಿಸುವ ವೃತ್ತಿಗಳಿಂದ ಇಂದಿನವರೆಗೂ ತಮ್ಮ ಅಲೆಮಾರಿತನವನ್ನು ಮುಂದು ವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ತಮ್ಮ ವೃತ್ತಿಯ ನಿರ್ವಹಣೆಗಾಗಿ ಅಲೆದಾಟದಲ್ಲಿಯೇ ತೊಡಗಿಕೊಂಡಿರುವ, ನಿಲ್ಲಲು ನೆಲೆಯಿಲ್ಲದೆ ಬದುಕನ್ನು ಕಳೆಯುತ್ತಿರುವ ಅನೇಕ ಅಲೆಮಾರಿ ಸಮುದಾಯಗಳು ಬದಲಾಗಿರುವ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸಂದರ್ಭದಲ್ಲಿ ವೃತ್ತಿಗಳು ಪಲ್ಲಟಗೊಂಡಿದ್ದು, ಜೀವನಶೈಲಿಯಲ್ಲಿಯೂ ಬದಲಾವಣೆಗಳು ಗೋಚರಿಸುತ್ತಿವೆ. ಅದೇರೀತಿ ಅಲೆಮಾರಿಗಳಾಗಿ ಈಗೀಗ ಅಲ್ಲಲ್ಲಿ ನೆಲೆಕಂಡುಕೊಳ್ಳಲು ಪ್ರಯತ್ನಿಸುತ್ತಾ ನಿರ್ದಿಷ್ಟ ಊರೊಂದನ್ನು ಆಯ್ಕೆ ಮಾಡಿಕೊಂಡು ಆ ಮೂಲಕ ಸ್ಥಿರತೆಯ ನೆಲೆಯನ್ನು ಕಂಡುಕೊಂಡಿದ್ದರೂ, ವೃತ್ತಿ

ನಿರ್ವಹಣೆಗಾಗಿ ವರ್ಷದ ಬಹುಪಾಲು ಅವಧಿಯನ್ನು ಅಲೆಮಾರಿತನದಲ್ಲಿಯೇ ಕಳೆಯುವ ಗೊಂದಲಿಗರು ಅರೆಅಲೆಮಾರಿ ಸಮುದಾಯದವರಾಗಿದ್ದಾರೆ.

ಧಾರ್ಮಿಕ ವೃತ್ತಿ ಗಾಯಕ ವರ್ಗದಲ್ಲಿ ಬರುವ ಗೊಂದಲಿಗರು ಮಾತೃದೇವತಾರಾಧಕರಾಗಿದ್ದು, ದೇವಿಸ್ತುತಿ, ಹಾಡು-ಕಥೆಗಳನ್ನು ಹೇಳುತ್ತಾ, ಗೊಂದಲ ಪೂಜೆಯ ವಿಶೇಷ ಆಚಾರಕರಾಗಿ, ಬುಡಬುಡಿಕೆ, ಜೋತಿಷ್ಯ ಹೇಳುತ್ತಾ ಬದುಕನ್ನು ಕಟ್ಟಿಕೊಂಡು ಬಂದವರಾಗಿದ್ದಾರೆ. ವೃತ್ತಿ ಹಿನ್ನೆಲೆಯಲ್ಲಿ ಅಲೆಮಾರಿಗಳಾಗಿರುವ ಗೊಂದಲಿಗರು ಭಿಕ್ಷುಕವರ್ಗವೆಂದೇ ಗುರುತಿಸಿಕೊಂಡಿರುವರು. ಪರಿಣಾಮ ಗೊಂದಲಿಗರು ಆರ್ಥಿಕ ಸ್ಥಿರತೆಯಿಲ್ಲದೇ ಜೀವನೋಪಾಯದ ಸಂಕಷ್ಟಗಳನ್ನು, ಸಮಸ್ಯೆಗಳನ್ನು ಎದುರಿಸುತ್ತಾ ಬಂದಿದ್ದಾರೆ.

ಇಂದಿನ ಆಧುನಿಕ ಕಾಲದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿ ಕಂಡು ಬರುತ್ತಿರುವ ಸ್ಥಿತ್ಯಂತರಗಳಲ್ಲಿ ಪ್ರತಿಯೊಂದು ಸಮುದಾಯಗಳು ಬದಲಾವಣೆಗೆ ಒಳಗಾಗುತ್ತಿವೆ. ಹಾಗೆಯೇ ಗೊಂದಲಿಗರು ಸಹ ಕಂಡು ಬರುತ್ತಿರುವ ಬದಲಾವಣೆಗಳಿಗೆ ತಮ್ಮನ್ನು ತಾವು ತೆರೆದುಕೊಳ್ಳುತ್ತಾ ಆ ಮೂಲಕ ಬದಲಾವಣೆಗೆ ಅಣಿಯಾಗಿದ್ದಾರಷ್ಟೆ ಅಲ್ಲ, ಬದಲಾವಣೆಗೂ ಒಳಗಾಗಿದ್ದಾರೆ.

### ೮.೧. ಅಧ್ಯಯನದ ಫಲಿತಗಳು

೧. ಅನೇಕ ವಿದ್ವಾಂಸರು ಗೊಂದಲಿಗರು ಮಹಾರಾಷ್ಟ್ರ ಮೂಲದವರು ಎಂಬ ವಾದವನ್ನು ಮಾಡಿದ್ದರೂ ಪ್ರಾಚೀನ ಕರ್ನಾಟಕದ ಭೌಗೋಳಿಕ ವಿಸ್ತರಣೆಯ ಹಿನ್ನೆಲೆಯಲ್ಲಿ ಮೂಲತಃ ಕರ್ನಾಟಕದವರು ಎಂದೇ ಹೇಳಲಾಗುತ್ತದೆ.

೨. ಮಾತೃದೈವಗಳನ್ನೇ ತಮ್ಮ ಆರಾಧ್ಯದೈವವಾಗಿ ಆರಾಧಿಸುವ ಗೊಂದಲಿಗರಲ್ಲಿ ಬುಡಬುಡಿಕೆ, ಜೋತಿಷ್ಯಗಳು, ಅರೆಪಂಚಾಗದವರು, ಭಾಟರು, ಸಿಂಗದವರು, ವಾಸುದೇವರು, ಗಿಳಿಶಾಸ್ತ್ರದವರು, ಭೂತೇರು ಎಂಬ ಉಪಪಂಗಡಗಳಿವೆ.

೩. ಗೊಂದಲಿಗರು ತಮ್ಮದೇ ಆದ ಸೃಷ್ಠಿ ಪುರಾಣಗಳನ್ನು ಹೊಂದಿದ್ದಾರೆ. ಅಲ್ಲದೆ ಮಾತೃದೇವತೆಯ ವಂಶಸ್ಥರೆಂದು ಎಂದು ಬಿಂಬಿಸಿಕೊಳ್ಳುತ್ತಾರೆ. ಬುಡಬುಡಿಕೆಯವರು ದೇವಿಯ ಕೃಪೆಯಿಂದ ಪಡೆದುಕೊಂಡ ವಸ್ತುವಿನಿಂದಲೇ ಜೀವನೋಪಾಯವನ್ನು ಕಂಡುಕೊಂಡಿದ್ದೇವೆ ಎಂಬ ನಂಬಿಕೆಯನ್ನು ಹೊಂದಿದ್ದಾರೆ.

೪. ಸಮೂಹ, ಭಜನೆ, ಮೇಳ ಎನ್ನುವ ಅರ್ಥವನ್ನು ಹೊಂದಿರುವ, ಜನರನ್ನು ಸೇರಿಸಿ ದೈವಿ ಕಥೆಯನ್ನು ಪ್ರಸರಿಸುವ ಕಾರ್ಯವೇ ಮೂಲ ಉದ್ಧೇಶವನ್ನು ಹೊಂದಿರುವ 'ಗೊಂದಲ' ಪೂಜಾರಾಧನೆಯ ಹಿನ್ನೆಲೆಯಲ್ಲಿಯೇ ಈ ಸಮುದಾಯಕ್ಕೆ ಗೊಂದಲಿಗರು ಎಂದು ಹೆಸರು ಬಂದಿದೆ ಎಂಬ ಪ್ರತೀತಿ.

೫. ವೃತ್ತಿಗಾಯನದ ಮೂಲಕ ವಿಶಿಷ್ಟ ಸಂಸ್ಕೃತಿಯನ್ನು ಅನುಸರಿಸುತ್ತಾ ಬಂದಿರುವ ಧಾರ್ಮಿಕ ವೃತ್ತಿ ಗಾಯಕರಾಗಿರುವ ಗೊಂದಲಿಗರು ಪ್ರದರ್ಶನ ಕಲೆಯನ್ನು ಅನುಸರಿಸುವವರಾಗಿದ್ದಾರೆ.

೬. ಗೊಂದಲಿಗರು ತಮ್ಮಲ್ಲಿರುವ ಕಲೆಯನ್ನು ಪ್ರದರ್ಶನ ಮಾಡಿ ಆ ಮೂಲಕ ಭಿಕ್ಷೆ ಬೇಡುತ್ತಾ ಬಂದವರು. ಬುಡಬುಡಿಕೆಯವರು, ಅರೆಪಂಚಾಗದವರು ಜ್ಯೋತಿಷ್ಯ ಹೇಳುವವರು ನೇರವಾಗಿ ಬೇಡಲಿಕ್ಕಾಗದೇ ಈ ರೀತಿಯ ಶಾಸ್ತ್ರ-ಶಕುನದ ಮೂಲಕ ಉಪಜೀವನದ ಮಾರ್ಗ ಕಂಡು ಕೊಂಡವರು.

೭. ಗೊಂದಲ ಪೂಜೆಯನ್ನು ಈಗಲೂ ಮದುವೆ, ಮುಂಜಿವೆ, ಕಷ್ಟಗಳ ನಿವಾರಣೆಯ ಸಂದರ್ಭದಲ್ಲಿ ನೇರವೇರಿಸುತ್ತಾರೆ.

೮. ವಿಶಿಷ್ಟ ಸಾಮಾಜಿಕ ಹಿನ್ನೆಲೆಯನ್ನು ಹೊಂದಿರುವ ಗೊಂದಲಿಗರಲ್ಲಿ ಸಾಮಾನ್ಯವಾಗಿ ಬುಡಕಟ್ಟು ಲಕ್ಷಣಗಳೇ ಎದ್ದು ಕಂಡುಬರುತ್ತಿದ್ದು, ಬಲವಾದ ರಕ್ತಸಂಬಂಧವನ್ನು ಹೊಂದಿರುವ ಅವರಲ್ಲಿ ಕೌಟುಂಬಿಕ ಸಂಬಂಧಗಳು ಆಳವಾಗಿದ್ದು ಪ್ರಾರಂಭದಿಂದಲೂ ಅವಿಭಕ್ತ ಕುಟುಂಬಗಳನ್ನೇ ಹೊಂದಿದ್ದರು. ಬದಲಾದ ಸನ್ನಿವೇಶದಲ್ಲಿ ವಿಭಕ್ತ ಕುಟುಂಬಗಳು ಕಂಡುಬರುತ್ತಿವೆ.

೯. ಕುಲ-ಬೆಡಗುಗಳ ನಂಬಿಕೆಯಿರುವ ಗೊಂದಲಿಗರಲ್ಲಿ ಒಂದೇ ಬೆಡಗಿನವರು ರಕ್ತಸಂಬಂಧಿಕ ರಾಗಿರುವದರಿಂದ ಸಗೋತ್ರ ವಿವಾಹ ನಿಷಿದ್ಧವಾಗಿದೆ.

೧೦. ಸಮುದಾಯದಲ್ಲಿ ಮರಾಠಿ ಭಾಷೆಯು ಪ್ರಮುಖವಾಗಿ ಕಂಡುಬರುತ್ತಿದ್ದರೂ, ಸ್ಥಳೀಯ ಭಾಷೆಗಳನ್ನು ಮಾತನಾಡುತ್ತಾರೆ. ಗೊಂದಲಿಗರ ಜೊತೆಗಷ್ಟೇ ಮಾತ್ರ ಮಾತನಾಡುವ ಖಿವಾರಿ ಭಾಷೆಯು ಸಮುದಾಯದವರಿಗೆ ಮಾತ್ರ ಅರ್ಥವಾಗುತ್ತದೆ. ಈ ಭಾಷೆಗೆ ಲಿಪಿ ಇಲ್ಲ. ಇತ್ತಿತ್ತಲಾಗಿ ಸಮುದಾಯದಲ್ಲಿ ಈ ಭಾಷೆಯನ್ನು ಕಡೆಗಣಿಸಲಾಗುತ್ತಿದೆ.

೧೧. ಬುಡಕಟ್ಟು ಲಕ್ಷಣಗಳನ್ನು ಹೊಂದಿರುವ ಗೊಂದಲಿಗರಲ್ಲಿ ಕುಲ ಪಂಚಾಯತಿ, ನ್ಯಾಯ ಪಂಚಾಯತಿ ವ್ಯವಸ್ಥೆಯು ಈಗಲೂ ಕಟ್ಟುನಿಟ್ಟಿನಿಂದ ಕೂಡಿದ್ದು, ತಮ್ಮಲ್ಲಿ ಕಂಡುಬರುವ ಯಾವುದೇ ವ್ಯಾಜ್ಯಗಳನ್ನು, ಜಗಳಗಳನ್ನು ನ್ಯಾಯಾಲಯ, ಪೋಲಿಸ ಸ್ಟೇಶನ್‌ಗೆ ಹೋಗದೇ ನ್ಯಾಯ ಪಂಚಾಯತಿಯಲ್ಲಿಯೇ ಬಗೆಹರಿಸಿಕೊಳ್ಳುತ್ತಾರೆ.

೧೨. ಅಲೆಮಾರಿಗಳಾಗಿರುವ ಗೊಂದಲಿಗರು ಯಾವದೇ ಊರಿಗೆ ಹೋದಾಗ ಸಾಮಾನ್ಯವಾಗಿ ಊರ ಹೊರಗಿನ ಬಯಲು ಪ್ರದೇಶಗಳಲ್ಲಿ, ಗುಡಿ-ಗುಂಡಾರಗಳಲ್ಲಿ, ಊರಿನ ಸಮೀಪವಿರುವ ಹೊಲಗಳಲ್ಲಿ ತಾಡಪಾಲು. ಗರಿಗಳಿಂದ ರೂಪಿಸಿದ ಪ್ಲಾಸ್ಟಿಕ್ ಹಾಳೆಯಿಂದ ಆವೃತವಾಗಿರುವ ಗುಡಿಸಲಿನ ಮನೆಗಳನ್ನು ತಾತ್ಪೂರ್ತಿಕವಾಗಿ ರಚಿಸಿಕೊಂಡಿದ್ದಾರೆ. ಅಲ್ಲಲ್ಲಿ ನೆಲೆಗೊಂಡ ಊರಿನ ತಮ್ಮ ಸಮುದಾಯದವರಷ್ಟೇ ಇರುವ ಓಣಿಗಳಲ್ಲಿ ಬಡತನದ ಸ್ಥಿತಿಯಲ್ಲಿರುವವರು ಈಗಲೂ ಇಂತಹ ಗುಡಿಸಲುಗಳಲ್ಲಿಯೇ ವಾಸಿಸುತ್ತಿದ್ದಾರೆ. ಸ್ಥಿತಿವಂತರಾದವರು ಮನೆಯನ್ನು

